# ಹೃದಯ ಸಂವಾದ

(ಕವಿ-ಕಾವ್ಯ ವಿಮರ್ಶೆ)

ಸುಜನಾ



ಮೈತ್ರೀ ಪ್ರಕಾಶನ
ಮೈಸೂರು-12

(ಕವಿ-ಕಾವ್ಯ ವಿಮರ್ಶೆ)



ಸುಜನಾ



ಮೈತ್ರೀ ಪ್ರಕಾಶನ
ಮೈಸೂರು–12

ಶಿಷ್ಯವತ್ಸಲರಾದ

ಪೂಜ್ಯ ಆಚಾರ್ಯರಾದ

**ಶ್ರೀ ತೀ.ನಂ. ಶ್ರೀ—ಶ್ರೀ ಡಿ. ಎಲ್. ಎನ್**

ಅವರ

ನಿರಾಡಂಬರ ನಿಷ್ಠಾವಂತ ಸಾಧನಶೀಲ ವ್ಯಕ್ತಿತ್ವಕ್ಕೆ

ವಿನಮ್ರ ಪ್ರೀತಿಗೌರವ ಪೂರ್ವಕವಾಗಿ ಅರ್ಪಿತ

# ಅರಿಕೆ

ಹದಿನಾಲ್ಕು ವರ್ಷಗಳ ಹಿಂದೆ ಶ್ರೀ ಕುವೆಂಪು ಅವರು ಮೊದಲನೆಯ ಆನರ್ಸ್ ತರಗತಿಯಲ್ಲಿ ಪಂಪಭಾರತವನ್ನು ಪಾಠ ಹೇಳುವಾಗ ನನ್ನ ಮನಸ್ಸಿಗೆ ಕಾವ್ಯಾಸ್ವಾದನಪಥವೊಂದು ತೋರಿಬಂತು. ಮುಂದಿನ ತರಗತಿಗಳಲ್ಲಿ ಅವರು ಕಾವ್ಯಮೀಮಾಂಸೆಯನ್ನು ಬೋಧಿಸುವಂದು ನನಗಾದಾರಿ ಸುಸ್ಪಷ್ಟವಾಗುತ್ತ ಬಂತು. ಈ ಮುಂದಿನ ಪ್ರಬಂಧಗಳಲ್ಲಿ ಪಡಿಮೆಗೊಂಡಿರುವ ಭಾವ ವಿಚಾರಗಳೇನಿದ್ದರೂ ಅವರು ಅಂದು ನನ್ನ ಮನಸ್ಸಿನಲ್ಲಿ ಊರಿದ್ದ ಬಿತ್ತನೆಯ ಫಲವೆ, ಅವರ ದೋಹದದ ಫಲವೆ ಆಗಿವೆ. ಈ ವಿಚಾರವಾಗಿಯೂ ನಾನವರಿಗೆ ಎಷ್ಟು ಋಣಿಯಾಗಿದ್ದೇನೆಯೋ ನನಗೆ ತಿಳಿಯದು. ಗುರು ತೋರಿದ ಈ ಕಾವ್ಯಾನುಭವಮಾರ್ಗದಲ್ಲೆ ಮುಂದೆ ನನ್ನ ಮೆಚ್ಚಿನ ಭಕ್ತಿಯ ಪ್ರಾಚೀನ ಅರ್ವಾಚೀನ ಕಾವ್ಯಗಳನ್ನೆಲ್ಲ ನಡೆಸಿ ತರಬೇಕೆಂದು ಪ್ರಬಲವಾದ ಬಯಕೆಯಿದೆ. ಅದರ ಸಾಫಲ್ಯ ಇಂದಿನ ಈ ಪ್ರಯತ್ನದ ಸಾರ್ಥಕ್ಯದಲ್ಲಿದೆಯಷ್ಟೆ.

ಈ ಪುಸ್ತಕವನ್ನು ನನ್ನ ಮತ್ತಿಬ್ಬರು ಪೂಜ್ಯ ಆಚಾರ್ಯರಿಗೆ ಅರ್ಪಿಸುವ ಬಯಕೆ ಬಹಳ ದಿನಗಳಿಂದಿತ್ತು. ಅವರಿಬ್ಬರು, ಒಬ್ಬೊಬ್ಬರೂ ಒಂದು ವಿಧವಾಗಿ ತಮ್ಮ ವಿದ್ವತ್ತಿನಿಂದ, ತಮ್ಮ ಪ್ರಾಮಾಣಿಕ ವ್ಯಾಸಂಗದ ನಿಷ್ಠೆಯಿಂದ ಮೇಲಾಗಿ ತಮ್ಮ ನಿರಾಡಂಬರವಾದ ಆರ್ಭಟವಿಲ್ಲದ ಶಿಷ್ಯವಾತ್ಸಲ್ಯದಿಂದ ನನಗೆ ಪೂಜ್ಯರಾಗಿದ್ದಾರೆ, ಪ್ರಿಯರಾಗಿದ್ದಾರೆ. ನನ್ನಂಥ ಅಶಿಸ್ತಿನ ಶಿಷ್ಯನ ಮೇಲೂ ಅವರು ತೋರಿರುವ ವೈಯಕ್ತಿಕ ಆಸಕ್ತಿ ವಾತ್ಸಲ್ಯಗಳು ನಮ್ರ ಕೃತಜ್ಞತೆಯಿಂದ ಮಾತ್ರವೆ ನೆನೆದುಕೊಳ್ಳಬೇಕಾದಂಥವು. ಅವರ ವಿದ್ವತ್ತು, ಖಚಿತಜ್ಞಾನ, ಸಂಶೋಧನ ನಿಷ್ಠೆಗಳೆಲ್ಲ ನನಗೆ ಎಟುಕದ ಆದರ್ಶಗಳೇ ಆದರೂ ಅವರ ನಿರಾಡಂಬರ ಶ್ರದ್ಧೆ ಶಿಷ್ಯಪ್ರೀತಿಗಳಂತೂ ನನ್ನನ್ನು ಸದಾ ಚೈತನ್ಯಗೊಳಿಸುತ್ತಲೆ ಇರುತ್ತವೆ. ಇವರಿಬ್ಬರೂ ನನಗೆ ಪರಸ್ಪರಪೂರಕವಾದ ಒಬ್ಬರೆ ಆಗಿದ್ದಾರೆ. 1948 ರ ವೇಳೆಯಲ್ಲಿ ಮೊದಲ ಬಾರಿಗೆ ನಾನು ಈ ಇಬ್ಬರನ್ನೂ ಕಂಡದ್ದು ಸೆಂಟ್ರಲ್ ಕಾಲೇಜಿನ ಯೂನಿಯನ್ ಹಾಲಿನಲ್ಲಿ—ಶ್ರೀ ಅವರ ಸ್ಮರಣಾರ್ಥವಾಗಿ ಏರ್ಪಡಿಸಿದ ಸಭೆಯಲ್ಲಿ. ಅಂದು ಬಹು ಹಿಂದೆ, ನಾಲ್ಕಾಣೆ ಪ್ರೇಕ್ಷಕರ ಗ್ಯಾಲರಿಯಲ್ಲಿ ಕುಳಿತುಕೊಂಡು

ನಾನವರನ್ನು ಕೇಳಿದೆ ನೋಡಿದೆ. ಆಗ ಅವರು ಹೇಗೆ ಕಂಡರೊ ಈಗಲೂ ಹಾಗೆಯೆ ಕಾಣುತ್ತಿದ್ದಾರೆ. ಆಗ ನಾನಂದುಕೊಂಡಿದ್ದೆ ಇವರಿಬ್ಬರು ಅಣ್ಣ ತಮ್ಮಂದಿರಿದ್ದಿರಬೇಕೆಂದು. ಸಹೋದರರಲ್ಲದಿದ್ದರೂ ಗುರುಸಹೋದರರಾದ ಅವರು ಅಂದು ಕಂಡಿದ್ದಂತೆಯೆ ಇದ್ದಾರೆ. ವ್ಯತ್ಯಾಸವಿಷ್ಟೆ, ಆಗವರಿಗೆ ಪೇಟ ಟೈಗಳಿದ್ದುವು–ಈಗಿಲ್ಲ. ಈ ನನ್ನ ಪ್ರಿಯಗುರುಗಳಿಗೆ ನನ್ನ ದೇಸಿ ಭಕ್ತಿಯ ಪ್ರತೀಕವಾಗಿ ಈ ಗ್ರಂಥವನ್ನರ್ಪಿಸುತ್ತೇನೆ. ಇದವರ ಪ್ರೀತಿಗೆ ಪಾತ್ರವಾದರೆ ನಾನಷ್ಟೆ ಧನ್ಯ.

ಈ ಹಿಂದೆಯೆ ಪ್ರಕಟವಾಗಿದ್ದ ಈ ಪ್ರಬಂಧಗಳು ಪುಸ್ತಕ ರೂಪದಲ್ಲಿ ಪೈ ಗೂಡಿಬರಲು ಕಾರಣರಾದವರು ನನ್ನ ಹಿತೈಷಿಗಳಾದ ಪ್ರಿಯಗುರುಗಳಿಬ್ಬರು. ಅವರು, ಇದಕ್ಕೆ ಪ್ರೇರಕರಾದ ಶ್ರೀ ದೇಜಗೌ ಅವರು ಹಾಗೂ ಪ್ರಕಾಶಕರಾಗಿ ಇದಕ್ಕೆ ಸಾಧಕರಾದ ಶ್ರೀ ಎಸ್. ವಿ. ಪರಮೇಶ್ವರ ಭಟ್ಟರು. ಈ ಇಬ್ಬರೂ ವಿದ್ಯಾಗುರುಗಳು ನನ್ನ ಶ್ರೇಯಸ್ಸಿನಲ್ಲಿ ತೋರಿರುವ ಆಸಕ್ತಿಗಾಗಿ ನಾನು ಕೃತಜ್ಞತಾಪೂರ್ವಕ ವಂದನೆಗಳನ್ನು ಸಲ್ಲಿಸುವೆ.

ಇಲ್ಲಿನ ಪ್ರಬಂಧಗಳಲ್ಲಿ ಕಡೆಯದೊಂದನ್ನುಳಿದೆಲ್ಲವೂ ಈ ಹಿಂದೆಯೆ ಪ್ರಬುದ್ಧ ಕರ್ಣಾಟಕದಲ್ಲಿ ಬೆಳಕುಕಂಡಿದ್ದವು. ಮಹಾರಾಜಾ ಕಾಲೇಜು ಹಾಸ್ಟೆಲ್ ವಾರ್ಷಿಕಸಂಚಿಕೆಯಲ್ಲಿ 'ಬಸವಣ್ಣನವರ ವಚನಗಳಲ್ಲಿ ಪ್ರಾಣಿರೂಪಕ' ಎಂಬ ಲೇಖನ ಮೊದಲಬಾರಿಗೆ ಪ್ರಕಟವಾಯಿತು. (1957). ಆಮೇಲೆ ಅದೇ ಲೇಖನ ಮತ್ತಷ್ಟು ಮೈಗೂಡಿಕೊಂಡು 'ದರ್ಶನ ವಿಮರ್ಶೆ' ಎಂಬ ಗ್ರಂಥದಲ್ಲಿ (ಸಂಪಾದಕರು : ಡಾ. ಜಿ. ಎಸ್. ಶಿವರುದ್ರಪ್ಪನವರು ಮತ್ತು ಡಾ. ಪ್ರಭುಶಂಕರ್ ಅವರು) ಪ್ರಕಟವಾಯಿತು. ಆಗಲೆ ಅದು ಪ್ರಬುದ್ಧಕರ್ಣಾಟಕದಲ್ಲೂ ಪ್ರಕಟ ಗೊಂಡಿತು. ಹಿಂದೆ ಬೆಳಕು ಕಂಡ ಬರಹಗಳು ಹೆಚ್ಚು ಪುಟಗೊಂಡು ಇಲ್ಲಿ ಪುಸ್ತಕವಾಗಿ ಮೈಪಡೆದು ಬಂದಿವೆ. ಹಿಂದೆ ಆ ಲೇಖನಗಳು ಪ್ರಕಾಶವಾಗಲು ಸಹಾಯರಾದ ಸಂಪಾದಕ ಮಿತ್ರರಿಗೆಲ್ಲ ನನ್ನ ಧನ್ಯವಾದಗಳು.

ಈ ಗ್ರಂಥ ಇಷ್ಟು ಬೇಗ ಇಷ್ಟು ಮುದ್ದಾಗಿ ಅಚ್ಚಾಗಿ ಬರಲು ನೆರವಾದ ಮಿತ್ರ ಶ್ರೀ ಜಿ. ಎಚ್. ಕೃಷ್ಣಮೂರ್ತಿ ಅವರಿಗೆ ಹಾಗೂ ಅವರ ಅಚ್ಚುಕೂಟದ ಸೇವಾವರ್ಗದವರಿಗೆ ನನ್ನ ಕೃತಜ್ಞತೆಗಳು.

೧–೯–೧೯೬೪

ಮೈಸೂರು

ಸುಜನಾ

# ಕೃತಜ್ಞತೆ

ಬೆಂಗಳೂರು ವಿಶ್ವವಿದ್ಯಾನಿಲಯದ ಎರಡನೆಯ ಬಿ.ಎ., ಬಿ.ಎಸ್‌ಸಿ. ತರಗತಿಗಳಿಗೆ ಈ ವರ್ಷ ಪಠ್ಯವಾಗಿ ನಿಯಮಿತವಾದುದರಿಂದ ಈ ಕೃತಿ ತಿದ್ದಿದ ಮುದ್ರಣ ಕಾಣುತ್ತದೆ. ಈ ಉಪಕಾರಕ್ಕಾಗಿ ಮಿತ್ರರಾದ ಡಾ. ಜಿ. ಎಸ್. ಶಿವರುದ್ರಪ್ಪನವರಿಗೂ ಡಾ. ಚಿದಾನಂದ ಮೂರ್ತಿ ಅವರಿಗೂ ಕೃತಜ್ಞನಾಗಿದ್ದೇನೆ.

ಸುಜನಾ

# ಪರಿವಿಡಿ

# ಶಾಕುಂತಲ ನಾಟಕದಲ್ಲಿ ಉಂಗುರದ ಪ್ರತಿಮೆ

ತನ್ನ ಏಕೈಕ ಶ್ರೇಷ್ಠ ಕೃತಿಯಾದ ಶಾಕುಂತಲ ನಾಟಕದಲ್ಲಿ ಕವಿ ಕಾಳಿದಾಸನು ತೋರಿರುವ ಪ್ರತಿಭೆ ಅನನ್ಯಸಾಧಾರಣವಾದುದು. ಸಹಜಪ್ರತಿಭೆಯೊಂದಿಗೆ ಸಾಧನಾಸಿದ್ಧವಾದ ಅಪ್ರಮಾದಶೀಲವಾದ ವಿವೇಕ ಕಲಾವಂತಿಕೆ ಪರಿಣತಿಗಳು ಅತ್ಯಂತ ಸುಮಧುರವಾಗಿ ಸಂಗಮವಾಗಿವೆ, ಅಲ್ಲಿ. ಒಮ್ಮೆ ಅವನ ಪ್ರಜ್ಞಾತೀತವಾದ ಪ್ರತಿಭೆ ಬೆರಗುಗೊಳಿಸಿದರೆ ಮತ್ತೊಮ್ಮೆ ಅವನ ಪ್ರಜ್ಞಾಜನ್ಯವಾದ ನಿರ್ಮಾಣಗಳು ಜಾಣ್ಮೆಗಳು ಚಮತ್ಕಾರಗಳು ಅಚ್ಚರಿಗೊಳಿಸುತ್ತವೆ. ಅಲ್ಲಿ ಅವನು ತೋರಿರುವ ವಾಕ್ ಸಂಯಮ ರೂಪಕಸಂಯಮ ಭಾವಸಂಯಮಗಳೆಲ್ಲವೂ ಪ್ರತಿಭಾ ಸಹಜಸಂಯಮವಾಗಿ ಬಂದಿವೆಯೆ ಹೊರತು ಅಶ್ರೀಮಂತಿಕೆಯಿಂದ ಬಂದ ಹೊಸಕದ ಬಿಗುಮಾನವಾಗಲ್ಲ. ಮಾತಿಗಿಂತಲೂ ಮೌನದಲ್ಲಿ, ಉಪಮೆಗಳಿಗಿಂತಲೂ ಸನ್ನಿವೇಶ-ಪ್ರತಿಮೆಗಳ ಮೂಲಕ ತನ್ನ ರಸಸಿದ್ಧಿಯನ್ನು ಕಂಡುಕೊಂಡಿದ್ದಾನೆ, ಕಂಡರಿಸಿದ್ದಾನೆ. 'ಉಪಮಾ ಕಾಳಿದಾಸಸ್ಯ' ಎಂಬ ಅತಿರೇಕದ ಮಾತು ಕಂಡುಕೊಂಡಿಲ್ಲದ ಪ್ರತಿಮಾಪ್ರತಿಭೆಯನ್ನು ಕಾಳಿದಾಸ ಈ ನಾಟಕದಲ್ಲಿ ಪ್ರದರ್ಶಿಸಿದ್ದಾನೆ. ಕಾಳಿದಾಸ ಉಪಮಾ ಚಕ್ರವರ್ತಿಯೆಂಬ ಭ್ರಮಾಜನ್ಯವಾದ ಅನ್ಯಕವಿ ಕಾವ್ಯಾಭ್ಯಾಸ ರಹಿತವಾದ ಭ್ರಾಮಕ ಭಾವನೆಗಳನ್ನು ಮೊದಲು ಬಿಟ್ಟುಬಿಟ್ಟು ಈ ಪ್ರತಿಮಾ ವಿವೇಚನೆಗೆ ಹೋಗುವುದು ಮೇಲು. ಅಂದರೆ, ಕಾಳಿದಾಸನ ಉಪಮಾ ಸರ್ವೋತ್ಕೃಷ್ಟತೆಯನ್ನು ಹೊಗಳುವವರು ಉಳಿದ ಕವಿಗಳನ್ನು–ವ್ಯಾಸವಾಲ್ಮೀಕಿಗಳ ದಿವ್ಯಪ್ರತಿಭೆಯು ಸೃಜಿಸಿರುವ ಅಕೃತಕ ಪ್ರಾಕೃತಿಕ ಶುದ್ಧ ಉಪಮಾಪ್ರಪಂಚವನ್ನು, ಇಂಗ್ಲೆಂಡಿನ ಷೇಕ್ಸ್‌ಪಿಯರ್ ಮಹಾದೈತ್ಯ ಕವಿಯ ಅನೂಹ್ಯರೂಪಕ ಲೋಕವನ್ನು, ಕನ್ನಡದವರೇ ಆದ ಬಸವಣ್ಣ ಕುಮಾರವ್ಯಾಸರ ಅದ್ಭುತವಾದ ದಿಗ್ಭ್ರಾಮಕ ರೂಪಕ ವಿಶ್ವವನ್ನು, ಅಥವಾ ಜಾನಪದ ಕಾವ್ಯದಲ್ಲಿ ಕಂಡುಬರುವ ನಿಸರ್ಗ ಸುಂದರವಾದ ಹಾಗೂ ನಾಗರಿಕ ಕವಿ ದುರ್ಲಭವಾದ ವಿಶಿಷ್ಟ ರೂಪಕ ಪ್ರಪಂಚವನ್ನೂ ಕಂಡಿಲ್ಲ ಎಂದಷ್ಟೆ ಹೇಳಬೇಕು. ವಸ್ತುತಃ ಶಾಕುಂತಲದಲ್ಲೆ ಎಷ್ಟು ಅಪೂರ್ವವಾದ, ಅಂದರೆ ಕಾಳಿದಾಸನಲ್ಲೆ ಪುನರುಕ್ತ ಪೂರ್ವೋಕ್ತವಲ್ಲದ, ಅನ್ಯ

ವಲ್ಲದ ಸುರಮ್ಯ ಉಪಮೆಗಳಿವೆ ? ಎಷ್ಟೆ ಧಾರಾಳಬುದ್ಧಿಯಿಂದ ಲೆಕ್ಕ ಹಾಕಿದರೂ ಇಪ್ಪತ್ತಕ್ಕಿಂತ ಹೆಚ್ಚಿಲ್ಲ. ಆದ್ದರಿಂದ ಉಪಮೆಗಳನ್ನೆ ವ್ಯರ್ಥವಾಗಿ ಹುಡುಕುವುದಕ್ಕಿಂತ ಮಿಗಿಲಾದ ಹೆಚ್ಚು ರಸಪ್ರಯೋಜನಕಾರಿಯಾದ ಕವಿ ಪ್ರತಿಮಾಸೃಷ್ಟಿಯನ್ನು ಕಾಣುವುದು ಯೋಗ್ಯ.

ಶಾಕುಂತಲ ನಾಟಕದಲ್ಲಿ ಉಪಮೆಗಳಿಗಿಂತಲೂ ಮಿಗಿಲಾಗಿ ಅತಿಶಯವಾಗಿ ಅಧಿಕ ಪರಿಣಾಮಕಾರಿಯಾಗಿ ಪ್ರತಿಮೆಗಳು ಬಂದಿವೆ. ನಾಟಕದ ಪ್ರಾರಂಭದ ಮೃಗಯಾಚಿತ್ರದಿಂದ ಹಿಡಿದು ಕೊನೆಯ ಅಂಕದ ಅಂಗುಲೀಯಕ ಪುನಃ ಪ್ರದಾನದವರೆಗೆ ಎಷ್ಟೆಲ್ಲ ಪ್ರತಿಮೆಗಳು ಬಂದಿಲ್ಲ! ಜಿಂಕೆಯ ಬೇಟೆ, ಧೂಳೆಬ್ಬಿಸಿ ಅಟ್ಟಿಕೊಂಡು ಬರುತ್ತಿರುವ ರಾಜರಥ, 'ಮಾಣ್ ಮಾಣ್'ಎನ್ನುತ್ತಿರುವ ತಪೋವನವಾಸಿಗಳ ವಾಣಿ, ಧರ್ಮಾರಣ್ಯದಲ್ಲಿ ಧರ್ಮವಿಘ್ನ ಪ್ರತಿರೂಪಿಯಾಗಿ ಬರುವ ಮದೇಭ, ಅನಸೂಯಾ ಪ್ರಿಯಂವದೆಯರು ದುಷ್ಯಂತ ತನ್ನ ಕೈಗಿಡುವ ಉಂಗುರವನ್ನು ಕುರಿತಾಡುವ ಮಾತು, ದುರ್ವಾಸ ಶಾಪಪ್ರಸಂಗ, ಕಣ್ವರು ಮೊದಲ ಬಾರಿಗೆ ಶಕುಂತಲೆಯ ಪ್ರೀತಿ ವೃತ್ತಾಂತ ತಿಳಿದೊಡನೆಯೆ ಆಡಿದ—ಹೊಗೆಯಿಂದ ಕಣ್ಣು ಮುಚ್ಚಿಹೋದರೂ ಹವಿಸ್ಸು ಯಜ್ಞಾಗ್ನಿಗೇ ಬಿದ್ದಿತು ಎನ್ನುವ ಮಾತು, ರಾಜನಿಗೆ ಅವರು ಹೇಳಿ ಕಳಿಸುವ ಮಾತಿನ ಧಾಟಿ, ಐದನೆಯ ಅಂಕದ ಪ್ರಾರಂಭದಲ್ಲೆ ಬರುವ ಆ ಹೃದಯ ವಿದ್ರಾವಕವಾದ ಗೀತೆ, ರಾಜಮಂದಿರವನ್ನು ಪ್ರಥಮ ಬಾರಿಗೆ ಕಂಡ ಋಷಿಕುಮಾರರು ಆಡುವ ಮಾತು, ಮುಂದೆ ಆರನೆಯ ಅಂಕದಲ್ಲಿ ಉಂಗುರ ದೊರೆಯುವ ಪ್ರಸಂಗ, ದೊರೆಯ ವಿಷಾದ, ಅಪೂರ್ಣ ವರ್ಣಚಿತ್ರದ ಮಾತು, ದೇವಲೋಕದಿಂದ ಇಳಿದು ಧೂಳೀರಹಿತವಾಗಿ ಹರಿದು ಬರುವ ರಥ, ಮೊದಲ ಅಂಕದ ನೆನಪನ್ನೆ ತಂದುಕೊಡುವ ಆದರೂ ಯುಗಾಂತರವನ್ನು ಕಾಣಿಸುತ್ತಿರುವ ಆ ತಪೋವನ ಪ್ರವೇಶ, ಶಕುಂತಲಾ ಸಮಾಗಮ—ಇತ್ಯಾದಿ ಹತ್ತಾರು ಕಾವ್ಯಪ್ರತಿಮೆಗಳು, ನಾನಾ ಅರ್ಥಪರಿವೇಷದ ನಾನಾ ವರ್ಗದ ಪ್ರತಿಮೆಗಳು ನಾಟಕದ ತುಂಬ ಇಟ್ಟಳಿಸುತ್ತವೆ.

ಈಗ, ನಮ್ಮ ಸದ್ಯವಿಚಾರ ವಿವೇಚನೆಗೆ ಬೇಕಾದುದು ಉಂಗುರದ ವೃತ್ತಾಂತ, ಅಂಗುಲೀಯಕ ಪ್ರತಿಮೆ. ಪ್ರತಿಮೆಯೆಂದು ಅರ್ಥವಾಗದಿದ್ದರೂ ಈ ಉಂಗುರ ವೃತ್ತಾಂತದ ವಾಚ್ಯಾರ್ಥವೆ, ತರಂಗಾರ್ಥವೆ ಅಷ್ಟು ಮೋಹಕವಾಗಿದೆ. ಅದರ ಅಂತರಂಗದ ಅಂತರಾರ್ಥ, ಪ್ರತಿಮಾರ್ಥ ಹೊಳೆದಾಗಲಂತೂ

ಅದರ ಮಹತ್ತ್ವ, ಹಾಗೂ ನಾಟಕದ ಪ್ರಭಾಮಂಡಲ ಮತ್ತೂ ಕಾಂತಿಮಯ ವಾಗುತ್ತದೆ, ನಿಸ್ಸೀಮವಾಗುತ್ತದೆ. ಈ ಉಂಗುರದ ವಾಚ್ಯನೀತಿಯಷ್ಟರಲ್ಲೆ ಮೊದಲು ವ್ಯವಹರಿಸಿ ಅದರ ಪ್ರತಿಮಾಧ್ವನಿಯತ್ತ ಆಮೇಲೆ ಸಾಗಬಹುದು.

ಉಂಗುರ ನಾಟಕವನ್ನೆಲ್ಲ ಒಂದಲ್ಲ ಒಂದು ವಿಧವಾಗಿ ಆವರಿಸಿ ಪ್ರಭುತ್ವ ನಡೆಸಿದೆ; ಎರಡು ಮೂರನೆಯ ಅಂಕವನ್ನು ಬಿಟ್ಟು ಉಳಿದ ಐದಂಕಗಳಲ್ಲೂ ಈ ವಾಮನಮೂರ್ತಿಯ ಅವಾಂತರವೆ ಅವಾಂತರ. ಪ್ರಜ್ಞಾಶೀಲನಾದ ಕವಿ ಆ ಕಾರಣದಿಂದಲೆ ಏನೊ ನಾಟಕಕ್ಕೆ ಬರಿ ಶಾಕುಂತಲ ಎಂದೊ ದುಷ್ಯಂತ ಶಾಕುಂತಲ ಎಂದೊ ಹೆಸರಿಡದೆ ಅಭಿಜ್ಞಾನ ಶಾಕುಂತಲ ಎಂದು ಧ್ವನಿಪೂರ್ವಕ ವಾದ ಹೆಸರಿಟ್ಟಿದ್ದಾನೆ.ಅನಂತರ ಇದರ ಔಚಿತ್ಯ ಮತ್ತೂ ಸುವೇದ್ಯವಾಗಬಹುದು

ಮೊದಲ ಅಂಕದಲ್ಲಿ ಉಂಗುರದ ಪ್ರಥಮ ಸಂದರ್ಶನವಾಗುವ ಸನ್ನಿವೇಶ ಹೀಗಿದೆ : ಕೋಮಲ ಕನ್ಯೆ ಶಕುಂತಲೆಯ ಪಾಲಿನ ನೀರನ್ನು ಗಿಡಗಳಿಗೆ ತಾನೆ ಎರೆಯುತ್ತೇನೆ ಎಂದು ಮುಂದೆ ಬಂದ ದುಷ್ಯಂತ ತನ್ನ ಕೈಬೆರಳ ಉಂಗುರವನ್ನು ಕಾರಣಾರ್ಥವಾಗಿಯೆ ಸಖಿಯರ ಕೈಯಲ್ಲಿ ಕೊಡುತ್ತಾನೆ. ಆ ಸನ್ನಿವೇಶದಲ್ಲಿ ಅವನು ತನ್ನ ನಿಜವೃತ್ತಾಂತವನ್ನಿನ್ನೂ ಹೇಳಿಕೊಂಡಿರುವುದಿಲ್ಲ. ಅದಿರಲಿ, ತನ್ನನ್ನು ಗೊತ್ತುಮಾಡಿಕೊಳ್ಳಬಾರದೆಂದೆ ತನ್ನ ವೃತ್ತಾಂತವನ್ನು ಕೇಳಿದ ಶಕುಂತಲೆಯ ಸಖಿಯರಿಗೆ ಉತ್ತರಕೊಡುವ ಮುನ್ನ ತನ್ನಲ್ಲಿ ನಾನು "ಈಗ ನನ್ನ ನಿಜಸ್ಥಿತಿಯನ್ನು ಹೇಗೆ ತಿಳಿಸಲಿ ! ಹೇಗೆ ತಾನೆ ಆತ್ಮವಂಚನೆ ಮಾಡಲಿ ! ಒಳ್ಳೇದು ; ಈಕೆಗೆ ಹೀಗೆ ಹೇಳುವೆನು" ಎಂದುಕೊಂಡು, ಆಮೇಲೆ ಅವರಿಗೆ "ಪುರುಕುಲದ ಅರಸರಿಂದ ಧರ್ಮಾಧಿಕಾರದಲ್ಲಿ ನಿಯುಕ್ತನಾದ ನಾನು, ಆಶ್ರಮ ವಾಸಿಗಳ ನಿರ್ವಿಘ್ನವಾದ ಕ್ರಿಯೆಯನ್ನು ತಿಳಿಯುವುದಕ್ಕೆ ಈ ಧರ್ಮಾರಣ್ಯಕ್ಕೆ ಬಂದಿರುವೆನು" ಎಂದು ಹೇಳುತ್ತಾನೆ. ಆದ್ದರಿಂದ ತನ್ನ ಹೆಸರನ್ನು ಕೆತ್ತಿರುವ ಆ ಉಂಗುರವನ್ನು ಕೊಟ್ಟಾಗ ಅದನ್ನು ನೋಡಿ ಮಾತನಾಡಿಕೊಳ್ಳುತ್ತಿದ್ದ ಸಖಿಯರಿಗೆ ತನ್ನ ನಿಜಸ್ಥಿತಿ ತಿಳಿದೀತಲ್ಲ ಎಂದು ಯೋಚಿಸಿ ದುಷ್ಯಂತ "ಈ ಉಂಗುರದ ದೆಸೆಯಿಂದ ಬೇರೆಯೆಣಿಸಬೇಡಿರಿ ; ನಾನು ರಾಜ ಸಂಬಂಧಿಯಾದ ಪುರುಷನು," ಎಂದು ಎರಡನೆಯ ಬಾರಿಗೆ ಅದೇ ಸುಳ್ಳನ್ನು ಮುಂದುವರಿಸ ಬೇಕಾಗುತ್ತದೆ. ಅನ್ಯಕಾರಣಗಳಿಂದಲೊ ನಿಷ್ಕಾರಣವಾಗಿಯೊ ಆತ ಒಮ್ಮೆ ಆಡಿದ ಸುಳ್ಳಿಗೆ ಮುಂದೆ ನಾಲ್ಕಾರು ಸುಳ್ಳು ಬರುತ್ತವೆ, ಅನೂಹ್ಯ ಅಘೋರ

ದುಃಖದ ಬೇಹುಗಾರರಾಗಿ. ಈ ಸಣ್ಣ ಸುಳ್ಳು ಹೇಳುವ ಬುದ್ಧಿಯ ಹಿಂದೆ ಯಾವ ಸ್ವಭಾವ ಇದ್ದೀತು ಎಂಬುದನ್ನು ಪ್ರತ್ಯೇಕವಾಗಿ ಮುಂದೆ ವಿವೇಚಿಸ ಬಹುದು. ಆದರಿಲ್ಲಿ ದುಷ್ಯಂತ ಹಾಗೆಂದೊಡನೆಯೆ ಅವನಿಗೆ ದೊರೆತ ಉತ್ತರ ಅವನ ಬಯಕೆಯನ್ನು ಹತ್ತಿಕ್ಕತಕ್ಕಂಥದಾಗಿತ್ತು : "ಹಾಗಿದ್ದರೆ ಈ ಉಂಗುರವು ಆರ್ಯನ ಅಂಗುಲಿಯನ್ನು ಅಗಲಕೂಡದು." ಪಾಪ ! ಗಡಿಗೆಯ ನೀರನ್ನು ಶಕುಂತಲೆಗೋಸ್ಕರವಾಗಿ ತಾನು ಸೇದುವ ಕಾರ್ಯವನ್ನು ಮಾಡುವುದಕ್ಕೆ ಮುನ್ನುಗ್ಗಿದ ಅವನ ಪ್ರಣಯಪ್ರಾರಂಭ ಹಾಗಾಗಬೇಕೆ ! ಅಯಾಚಿತವಾಗಿ ತಾನೆ ಮುಂದೆ ಬಂದ ಅವನು ಉಂಗುರವನ್ನು ಕಳಚಿಕೊಟ್ಟುದರಲ್ಲಿ ಅರ್ಥವಿದೆ ಒಂದು, ಗಡಿಗೆ ಹಿಡಿಯುವಾಗ ಅದು ಎಲ್ಲಿಯಾದರೂ ಬಿದ್ದೀತು ಅಥವಾ ಬಣ್ಣಗೆಟ್ಟೀತು ಎಂಬ ತೋರಿಕೆಯ ಕಾರಣ. ಆದರೆ ಅದರ ಇಂಗಿತ, ಹಾಗೆ ತನ್ನ ಉಂಗುರವನ್ನು ಕೊಡುವುದರ ಮೂಲಕ ಪ್ರಣಯವಾಹಕನನ್ನು ಆ ಸಖಿಯರ ಮೂಲಕ ತನ್ನ ಪ್ರೇಯಸಿಗೆ ತಲುಪಿಸಿದಂತಾಗುತ್ತದೆ, ಎಂಬುದು. ಅದೃಷ್ಟ–ಅವನು ತಾನೆ ನೇರವಾಗಿ ಆ ಉಂಗುರವನ್ನು ಮೊದಲ ಕಾರಣದಿಂದಲೆ ಆದರೂ ಶಕುಂತಲೆಯ ಕೈಯಲ್ಲಿ ಕೊಡುವುದಿಲ್ಲ, ಸಖಿಯರ ಕೈಯಲ್ಲಿತ್ತು. ಆದರೆ ಅದು ಹಾಗಾಯಿತು ; ಅವನ ನಿರೀಕ್ಷೆಗೆ ವಿರುದ್ಧವಾದ ಪರಿಣಾಮವಾಯಿತು. ಕಾರಣ, ಅವನು ತನ್ನ ಪ್ರಾರಂಭ ಪರಿಚಯದಲ್ಲೆ ನಿರ್ಭೀತಿಯನ್ನು ಪ್ರಾಮಾಣಿ ಕತೆಯನ್ನು ವ್ಯಕ್ತಗೊಳಿಸಲಿಲ್ಲ. ಪ್ರಣಯಪತ್ರ ವಿಳಾಸಕ್ಕೆ ತಲಪುವ ಮುನ್ನವೆ ಅಂಚೆಕಚೇರಿಯಿಂದಲೆ ಹಿಂದಕ್ಕೆ ಬಂತು. ಅಚ್ಚಿದ್ದ ಸ್ಟ್ಯಾಂಪಿನಲ್ಲೇನೊ ದೋಷ ವಿದ್ದಂತೆ ಕಾಣುತ್ತದೆ, ವಿಳಾಸವನ್ನು ಸ್ಪಷ್ಟವಾಗಿ ಬರೆದಿದ್ದರೂ ; ಅಥವಾ ಪತ್ರದ ಭಾರಕ್ಕೆ ಅಚ್ಚಿಟ್ಟ ಸ್ಟ್ಯಾಂಪು ಸಮವಾಗಿರಲಿಲ್ಲವೇನೊ. ಮತ್ತೆ ಈ ಪತ್ರ ವನ್ನು ಕಳಿಸುತ್ತಾನೆ. ಅದು ತಲಪುವುದು ಪ್ರಣಯಿಗಳು ಮುಖತಃ ಸಂಧಿಸಿ ಸಮಾಗಮಗೊಂಡ ಮೇಲೆ. ಪ್ರಣಯದ ಹರಿಕಾರನಾಗಿ ಹೊರಟು ವಿಫಲ ಗೊಂಡು ಹಿಂದೆ ಬಂದ ಆ ಉಂಗುರ-ಪತ್ರ ಆಮೇಲೆ ಪ್ರಣಯಮುದ್ರೆಯಾಗಿ ಹೋಗುತ್ತದೆ. ಕಡಿಮೆ ಚೀಟಿ ಅಚ್ಚಿದ್ದ ಕಾಗದಕ್ಕೆ ಆಮೇಲೆ ಶಕುಂತಲೆಯೆ ಬಹು ಬೆಲೆಕೊಟ್ಟು ಕೊಳ್ಳುತ್ತಾಳೆ. ಪಡೆದದ್ದು ಏನನ್ನು ?

ಅದಿರಲಿ, ಪ್ರಿಯಂವದೆಯಾಡುವ, ಮೇಲೆ ಹೇಳಿದ, 'ಹಾಗಾದರೆ ಈ **ಉಂಗುರವು ಆರ್ಯನ ಅಂಗುಲಿಯನ್ನು ಅಗಲಕೂಡದು"** ಎನ್ನುವ,

ಸ್ಪಷ್ಟ ನಿರ್ದೇಶಕ ವಾಣಿಯ ಹಿಂದೆ ಇದ್ದಿರಬಹುದಾದ ಪ್ರತಿಮಾರ್ಥ ನಮಗೆ ತಿಳಿಯುವುದು ನಾಟಕಾಂತ್ಯದಲ್ಲಿ ಮಾತ್ರವೆ. ನಾಟಕವನ್ನು ಓದಿದ ಮೇಲೆ ಮತ್ತೆ ಈ ಮಾತುಗಳನ್ನು ಓದಿದಾಗ ಆಗಬಹುದಾದ ಅನುಭವವೆ ಬೇರೆ. ಅದನ್ನು ಮುಂದೆ ನೋಡೋಣ.

ನಾಲ್ಕನೆಯ ಅಂಕದಲ್ಲಿ ಅದರ ಪಾತ್ರಪ್ರಭಾವವಂತೂ ಅತಿಶಯ ವಾಗುತ್ತದೆ. ಅದಕ್ಕೆ ಸಾಧಾರಣ ಪ್ರಣಯಪತ್ರದ ಸಂಕೇತದ ಬೆಲೆಮಾತ್ರವಲ್ಲದೆ ಸಾಲಪತ್ರದ ಬೆಲೆಯೂ ದೊರೆಯುತ್ತದೆ. ದೂರ್ವಾಸ ಶಾಪದಿಂದಾಗಿ ಅದರ ಮಧುರ ಮೌಲ್ಯದ ಕೂಡೆ ರುದ್ರಮುದ್ರೆಯೂ ಸೇರಿಕೊಳ್ಳುತ್ತದೆ.ಅದೆ ಉಳಿಸುವ ಮಂತ್ರವಾಗಿಯೂ ಬಿಡುತ್ತದೆ. ಆ ಪ್ರಸಂಗ ಹೀಗಿದೆ : ದೂರ್ವಾಸ ಶಾಪ ಎರಗಿ ಅದರ ಹಿಂದೆಯೆ ವಿಶಾಪವೂ ದೊರೆಯುತ್ತದೆ. "ನಮ್ಮ ವಚನವು ತಪ್ಪ ತಕ್ಕದ್ದಲ್ಲ, ಆದರೆ ಅಭಿಜ್ಞಾನಾಭರಣದರ್ಶನದಿಂದ ಶಾಪವಿಮೋಚನೆಯಾಗು ವುದು," ಎಂದು ಆ ಕೋಪಿಷ್ಠ ಋಷಿ ನುಡಿದುಹೋಗುತ್ತಾರೆ. ಅದನ್ನು ಕೇಳಿದ ಅನಸೂಯೆ ಹೇಳುತ್ತಾಳೆ: "ಈಗ ನೆಮ್ಮದಿಯಾಯಿತು. ಆ ರಾಜಋಷಿಯು ಪಟ್ಟಣಕ್ಕೆ ಹೊರಡುವಾಗ ತನ್ನ ನಾಮಾಂಕಿತದ ಮುದ್ರಿಕೆಯನ್ನು ಸ್ಮರಣೆ ಯನ್ನುಂಟುಮಾಡತಕ್ಕದ್ದೆಂದು ತಾನೆ ಶಕುಂತಲೆಯ ಬೆರಳಲ್ಲಿಟ್ಟು ಹೋದನು. ಅದರಿಂದ ಶಕುಂತಲೆಗೆ ಉಪಾಯವು ಸ್ವಾಧೀನವಾಗಿರುವುದು. ನಡೆ, ಇನ್ನು ದೇವಕಾರ್ಯವನ್ನು ನೆರವೇರಿಸೋಣ." ಪಾಪ, ಅವಳಿಗಾಗುವ ನೆಮ್ಮದಿ ದುರಂತಪೂರ್ವದಲ್ಲಿ ಎಷ್ಟೋ ಬಾರಿ ದೊರೆಯಬಹುದಾದ ಭ್ರಾಮಕ ತೃಪ್ತಿ, ತರ್ಕಮೂಲಕವಾದ ವಂಚನೆ. ಅದರ ಜತೆಗೆ 'ಉಪಾಯ ಶಕುಂತಲೆಗೆ ಸ್ವಾಧೀನವಾಗಿರುವುದು' ಎಂದುಕೊಳ್ಳುವ ತೃಪ್ತಿಯ, ದಿಗ್ವಿಜಯ ಸಂತೃಪ್ತಿಯ ಮಾತಂತೂ ದುರಂತ ಕಟಕಿಯೆ ಸರಿ. ಉಪಾಯ ಸ್ವಾಧೀನವಾಗಿದೆ ಎನ್ನು ವುದು ಅಷ್ಟೇನು ಸುಲಭವೆ ? ವಿಶಾಪದಲ್ಲಿ ನಂಬಿಕೆ ಇಟ್ಟವರು ಶಾಪದ ಮಹಿಮೆ ಯನ್ನು ಮರೆತುಬಿಡುತ್ತಾರೆ. ಶಾಪ ತನ್ನ ಪ್ರಭಾವವನ್ನು ತೋರಿಸದೆಯೆ ವಿಶಾಪದ ಪ್ರಭಾವ ಹೇಗೆ ತಾನೆ ವ್ಯಕ್ತವಾದೀತು ? "ನಿನಗೆ ಅಮಂಗಳಗಳೆಲ್ಲ ಪರಿಹಾರವಾಗಲಿ" ಎಂದು ಹಿರಿಯ ದ್ರಷ್ಟಾರರು ಆಶೀರ್ವದಿಸಿದಾಗ ಅವರ ವಾಣಿ ಯಲ್ಲಿ ಎರಡಂಶಗಳು ಧ್ವನಿತವಾಗಿರುತ್ತದೆ. ಒಂದು ಅಮಂಗಳಗಳು ಮುಂದೆ ಕಾದಿವೆ ಎಂದು ; ಮತ್ತೊಂದು ಅವುಗಳು ನಿವಾರಣೆಗೊಳ್ಳುತ್ತವೆ ಎಂದು.

ಅಷ್ಟಲ್ಲದೆ ಅಪಮಂಗಳಗಳೆ ಬರುವುದಿಲ್ಲವೆಂದರ್ಥವಲ್ಲ. ಇಲ್ಲಿ ಋಷಿಯು ಶಾಪ ಸ್ಪಷ್ಟವಾಗಿ ತನ್ನ ಕೆಲಸವನ್ನು ಮಾಡಿಯೆಬಿಟ್ಟಿದೆ. ವಿಶಾಪ ಬಂದ ಮಾತ್ರದಿಂದ ಶಾಪದ ಅಸ್ತಿತ್ವ ಇಲ್ಲವಾದಂತಾಗುವುದಿಲ್ಲ. ಶಾಪ ಎಂದೂ ಅಷ್ಟು ದುರ್ಬಲವಲ್ಲ. ತನ್ನ ಅಧಿಕಾರ ಕ್ಷಣಜೀವಿಯಾದರೂ ಸರಿಯೆ, ಆ ವೇಳೆಯಲ್ಲೆ ಅದು ತನ್ನ ಕಾರುಭಾರನ್ನು ನಡೆಸೇಬಿಡುತ್ತದೆ. ನಾಟಕದಲ್ಲಿ ಆ ಅನಸೂಯೆ ಆಡುವ ಮಾತು: "ಪ್ರಿಯಂವದ, ಈ ವೃತ್ತಾಂತ ನಮ್ಮಿಬ್ಬರ ಮುಖದಲ್ಲೇ ಇರಲಿ ಕಂಡೆಯಾ ; ಸ್ವಭಾವ ಕೋಮಲೆಯಾದ **ಸಖಿಯನ್ನು ರಕ್ಷಿಸಬೇಕಲ್ಲವೆ?**" ಎಂಬ ಆ ಮಾತುಗಳೆ ಶಾಪ ತನ್ನ ಪ್ರಭುತ್ವವು ಅಸ್ತಿತ್ವಕ್ಕೆ ಬರುವಂತೆ ಮಾಡಲು ಮಾಡಿದ ಪ್ರಥಮ ಸಾಮೋಪಾಯ. ಉಪಾಯವೇಷದಲ್ಲಿ ಹೋಗುತ್ತದೆ ಅಪಾಯ ಅಲ್ಲಿಗೆ. ಅದಕ್ಕೆ ಪ್ರಿಯಂವದೆಯ ಪುಷ್ಟೀಕಾರವೂ ದೊರೆತ ಮೇಲೆ? "ಯಾರು ತಾನೇ ಮಲ್ಲಿಗೆ ಬಳ್ಳಿಗೆ ಬಿಸಿನೀರನ್ನೆರೆಯುವರು?" ಶೀತವಾದ ಮಾದಕ ತೈಲೋದಕವನ್ನು ಗಿಡಕ್ಕೆ ಎರೆಯುವ ಬದಲು ಬಿಸಿ ನೀರನ್ನೆ ಎರೆಯುವ ಸಾಹಸ ಮಾಡಬಾರದಿತ್ತೆ? ಮುಂದೆ ಒದಗಲಿರುವ ಅಗ್ನಿಜಲಸ್ನಾನಕ್ಕಿಂದೆ ಬಿಸಿನೀರಿನ ಎರೆತವನ್ನು ಪರಿಚಯ ಮಾಡಿಕೊಟ್ಟು ಆಘಾತ ನಿರೋಧಕ ರಕ್ಷೆಯನ್ನು ಕಟ್ಟಬಾರದಿತ್ತೆ? ಎಂತಹ ವಿಸ್ಮೃತಿ! ಬುದ್ಧಿಬದ್ಧವಾದ ಅವಿವೇಕ!

ಇದೆಲ್ಲ ಘಟನೆಯ ಇಂಗಿತಾರ್ಥವೇನು? ಉಂಗುರವೆ ಇದ್ದೂ ಅಪಾಯ ಆಗಲೆ ಬೇಕಾದ ಕಾರಣವೇನು? ಮುಂದೆ ನೋಡೋಣ........ಕೆಲವಾರು ದಿನಗಳು ಕಳೆಯುತ್ತವೆ. ಆ ವೇಳೆಗಾಗಲೆ ಸಖಿಯರಿಗೆ ರಾಜರ್ಷಿ ದುಷ್ಯಂತನ ವಿಷಯವಾಗಿ ಅಸಮಾಧಾನ ಅತೃಪ್ತಿ ಆಕ್ರೋಶಗಳು ಮೂಡಿಕೊಳ್ಳುತ್ತವೆ. "ಅಃ ಸತ್ಯಸಂಧನಲ್ಲದ ದುಷ್ಯಂತನಲ್ಲಿ ಕಪಟವನ್ನರಿಯದ ಶಕುಂತಲೆಯನ್ನು ಸೇರಿಸಿದ ಕಾಮನು ಈಗ ತನ್ನ ಇಷ್ಟಾರ್ಥವನ್ನು ಪಡೆಯಲಿ!" ಆದರೆ ಒಂದೆ ಸಮಾಧಾನ! "ಒಂದು ವೇಳೆ ದೂರ್ವಾಸ ಶಾಪ ಹೀಗೆ ಮಾಡಿದ್ದೀತು ; ಹಾಗಿಲ್ಲದಿದ್ದರೆ ಆ ರಾಜಋಷಿಯು ಆ ರೀತಿ ಹೇಳಿಹೋಗಿ ಇಷ್ಟುದಿವಸಗಳಾದಾಗ್ಯೂ ಒಂದು ಪತ್ರಿಕೆಯನ್ನಾದರೂ ಕಳಿಸದಿರುವನೆ?" ಆದರೇತಕ್ಕೆ ಆತನಿಗೆ ತಾವೆ ನೆನಪುಂಟು ಮಾಡುವಂತೆ ಉಂಗುರವನ್ನು ಕಳಿಸಿಯೊ ಪ್ರಣಯ ಪತ್ರವ್ಯವಹಾರವನ್ನು ಮುಂದುವರಿಸಿಯೋ ವಿಸ್ಮೃತಿ [illegible] ಮಾಡ

ಬಾರದು? ಅದಕ್ಕೆ **ಅವರ ಕಾರಣವಿದು :** "ಆದುದರಿಂದ ಸ್ಮೃತಿಯನ್ನು ಕೊಡುವುದಕ್ಕೆ ಇಲ್ಲಿಂದ ಉಂಗುರವನ್ನು ಕಳಿಸಿಕೊಡುತ್ತೇವೆ; ಆ ದುಃಖ ಶೀಲವಾದ ತಪಸ್ವಿ ಜನರನ್ನು ಯಾರುತಾನೆ ಪ್ರಾರ್ಥಿಸುವರು." ಮತ್ತೆ ಶಾಪವೆ ಗೆದ್ದಿತು, ಈ ಕೊನೆಯ ಮಾತಿನ ಸಂಚನ್ನು ಹೂಡಿ.

ಉಂಗುರದ ಮಾತು ಮತ್ತೆ ಈ ದೃಶ್ಯದಲ್ಲಿ ಬರುವುದು ಕಡೆಯಲ್ಲೆ, ಶಕುಂತಲೆ ಪತಿಗೃಹಕ್ಕೆ ಹೊರಡುವ ವೇಳೆಯಲ್ಲಿ ಸಖಿಯರಿಬ್ಬರೂ ನುಡಿಯುವ ಸಂದರ್ಭದಲ್ಲೆ. ಆ ಉಂಗುರದ ಮಾತನ್ನು ನಾಲ್ಕೈದು ತಿಂಗಳಿಂದಲೂ ಗೋಪ್ಯ ವಾಗಿಯೆ ಇಟ್ಟಿರುತ್ತಾರೆ. ಅದನ್ನು ಹೇಗೆ ಹೇಳುವುದು, ಎಂದು ಹೇಳುವುದು ಎಂದು ಅವರೆಷ್ಟು ಬಾರಿ ಯೋಚಿಸಿದ್ದರೊ ತಿಳಿಯದು. ಆಗ, ಅತ್ಯನಿವಾರ್ಯ ಪರಿಸ್ಥಿತಿಯುಂಟಾದುದರಿಂದ ಹೇಳಲೆಬೇಕಾಗಿ ಬಂದಾಗ ಆ ಉಂಗುರ ರಕ್ಷೆಯ ವಿಷಯವನ್ನು ಯಾರೊಬ್ಬರೆ ಹೇಳಲಾಗಲಿಲ್ಲ. ಇಬ್ಬರೂ ಏಕ ಕಂಠದಿಂದ ನುಡಿಯುತ್ತಾರೆ, ವಿಷಯದ ಘನತೆ ಅತಿಶಯವಾಗಿದ್ದುದರಿಂದ! "ಎಲೆ ಸಖಿ, ಆ ರಾಜನು ನಿನ್ನ ಮರೆತುದೇ ಆದರೆ ಆಗ ಆತನಿಗೆ ಅವನ ನಾಮಾಂಕಿತವಾದ ಈ ಉಂಗುರವನ್ನು ತೋರಿಸು." ಅದನ್ನು ಕೇಳಿದೊಡನೆಯೆ ಅವಳಿಗೆ, ಸದಾ ಸರ್ಪಭೀತನಾಗಿಯೆ ಇದ್ದವನ ಮೇಲೆ ಹಾವೆರಗಿದಂತಾಗುತ್ತದೆ! "ಎಲೌ ಸಖಿಯರೆ, ನಿಮ್ಮ ಸಂದೇಹದಿಂದ ಕಂಪಿತೆಯಾದೆನು." ಸಖಿಯು ವ್ಯಕ್ತ ಭೀತಿ ಯನ್ನು ನಿವಾರಿಸಲು ಮತ್ತೆ ಅವರಿಬ್ಬರೂ ನುಡಿಯುತ್ತಾರೆ! "ಮಾಭೈಷೀಃ! ಅತಿಸ್ನೇಹಃ ಪಾಪಶಂಕೀ." ಎಂತಹ ಎಚ್ಚರಿಕೆ, ಎಂತಹ ಸಮಾಧಾನ, ಏನೆಂಥ ಮುನ್ಸೂಚನೆ ಅವರ ಬಾಯಲ್ಲಿ ತಿಳಿಯದೆಯೆ ಬಂದು ಬಿಡುತ್ತದೆ!

ಹೀಗೆ ನಾಲ್ಕನೆಯ ಅಂಕದ ಪ್ರಾರಂಭದ ಋಷಿ ಭಯಂಕರ ದರ್ಶನವಾಗಿ ಹೋಗಿ ಕಣ್ವಶಂಕರ ಸನ್ನಿಧಿಯಲ್ಲಿದ್ದಾಗಲೂ, ಆ ಹೃತ್ಸ್ಪರ್ಶಿಯಾದ ಬೀಳ್ಕೊಡಿಗೆಯ ಸಮಯದಲ್ಲೂ, ಈ ಉಂಗುರ ಸೌಮ್ಯವಾಗಿ ತೋರದೆ ಶಾಪತಾಪಸಿಂಚಿತವಾದಂತೆಯೆ ಜ್ವಲಿಸುತ್ತದೆ. ಮುಂದೆ ಐದನೆಯ ಅಂಕದಲ್ಲಿ ಅದು ತನ್ನ ಪ್ರಭಾವವನ್ನು ತೋರಿಸಿಯೇ ತೋರಿಸಿಬಿಡುತ್ತದೆ. ಶಕುಂತಲೆಯ ರಕ್ಷಕನಾಗಬೇಕಾಗಿದ್ದ ಆ ಮುದ್ರೆ ಶಾಪ ಪಕ್ಷವನ್ನು ವಹಿಸಿಬಿಡುತ್ತದೆ.ಋಷಿಯ ವೃತ್ತಾಂತಕ್ಕೆ ಶಾಪ–ವಿಶಾಪಗಳ ಎರಡು ಮುಖವಿರುವಂತೆಯೆ ಉಂಗುರ ವೃತ್ತಾಂತಕ್ಕೂ ಎರಡು ಮುಖವಿದೆ, ಎರಡು ಪಾತ್ರಗಳನ್ನು ವಹಿಸಬೇಕಾಗು

ತ್ತದೆ ಅದು. ಅದು ಶಕುಂತಲೆಯ ಬೆರಳಲ್ಲಿದ್ದರೂ ಋಷಿ ನಿರ್ದೇಶಿತ. ಹಾಗಾಗಿ ಅವಳ ಕೈಯಲ್ಲಿದ್ದ ಮಾತ್ರದಿಂದಲೆ ಉಪಾಯ ಅವಳ ಅಧೀನವಾಗಿರಲಿಲ್ಲ. ಮೊದಲು ಅದು ಋಷಿಯ ಶಾಪದ ಬೇಹುಗಾರನಾಗಿ ವರ್ತಿಸುತ್ತದೆ, ಆಮೇಲೆ ವಿಶಾಪದ ಮುನ್ಸೂಚಣೆಯ ಹರಿಕಾರನಾಗುತ್ತದೆ, ಭಟನಾಗುತ್ತದೆ.

ಈಗ ಅವರ ಮೊದಲು ಪಾತ್ರಾಭಿನಯ ಸನ್ನಿವೇಶವನ್ನು ಕಾಣಬಹುದು. ರಾಜಾಸ್ಥಾನದಲ್ಲಿ ಶಕುಂತಲೆಯ ಅಗ್ನಿ ಪರೀಕ್ಷೆ ನಡೆಯುತ್ತಿದೆ. ಆ ವೇಳೆಯಲ್ಲಿ ಅಗ್ನಿರಕ್ಷಾ ಮಂತ್ರವಾಗಬೇಕಿದ್ದ ಈ ಉಂಗುರ ಜಾರಿ ಹೋಗಿರುತ್ತದೆ, ಮುಂದೆ ಅಗ್ನಿವ್ರಣಾಪಹಾರಿ ಸಂಜೀವಿನಿಯಾಗಿ ಬರಲು. "ನನ್ನನ್ನು ಪರಸ್ತ್ರೀಯೆಂದು ತಿಳಿದಿರುವುದರಿಂದ ನೀನು ಹೀಗಾಗಿರುವೆ. ಈ ಅಭಿಜ್ಞಾನಾಭರಣದಿಂದ ನಿನ್ನ ಸಂದೇಹವನ್ನು ಹೋಗಲಾಡಿಸುವೆ-" ಎಂದು ಹೇಳಿ ಶಕುಂತಲೆ ತನ್ನ ಕೈ ಬೆರಳನ್ನು ಸವರಿಕೊಳ್ಳುತ್ತಾಳೆ. "ಹಾ ! ಬೆರಳಿನಲ್ಲಿ ಉಂಗುರವಿಲ್ಲವಲ್ಲ !" ಎಂದು ಅವಳೊಡನೆ ನಾವೂ ಕಿಟ್ಟನೆ ಕಿರಚಿಕೊಳ್ಳುತ್ತೇವೆ, ಯಾರಿಗೂ ಕೇಳದಂತೆ. ಗೌತಮಿಯ ಕಡೆಗೆ ಶಕುಂತಲೆ ದುಃಖನೇತ್ರೆಯಾಗಿ ನೋಡುತ್ತಾಳೆ. "ಎಲೆ ಮಗಳೆ, ನೀನು ಶಕ್ರಾವತಾರದಲ್ಲಿ ನಿಂದು ಶಚೀತೀರ್ಥವನ್ನು ವಂದಿಸುತ್ತಿರುವಾಗ ನಿನ್ನ ಉಂಗುರವು ಬೆರಳಿನಿಂದ ಜಾರಿ ಬಿದ್ದಿರಬಹುದು," ಎನ್ನುವ ಅವಳ ಮಾತು ಹಾಳಾದ ಉಂಗುರಕ್ಕೆ ರಾಜನಿಗೆ ಅವಳು ನೀಡುವ ವಿವರಣೆಯಾಗಿದ್ದರೂ, ನಮಗೆ, ಶಕುಂತಲೆಗೆ, ಅವು ನಿರಾಶೆಯ ಅತಲಸಾಗರದಲ್ಲದ್ದುವಂತಹ ಮಾತಾಗಿ ತೋರುತ್ತವೆ. ಕಳೆದುಹೋದ ಉಂಗುರ ಮತ್ತೆ ಸಿಗುವ ಯಾವೊಂದು ಪ್ರತ್ಯಾಶೆಯೂ ಉಳಿಯುವುದಿಲ್ಲ. ಆಗ, ಆ ಸಖಿಯರ ಮಾತು 'ಉಪಾಯವು ಶಕುಂತಲೆಗೆ ಸ್ವಾಧೀನವು' ಎನ್ನುವ ಮಾತು, ಅವಹೇಳನಕಾರಿಯಾಗಿ ಕಾಣುತ್ತದೆ. ರಾಜಸಭೆಯ ಬಹಿರಂಗ ದುರಂತಾಗ್ನಿಯನ್ನು ಎದುರಿಸಬೇಕಾದ ಈ ಮುಗ್ಧೆಗೆ ಅವರು ಆಗಲೆ ಏಕೆ ಬಿಸಿನೀರನ್ನು ಎರೆದು ಹದಗೊಳಿಸಬಾರದಿತ್ತೊ, ಎಂದು ಮರುಗುತ್ತೇವೆ. ಆದರೆ ಆಗುವುದೆಲ್ಲ ಆಯಿತು ; ಮುಂದೇನು ಗತಿ ? ಅಗತಿಯೆ ? ಅಭಿಜ್ಞಾನವಿಲ್ಲದೆ ಸಮಾಗಮವಿಲ್ಲ. ಅಭಿಜ್ಞಾನ ಶಚೀತೀರ್ಥದ ಯಾವ ಸುಳಿಯಲ್ಲಿ ಸಿಲುಕಿದೆಯೊ ? ಹಾಗಾದರೆ ಸಮಾಗಮ ಆ ಶಚೀತೀರ್ಥದ ತಲದಲ್ಲೆ ? ಎದೆ ದಸಕ್ಕೆನ್ನುತ್ತದೆ. ಋಷಿಯ ಶಾಪವೇನೊ ಸತ್ಯವಾಯಿತು. ವಿಶಾಪವೂಸತ್ಯವಾಗ

ಬೇಕಲ್ಲ. ಆದರೆ ವಿಶಾಪ ರಥ ಹರಿಯಲು ಅಭಿಜ್ಞಾನ ಸೇತು ಪಥನೆ ಪತನವಾಗಿದೆಯಲ್ಲ. ಬೇರೆ ಯಾವ ದಾರಿಯೂ ಇಲ್ಲ. ಶಾಪ ತನ್ನ ಚಿರಪ್ರಭುತ್ವ ಕ್ಕೋಸ್ಕರವಾಗಿ ವಿಶಾಪಯಂತ್ರವನ್ನೆ ಮಂಚಿಸಿ ಅದನ್ನೂ ತನ್ನ ಮಂತ್ರಿ ಮಂಡಲದಲ್ಲೆ ಸೇರಿಸಿಕೊಂಡು ಬಿಡುತ್ತದೆ! ಎಂತಹ ಶೂನ್ಯಾವರಣದಲ್ಲಿ ಕವಿ ನಮ್ಮ ಯಾನವನ್ನು ಮುಂದುವರಿಸುವಂತೆ ಮಾಡುತ್ತಾನೆ! ಅದೆ ಅವನ ಸುರಮ್ಯ ಪ್ರತಿಭೆ.

ಈಗ ಇಲ್ಲಿ ನಿಂತುಕೊಂಡು ಒಂದು ವಿಚಾರವನ್ನು ಸ್ಪಷ್ಟಪಡಿಸಿಕೊಳ್ಳಬೇಕಾಗುತ್ತದೆ. ಅದು, ಉಂಗುರ ಶಕುಂತಲೆಯ ಬೆರಳಿಂದ ಜಾರಿಹೋದ ಘಟನೆ. ತನ್ನ ಸಖಿಯರು ಹೇಳಿದ ಮೇಲೂ, ಅವರು ಹೇಳಿಕಳಿಸಿ ಇನ್ನೂ ಕೆಲವು ಹೊತ್ತಾಗಿಲ್ಲ, ಆಗಲೇ ಅವಳು ಅದನ್ನು ಕಳೆದುಕೊಳ್ಳುವುದೆಂದರೆ? ಇದಕ್ಕೆ ಒಬ್ಬೊಬ್ಬರ ಕಲ್ಪನೆ ಒಂದೊಂದು ಬಗೆಯಾಗಿ ಹರಿದಿದೆ! ಉಂಗುರ ದುಷ್ಯಂತನದಾಗಿದ್ದುದರಿಂದ ಶಕುಂತಲೆಯ ಬೆರಳಿಗೆ ದೊಡ್ಡದಾಗಿತ್ತು, ಅದರಿಂದ ಅದು ಜಾರುವುದು ಸಾಧ್ಯವಾಯಿತು; ಆಕೆ ಅದನ್ನು ಮತ್ತೆ ಮತ್ತೆ ಕಳಚಿ ನೋಡುತ್ತಿದ್ದಳು; ಆದ್ದರಿಂದ ಅದು ಕಳೆದು ಹೋಗಲು ಅನುವಾಯಿತು— ಇತ್ಯಾದಿ ಇತ್ಯಾದಿ ಭಾವಗೋಪುರಗಳೆಲ್ಲ ಕಟ್ಟಿಕೊಂಡಿವೆ.* ಆದರೆ ವಾಸ್ತವಾಂಶಕ್ಕೆ ಈ ಅಂಶಗಳು ಉಪಷ್ಟಂಭಕಗಳಾಗಿ ಬಂದಾವೆ ಹೊರತು ತಾವೆ ಪ್ರಧಾನಾಂಶವಾಗಲಾರವು. ಹಾಗಾದರೆ ಅದಾವ ಕಾರಣ?.... ದುಷ್ಯಂತ ಶಕುಂತಲೆಗೆ ಕೊಟ್ಟುಹೋದ ಉಂಗುರದ ವಿಚಾರ ಸಖಿಯರಿಗೆ ತಿಳಿದಿದ್ದರೂ ಅವನು ಆಕೆಗೇ ಹೇಳಿಹೋದ ಮಾತಿನ ನಿಜಶೈಲಿ ಅವರಿಗೂ ತಿಳಿದಿರಲಿಲ್ಲ. ಅಂದರೆ, ನಾಲ್ಕನೆಯ ಅಂಕದಲ್ಲಿ ದುರ್ವಾಸ ಶಾಪಾನಂತರದಲ್ಲಿ ಅನಸೂಯೆ ಉಂಗುರವನ್ನು ಕುರಿತು ಆಡುವ ಮಾತನ್ನೂ ಆರನೆಯ ಅಂಕದಲ್ಲಿ ದುಷ್ಯಂತ ತಾನು ತನ್ನ ಸಖಿಗೆ ಉಂಗುರವಿತ್ತು ಬಂದ ಸನ್ನಿವೇಶ ನಿರೂಪಣೆ ಮಾಡಿದ ಕ್ರಮವನ್ನೂ ನೋಡಿದರೆ ಈ ಅಂಶ ವ್ಯಕ್ತವಾಗುತ್ತದೆ. ಇಲ್ಲಿ ಅನಸೂಯೆ ಆಡುವ ಮಾತು; "ಆ ರಾಜಋಷಿಯು ಪಟ್ಟಣಕ್ಕೆ ಹೊರಡು

---

* ಶ್ರೀ ಎಸ್. ವಿ. ರಂಗಣ್ಣನವರ 'ಶಾಕುಂತಲ ನಾಟಕದ ವಿಮರ್ಶೆ'— ನೋಡಿ.

ವಾಗ ತನ್ನ ನಾಮಾಂಕಿತ ಮುದ್ರಿಕೆಯನ್ನು ಸ್ಮರಣೆಯನ್ನುಂಟು ಮಾಡತಕ್ಕದ್ದೆಂದು ತಾನೇ ಶಕುಂತಲೆಯ ಬೆರಳಿಗಿಟ್ಟು ಹೋದನು." ಆರನೇ ಅಂಕದಲ್ಲಿ ರಾಜ ಹೀಗೆ ಹೇಳುತ್ತಾನೆ: "ಆಮೇಲೆ ಈ ಮುದ್ರಿಕೆಯನ್ನು ನಾನು ಆಕೆಯ ಬೆರಳಲ್ಲಿಟ್ಟು ಹೀಗೆ ಹೇಳಿದೆನು:

ಅನುದಿನಮೊಂದೊಂದಾಗೆಣ<br>
ಸಿನಿಯಳೆ ಮನ್ನಾಮದಕ್ಷರಂಗಳ ಕೊನೆ ಸಾ<br>
ರ್ವನಿತರೊಳಿರ್ಕುಂ ನಿನ್ನಯ<br>
ಶನಿಯದೊಳೆನ್ನಂತವುರವನೊಂದಿಪ್ಪ ಜನಂ

ಈ ಎರಡೂ ವಿವರಣೆಗಳಲ್ಲಿ ಸೂಕ್ಷ್ಮ ವ್ಯತ್ಯಾಸವಿದೆ, ಉಂಗುರವನ್ನು ಕೊಟ್ಟು ಹೋದ ಎಂಬ ಸ್ಥೂಲಾರ್ಥ ಸಾದೃಶ್ಯ ಮಾತ್ರವನ್ನುಳಿದು. ಅನಸೂಯೆ, ರಾಜನು ಇನ್ನು ಮೂರು ದಿನಗಳಲ್ಲಿ ತನ್ನ ಸಖಿಯನ್ನು ಕರೆಸಿಕೊಳ್ಳುತ್ತಾನೆಂದು ಎಲ್ಲೂ ಹೇಳುವುದಿಲ್ಲ. ದುಷ್ಯಂತನಿಂದ ಏನೊಂದೂ ಪತ್ರ ಬಹು ದಿನಗಳ ತನಕವೂ ಬರದಿರಲು ಅವಳು ಅದಕ್ಕೆ ಆಡುವ ಮಾತೆ ಬೇರೆ; "ರಾಜ ಋಷಿಯು ಆ ರೀತಿಯಲ್ಲಿ ಹೋಗಿ ಇಷ್ಟು ದಿವಸಗಳಾದಾಗ್ಯೂ ಒಂದು ಪತ್ರಿಕೆಯನ್ನಾದರೂ ಕಳಿಸದಿರುವನೆ?" ಎಂದಷ್ಟೆ ಹೇಳುತ್ತಾಳೆ. ವಸ್ತುತಃ ಅವಳಿಗೆ ದುಷ್ಯಂತ ಶಕುಂತಲೆಗೆ ಹೇಳಿದ್ದ ಏಕಾಂತೋಕ್ತಿ ಸ್ಪಷ್ಟವಾಗಿ ತಿಳಿದಿದ್ದಿರಲಾರದು. ಅದು ಹೇಗಾದರೂ ಇರಲಿ, ಮುಖ್ಯವಾದ ವಿಚಾರವೆಂದರೆ ಶಕುಂತಲೆಯ ಪರಿಸ್ಥಿತಿ. ಆಕೆಗೊ ತನ್ನ ಪತಿ ಹೇಳಿದ್ದ ಮಾತುಗಳೆ ವೇದಪ್ರಿಯ ವಾಕ್ಯಗಳಾಗಿದ್ದುವು. ಅವೆ ತನ್ನನ್ನು ಉದ್ಧರಿಸುವ ಪ್ರಿಯತಾರಕ ಮಂತ್ರಗಳಾಗಿದ್ದುವು. ಮೂರು ದಿನಗಳಲ್ಲಿ ತನ್ನ ಇನಿಯನ ಪರಿಜನರು ಬಂದು ತನ್ನನ್ನು ಅವನ ಅಂತಃಪುರಕ್ಕೆ ಸೇರಿಸುತ್ತಾರೆ, ಎಂಬ ಮಾತು! ಆ ಮೂರು ದಿನಗಳು ಮೂರು ಯುಗಗಳೆ ಸರಿ. ಹಾಗಿದ್ದರೂ ಅವುಗಳನ್ನು ಎಣಿಸಲು ದೊರೆತಿರುವ ಮಾಧ್ಯಮವಾದರೊ ಅತ್ಯಂತ ಪ್ರಿಯಕರವಾದದ್ದು. 'ದುಷ್ಯಂತ' ಎಂಬ ನಾಮಾಕ್ಷರಗಳನ್ನು ದಿನಕ್ಕೊಂದರಂತೆ ಎಣಿಸುವುದು! ಅದನ್ನವಳು ತನ್ನೊಳಗೆ ಎಷ್ಟು ನೂರು ಬಾರಿ ಉಚ್ಚರಿಸಿಕೊಂಡಿದ್ದಿರಬೇಕೊ, ಆ ಮೂರು ದಿನಗಳ ಅವಧಿಯಲ್ಲಿ. ತನ್ನ ಇನಿಯನ ಹೆಸರು ಮತ್ತೂ ಪುಟ್ಟದಾಗಿ ಒಂದಕ್ಷರದ್ದಾಗಿ ಕೊನೆಗೆ ಬಿಂದು ಮಾತ್ರವಾದುದಾಗಿ ಇದ್ದಿದ್ದಿರಬಾರದಿತ್ತೇ?

ಎಂದು ಎಷ್ಟುಬಾರಿ ಅಂದುಕೊಂಡಳೊ. ಅಂತೂ ಅದು ಹಾಗೆಯೆ ಉಳಿಯಿತು. ಮೊದಲ ದಿನ ಮೊದಲಬಾರಿ ಅದನ್ನು ಉಚ್ಚರಿಸಿವಾಗ ಎಷ್ಟು ಹೊಂಪುಳಿ ಹೋದಳೊ. ಮತ್ತೆ ಮತ್ತೆ ಉಚ್ಚರಿಸಿ ಕಾಲದ ಭಾರವನ್ನು ಮರೆತು ಹೇಗೆ ಸುಖಿಸಿದಳೊ. ಮೂರನೆಯ ದಿನದ ಕೊನೆ ಬಂದಂತೆಲ್ಲ ಅವಳ ಹೃದಯ ಸ್ಪಂದನ ಅತ್ಯಧಿಕತರವಾಯಿತೇನು ? ಅದಕ್ಕನುಗುಣವಾಗಿ ಅವಳ ಆ ದುಷ್ಯಂತ ನಾಮೋಚ್ಚರಣ ಗತಿಯೂ ಕೂಡ ವೇಗತರವಾಯಿತೇನು ? ಆಗ ಆ ಉಂಗುರವನ್ನು ಎದೆಯೊಳಗೆ ಬೈತಿಟ್ಟು ಅಪ್ಪಿಕೊಂಡು ಚುಂಬಿಸಿದಳೇನು ? ಆದರೆ ಎಂದು ಮೂರನೆಯ ದಿನ ಕಳೆದು ನಾಲ್ಕಾಗಿ ಐದಾಗಿ ಕೊನೆಗೆ ತಿಂಗಳು ತಿಂಗಳಾಗ ತೊಡಗಿತೊ ಅಂದಿನಿಂದ ಅವಳ ಕನಸೆಲ್ಲ ಮಧುರ ಪ್ರಲಯದಲ್ಲಿ ಘೂರ್ಣಿಸತೊಡಗಲಿಲ್ಲವೆ ? ಆ ಉಂಗುರ ಮೊದಲೆಷ್ಟು ಪ್ರಿಯಕರವಾಗಿತ್ತೊ ಅಷ್ಟೆ ಅನಿಷ್ಟವಾಗತೊಡಗಿತು; ವಂಚಕನಾಗಿ ತೋರತೋಡಗಿತು ; ಕೊನೆಕೊನೆಗೆ ಅದನ್ನು ನೋಡುವುದೇ ಒಂದು ಬೇನೆಯಾಗಿ ಪರಿಣಮಿಸಿಸಿದ್ದಿರಬೇಕು. ಅದನ್ನು ನೆನೆದರೆ ತನ್ನ ಪತಿಕೊಟ್ಟ ಆಶ್ವಾಸ ನೆನಪಿಗೆ ಬರುತ್ತದೆ. ಆದರೊಡನೆಯೆ ಅದರ ಭಂಗ ನೆನಪಿಗೆ ಬಂದು ನೋವಾಗುತ್ತದೆ. ನೋವನ್ನು ಮರೆಯಲಾದರೂ, ತನಗಾಗಿರುವ ದುಃಸ್ಥಿತಿಯನ್ನು ಪ್ರಜ್ಞಾಪೂರ್ವಕವಾಗಿಯೂ ಮರೆತು ಸ್ವಯಂಕೃತ ಮೂರ್ಛಾವಸ್ಥೆಯಲ್ಲೆ ಉಳಿದು ಮೂಕ ಶೋಕವನ್ನನುಭವಿಸಲಾದರೂ ಆಕೆ ಆ ಉಂಗುರವನ್ನು ನೋಡುವುದನ್ನೇ ಬಿಟ್ಟಿರಬೇಕು. ಅವಳ ಸುಪ್ತಚಿತ್ತದಲ್ಲಾದರೂ ಆದರ ವಿಷಯವಾದ ತಿರಸ್ಕಾರ ಅವಿಶ್ವಾಸ ಬೆಳೆದಿದ್ದಿರಬೇಕು. ಅವಳಿಗೆ ಹಾಗಾಗಿದ್ದರೆ, ಅವಳ ಸಖಿಯರಿಗೆ ಅದರ ವಿಷಯವಾಗಿ ತಾರಕ ಭಾವ ಬೆಳೆದು ಬರುತ್ತದೆ. ಪತಿಮಂದಿರಕ್ಕೆ ನಡೆಯುವಾಗ ಸಖಿಯರಿಬ್ಬರೂ ಹೇಳುವ ಮಾತನ್ನು ಕೇಳಿದೊಡನೆಯೆ ಶಕುಂತಲೆಗೆ ತನ್ನೊಳಗಿನ ಸುಪ್ತ ಭೀತಿಗೆ ಆಕಾರ ದೊರೆತಂತಾಯಿತು. ಯಾರ ಪ್ರೀತಿಯ ವಿಷಯವಾಗಿ ಅವಳಿಗೆ ಅಪ್ರಜ್ಞಾಸ್ಥಿತಿಯಲ್ಲಾದರೂ ಅವಿಶ್ವಾಸ ಮೂಡಿತ್ತೊ ಅವನನ್ನು ಕುರಿತೆ ತನ್ನ ಸಖಿಯರಿಂದು ಶಂಕೆ ವ್ಯಕ್ತಗೊಳಿಸುತ್ತಾರಲ್ಲ. "ನಿಮ್ಮಾ ಸಂದೇಹದಿಂದ ನಾನು ಕಂಪಿತೆಯಾದೆನು"....ಸಖಿಯರು ಎಚ್ಚರವಿತ್ತ ಮೇಲಾದರೂ ಅವಳು ಉಂಗುರವನ್ನು ಭದ್ರವಾಗಿಟ್ಟುಕೊಂಡಿದ್ದಿರಬೇಕಲ್ಲ. ಆದರೆ, ಅವಳ ಸುಪ್ತ ಅವಜ್ಞೆ

ತನ್ನ ಕೈ ತೋರಿಸಿಯೆ ಬಿಡುತ್ತದೆ! ಋಷಿ ಶಾಪವೆ ಬಂದು ಅದನ್ನು ಕೆಡವಿಸಲಿಲ್ಲ. ಅದರ ಪ್ರಭಾವವಿಲ್ಲವೆಂದಲ್ಲ. ಇದ್ದರೂ ಅದು ತನ್ನ ಕಾರ್ಯವನ್ನು ಈಯೊಂದು ವ್ಯಕ್ತಿಗತವಾದ, ಶಕುಂತಲೆಯಲ್ಲಿ ಉಂಗುರದ ವಿಚಾರವಾಗಿ ಬೆಳೆದು ಬಂದಿದ್ದ, ಭಾವನೆಯ ಮೂಲಕವೆ ನಡೆಸಿಕೊಳ್ಳುತ್ತದೆ.

ಮತ್ತೊಂದು ಮಾತು; ಶಕುಂತಲೆಗೂ ಈ ಉಂಗುರ ಕೊನೆಕೊನೆಗೆ ಎಷ್ಟೆ ದುರ್ಭರವಾಗಿ ತೋರುತ್ತ ಬಂದಿದ್ದರೂ ರಕ್ಷಿಸುವ ಕವಚವಾಗಿಯೆ ಉಳಿದಿತ್ತು. ಅವಳ ಪ್ರೀತಿ ಸಖಿಯರಿಬ್ಬರನ್ನು ಬಿಟ್ಟರೆ ಉಳಿದವರಿಗೆ ತಿಳಿದೆ ಇರಲಾರದು. ತಿಂಗಳಾದ ಮೇಲೆ ಬರುವ ಕಣ್ವರಿಗೆ ತಿಳಿಸದೆ ಇದ್ದರೆ ಆಗುವುದೆ ಇಲ್ಲ. ಹಾಗೆಂದು ಉಳಿದವರಿಗೆಲ್ಲ ತಿಳಿಸುತ್ತ ಹೋಗುವಂತಿಲ್ಲ. ಅಂತಹ ಪರಿಸ್ಥಿತಿಯಲ್ಲಿ ಆಶ್ರಮ ವಾಸಿಗಳು ಶಕುಂತಲೆಯ ನಿಜವೃತ್ತಾಂತವನ್ನು ತಿಳಿಯದೆ, ಅವಳ ನಡೆ ನುಡಿ ಬೆಳವಣಿಗೆಗಳಲ್ಲಿ ಸಹಜವಾಗಿಯೆ ವ್ಯತ್ಯಾಸಗಳನ್ನು ಗುರುತಿಸುತ್ತಾರೆ. ಒಂದಲ್ಲ ಒಂದು ದಿನ ಅವರ ಸಂಶಯ ಆಸ್ಫೋಟವಾಗಬಹುದು. ಆದರೆ ಆ ಮುನ್ನವೆ ಕಣ್ವರು ಬಂದು ಬಿಡುತ್ತಾರೆ. ಅಂತಹ ವೇಳೆಯಲ್ಲಿ ಅವಳನ್ನು ನೀಚಾಪರಾಧಗಳ ಆರೋಪಣೆಯಿಂದ ಉಳಿಸಬಹುದಿದ್ದ ಒಂದೆ ವಸ್ತು ಆ ಉಂಗುರ, ಸಖಿಯರಿದ್ದರೂ ಕೂಡ. ಆದ್ದರಿಂದಲೇ ಅದು ತ್ಯಾಜ್ಯವಾದುದಾಗಲಿಲ್ಲ. ಹಾಗೆಂದು ಅದನ್ನು ಬೆರಳಲ್ಲೆ ತೊಟ್ಟುಕೊಂಡಿದ್ದರ ಕಣ್ವರು ಬರುವ ಮುನ್ನ, ವೃತ್ತಾಂತ ತಿಳಿಯದ ಆಶ್ರಮವಾಸಿಗಳು ಒಂದಲ್ಲ ಒಂದು ಬಗೆಯಿಂದ ಆ ಉಂಗುರವನ್ನು ಕಂಡು ಕೇಳಿ ಗುಟ್ಟನ್ನು ಹೊರ ಹಾಕಬಹುದಲ್ಲ. ಆದ್ದರಿಂದ ಅದನ್ನು ಬೆರಳಲ್ಲಿ ತೊಡದೆ ಗೋಪನ ಮಾಡಲೇ ಬೇಕು....ಹೀಗೆ ಅಸ್ಪಷ್ಟ ಅವಿಶ್ವಾಸ–ಆಶ್ವಾಸ, ಭೀತಿ–ಪ್ರೀತಿ ಭಾವಗಳ ಪ್ರತೀಕವಾಗಿ ಶಕುಂತಲೆಗೆ ಆ ಉಂಗುರ ತೋರತೊಡಗುತ್ತದೆ. ಅದ್ಭುತ ಜಟಿಲತಮ ಸೂಕ್ಷ್ಮಭಾವ ಜಾಲವಾಗಿದೆ. ಅದನ್ನು ಬಿಡಿಸಹೋಗುವುದು ಇಲ್ಲಿ ಇನ್ನು ಸಾಕು.

ಆರನೆಯ ಅಂಕ ಪ್ರಾರಂಭವಾಗುತ್ತಿರುವಂತೆಯೆ ಈ ಉಂಗುರದ ಆಟ ಮೊದಲಾಗುತ್ತದೆ. ಇದನ್ನು ನಾವು ನಿರೀಕ್ಷಿಸಿಕೊಳ್ಳುವುದೆ ಸಾಧ್ಯವಾಗಿರುವುದಿಲ್ಲ; ಅಷ್ಟು ವಿಸ್ಮಯಕಾರಿಯಾಗಿ ನಡೆಯ ತೊಡಗುತ್ತದೆ. ಹಿಂದಿನ ಅಂಕದಲ್ಲಿ ಭಗ್ನಸ್ವಪ್ನವಾದ ಪ್ರತ್ಯಾಶೆಗಳೆಲ್ಲವೂ ವಿಶಾಪಗೊಂಡು ಪುನಃ ಚೇತಗೊಳ್ಳಲು

ಪ್ರಾರಂಭಿಸುತ್ತವೆ. ಕಳೆದು ಹೋದ ಉಂಗುರ ಏನೆಂಥ ಕಲ್ಲೋಲ ಮಾಡಿತು! ಅದು ದೊರೆತು ಮತ್ತೇನು ಮಂಥನವೆಸಗುತ್ತದೆಯೊ. ಅಂದು ಎರಗಿದ ಋಷಿ ಶಾಪಕ್ಕೂ ಆಮೇಲೆ ದೊರೆತ ವಿಶಾಪಕ್ಕೂ ಕಾಲದ ಅಂತರ ಕೆಲವೊಂದು ನಿಮಿಷ ಮಾತ್ರ. ಆದರಿಲ್ಲಿ ಉಂಗುರ ಕಳೆದುಹೋದುದಕ್ಕೂ ದೊರೆತುದಕ್ಕೂ ಎಷ್ಟೋ ತಿಂಗಳು ಕಳೆದಿರುತ್ತದೆ. ಅಲ್ಲಿನ ಸೂಕ್ಷ್ಮ ಕ್ಷಣಚಿತ್ರವಿಲ್ಲಿ ವಾಸ್ತವ ಲೋಕದ ರಜತಪರದೆಯ ಮೇಲೆ ಎಷ್ಟು ಬೃಹತ್ತಾಗಿ ದೂರಾಂತರವುಳ್ಳುದಾಗಿ ಕಾಣುತ್ತದೆ. ಅದೆಲ್ಲವನ್ನು ಈ ಆರನೆಯ ಅಂಕದಲ್ಲಿ ಕಾಣಬಹುದು.

ಉಂಗುರವನ್ನು ಕಂಡುಹಿಡಿದ ಭಾವಮಿಶ್ರ ಅಂಬಿಗನನ್ನು ಕರೆದುಕೊಂಡು ಬರುವ ದೃಶ್ಯದಿಂದ ಆರನೆ ಅಂಕದ ಪ್ರವೇಶಕ ಪ್ರಾರಂಭವಾಗುತ್ತದೆ. ಅದನ್ನು ತಂದ ಮೀಂಗುಲಿಗನಿಗೆ ಪ್ರಾಣ ಭೀತಿಯಾಗುತ್ತಿದ್ದರೂ ನಮಗೆ ಓದುಗರಿಗೆ ಪ್ರೇಕ್ಷಕರಿಗೆ ಮಾತ್ರ ವಿಶೇಷ ಧೈರ್ಯೋನ್ಮೀಲನವಾಗುತ್ತದೆ. ಕೆಲವೊಂದು ಘಳಿಗೆಯಲ್ಲೆ ಮರಣಭೀತ ಅಂಬಿಗ ಸನ್ಮಾನಿತನಾಗಿ ಹೊರಬರುತ್ತಾನೆ. ಆದರೆ ಆ ಅಂಬಿಗನ ಮರಣಭೀತಿ ಉಂಗುರದೊಡನೆಯೆ ದೊರೆಯನ್ನು ಸೇರಿಕೊಂಡು ಅವನನ್ನು ಸಾಯಿಸದೆ ಬದುಕಿಸದೆ ನರಳಿಸಿ ಬಿಡುತ್ತದೆ. ಅದರ ಸೂಚನೆಯನ್ನು ಆ ಪ್ರವೇಶಕದ ಕೊನೆಯಲ್ಲೆ ಕಾಣುತ್ತೇವೆ. ಉಂಗುರವನ್ನು ಕಂಡ ದುಷ್ಯಂತ "ಸ್ವಲ್ಪ ಹೊತ್ತು ಕಣ್ಣಿನಲ್ಲಿ ನೀರು ತಂದನು." ಆ ಸನ್ನಿವೇಶ ಚಿತ್ರವಂತೂ ಮರ್ಮಭೇದಿಯಯಾಗಿದೆ. ಮುಂದೆ ಅವನ ಕಣ್ಣೀರು ಕೋಡಿವರಿಯುವುದನ್ನೂ, ನಿಟ್ಟುಸಿರು ಗೋಳಾಗುವುದನ್ನೂ ಆರನೆಯ ಅಂಕದ ಮಧ್ಯ ಭಾಗದಲ್ಲಿ ಕಾಣುತ್ತೇವೆ.

ತನ್ನ ಅಪಾರ ದುಃಖದ ಅತೀರಗತಿಯನ್ನು ಕಂಡು ಒಳಸೋರಿದ್ದ ರಾಜನನ್ನು ಕಂಡು ವಿದೂಷಕ ಧೈರ್ಯಗೊಡುತ್ತಾನೆ: "ಹೀಗೆನ್ನಬೇಡ, ಮುಂದೆ ಆಕೆಯ ಸಮಾಗಮವು ತಪ್ಪದೇ ಆಗುವುದೆಂಬುದಕ್ಕೆ ಈ ಉಂಗುರವೇ ನಿದರ್ಶನವಲ್ಲವೆ?" ಅವನು ಹೇಳುವ ಮಾತು ಋಷಿಯ ಶಾಪ ವಿಶಾಪವನ್ನು ತಿಳಿಯದೆಯೆ ಆಡಿರುವಂತಹುದು. ಶಾಪವಿಲ್ಲದಿದ್ದರೂ ಶಕುಂತಲಾ ತಿರಸ್ಕಾರವು ಈಗ ಆಗಿರುವಂತೆಯೆ ಪ್ರಕಟವಾಗಿ ಅಲ್ಲದಿದ್ದರೂ ಸ್ವಲ್ಪ ಗಂಭೀರವಾಗಿ ಆಗುತ್ತಿದ್ದಿತು ಎಂಬುದಕ್ಕೆ ಇಂತಹ ಸನ್ನಿವೇಶಗಳು ಪೋಷಕವಾಗುತ್ತವೆ. ಅದರ

ಚರ್ಜೆ ಮುಂದೆ ಬರಲಿರುವುದರಿಂದ ಇಲ್ಲಿ ಸದ್ಯದ ಮಾತನ್ನಷ್ಟೆ ಆಡಬಹುದು.... ಬರಿಯ ವಿಲಾಪದಲ್ಲೆ ಮೈಮರೆತಿದ್ದ ದುಷ್ಯಂತನನ್ನು ವಿದೂಷಕನ ಮೇಲಿನ ಮಾತುಗಳು ಎಚ್ಚರಿಸಿ ದುರ್ಭರ ದುಃಖ ಪ್ರವಾಹದಲ್ಲಿ ನೂಕಿಬಿಡುತ್ತವೆ. "ಅಯ್ಯೋ, ಸುಲಭವಲ್ಲದ ಸ್ಥಾನವನ್ನು ಹೊಂದಿ ಜಾರಿದುದರಿಂದ ಈ ಉಂಗುರವು ದುಃಖಪಡಿಸತಕ್ಕದಾಗಿದೆ.

> "ಪರಿಭಾವಿಪೆನೆನ್ನವೊಲ್ ಉಂಗುರ ನಿನ್ನಂ. ಫಲದಿನಲ್ಪಪುಣ್ಯಮೆನುತ್ತುಂ
> ಹರಿಣಾಕ್ಷಿಯರು ನಖಭಾಸುರಮಾಪಂಗುಳಿಯ ಸೇರಿ ಜಾರಿದ ಕತದಿಂ"

ತನ್ನನ್ನೂ ಉಂಗುರವನ್ನೂ ಸಮಾನಪುಣ್ಯರೆಂದು ಕರೆದುಕೊಳ್ಳುವ ರಾಜನ ಈ ಮಾತುಗಳು ದುಃಖಾತಿರೇಕದಲ್ಲಿ ಬಂದ ಮಾತುಗಳಾಗಿದ್ದರೂ ಸತ್ಯ ದೂರವಾದುವಾಗಿಲ್ಲ. ವಾಸ್ತವವಾಗಿ ದುಷ್ಯಂತ ಸುಲ್ಲಭವಲ್ಲದ ಸ್ಥಾನವನ್ನು ಸುಲಭವಾಗಿ ಆಕ್ರಮಿಸಿಕೊಂಡ. ಕಣ್ವರು ಬರುವ ದಿನವನ್ನೂ ಕಾಯದೆ ಶಕುಂತಲೆಯನ್ನು ಮೋಹಿಸಿ ಗಾಂಧರ್ವ ವಿವಾಹ ಮೂಲಕ ಸ್ವೀಕರಿಸಿಬಿಟ್ಟ. ಕಣ್ವರು ಬರುವತನಕವಾದರೂ ಇದ್ದು ತನ್ನ ಹೊಸ ಸಂಬಂಧವನ್ನು ಅವರಿಗೆ ಒಪ್ಪಿಸಿ ಅವರ ಆಶೀರ್ವಾದವನ್ನು ಪಡೆಯುವ ಧೈರ್ಯಮಾಡಲಿಲ್ಲ. (ಈ ಮಾತು ಮುಂದೆ ದೀರ್ಘವಾಗಿ ವಿಮರ್ಶೆಗೊಳ್ಳುವುದರಿಂದ ಈ ಸೂಚನೆ ಇಷ್ಟೆ ಸಾಕು.) ಆದ್ದರಿಂದಲೆ ಸುಲಭವಲ್ಲದುದು ಸುಲಭ್ಯವಾದಂತೆ ಭಾಸವಾದರೂ ದುರ್ಲಭ್ಯ ವಾಗುತ್ತದೆ. ಉಂಗುರಕ್ಕೆ ಬಂದ ಗತಿ ಅವನಿಗೆ ಬಂದ ಗತಿಯು ಪ್ರತಿಯಷ್ಟೆ.... ಅದು ಜಾರಿಹೋದರೂ ಮತ್ತಾರ ಕೈಗೂ ಸಿಗದೆ ದೊರೆಗೆ ದೊರೆಯಿತಲ್ಲ ಎಂದು ಅದೃಶ್ಯೆಯಾದ ಸಾನುಮತಿ, ಪ್ರೇಕ್ಷರು ಹೇಳಬಹುದಾದ ಮಾತನ್ನೆ ಆಡುತ್ತಾಳೆ. ಆದರೆ ಒಂದು ಧೈರ್ಯ, ಅದು ಯಾರ ಕೈಗೆ ಹೋದರೂ ಹಿಂತಿರುಗಿಯೆ ಬರಬೇಕು. ತನ್ನ ವಿಳಾಸವನ್ನೇ ಬರೆದು ಯಾವ ಕಾಗದವನ್ನೆ ಅಂಚೆಯ ಗೊಟ್ಟಕ್ಕೆ ಹಾಕಿದರೂ ಅದು ತನಗೆ ಬಂದೀತು, Dead letter office ಗೆ ಹೋದರೂ ಕೂಡ. ಶಕುಂತಲೆಯನ್ನೇ ತಲುಪದ ಆ ಉಂಗುರ ಮೀನನ್ನು ಸೇರಿ ಅದನ್ನು ಕೊಲ್ಲಿಸಿತು. ಅಂಬಿಗನನ್ನು ಸೇರಿ ಹೆದರಿಸಿತು; ಹಿಂತಿರುಗಿ ಬಂದು ದೊರೆಯನ್ನು ಸೇರಿ ಅಳಲಿಸಿತು!

ಮುಂದೆ ಆ ಉಂಗುರ ಹೇಗೆ ಶಕುಂತಲೆಯ ಬೆರಳನ್ನಡರಿತು ಎಂಬ ಕಥೆ

ಯನ್ನು ದೊರೆ ಹೇಳುತ್ತಾನೆ. ಸಾನುಮತಿ ವಿದೂಷಕರಂತೆಯೇ ಪ್ರೇಕ್ಷಕರೂ ಕುತೂಹಲದಿಂದಲೇ ಕೇಳುತ್ತಾರೆ. ಅದಕ್ಕೆ ದೊರೆ : "ಕೇಳು, ಇನ್ನೆಷ್ಟು ಕಾಲ ವಿಳಂಬವಾಗಿ ನಿನ್ನ ಪ್ರಾಪ್ತಿಯನ್ನುಂಟು ಮಾಡುವೆಯೆಂದು ನಾನು ಪಟ್ಟಣಕ್ಕೆ ಹೊರಟ ಕಾಲದಲ್ಲಿ ಪ್ರಿಯೆ ಕಣ್ಣೀರಿಂದ ಕೂಡಿ ಹೇಳಿದಳು....ಆಮೇಲೆ ಆ ಮುದ್ರಿಕೆಯನ್ನು ನಾನು ಆಕೆಯ ಬೆರಳಲ್ಲಿಟ್ಟು ಹೀಗೆ ಹೇಳಿದೆನು !

"ಅನುದಿನವೊಂದೊದಾಗೆಣಿಸಿನಿಯಳಿ ಮನ್ನಾಮದಕ್ಷರಂಗಳ ಕೊನೆ ಸಾ
ರ್ವನಿತರೊಳಿರ್ಕುಂ ನಿನ್ನಯ ಸನಿಯದೊಳೆನ್ನಂತವುರವನೊಂದಿಪ್ಪ ಜನಂ ।"

ಇದನ್ನು ಕೇಳಿದ ನಾವೂ ಕೂಡ ಸಾನುಮತಿಯೊಂದಿಗೆ "ಗಡುವೇನೋ ರಮಣೀಯವಾದುದೇ. ಆದರೆ ವಿಧಿ ತಪ್ಪಿಸಿತು" ಎಂದು ಹೇಳುತ್ತೇವೆ. (ಈ ಮಾತಿನ ಉತ್ತರಾರ್ಧವು ಎಷ್ಟು ಮಾತ್ರ ಒಪ್ಪುತ್ತದೆಂಬುದನ್ನೂ ಆ ಮೇಲೆ ವಿವೇಚಿಸುವ). ಆದರೆ ಮುಂದೆ ಅದೇ ಸಾನುಮತಿ ಆಡುವ ಮಾತನ್ನು, ಅದರಲ್ಲೂ ಅದರ ಉತ್ತರಾರ್ಧವನ್ನು ಸರ್ವಾತ್ಮನಾ ಒಪ್ಪುತ್ತೇವೆ ! "ಆದುದ ರಿಂದ ದುಃಖಿತೆಯಾದ ಶಕುಂತಲೆಯಲ್ಲಿ ಅಧರ್ಮ ಭೀರುವಾದ ಈ ರಾಜ ಋಷಿಗೆ ಮದುವೆಯಲ್ಲಿ ಸಂದೇಹವುಂಟಾಯಿತು ; ಅಥವಾ ಇಂತಹ ಅನು ರಾಗಕ್ಕೆ ಅಭಿಜ್ಞಾನವನ್ನಪೇಕ್ಷಿಸುವ ನಿಮಿತ್ತವೇನು ?* ಎಂತೊ !" ಆಕೆಯ ಆ ಕೊನೆಯ ಮಾತನ್ನು ವಿಮರ್ಶಕರು, ದುಷ್ಯಂತನನ್ನು ಕೇವಲ ರಾಜರ್ಷಿಯೆಂದೆ ಪೂಜಿಸಿ ತಮ್ಮ ನಾಟಕ ವಿಮರ್ಶೆಗೆ ತೊಡಗುವ ವಿಮರ್ಶ ಕರು, ದುರದೃಷ್ಟವಶಾತ್ ಮರೆಯುತ್ತಾರೆ. ಅವರಿಗೂ ಎಂತುದೊ ವಿಮೋಹ ವಿಸ್ಮೃತಿ ! ಅದನ್ನು ಕಂಡು ನಾವೂ ಕೂಡ "ಎಂತೊ !" ಎಂಬ ಆ ಅರ್ಥ ಪೂರ್ಣವಾದ ಮಾತನ್ನೆ ಆಡಬೇಕಾಗುತ್ತದೆ.

ರಾಜನ ಉನ್ಮಾದ ಹೆಚ್ಚುತ್ತದೆ. "ನಾನು ಈ ಉಂಗುರವನ್ನು ನಿಂದಿಸ ಬೇಕು"...."ನಳನಳಿಪ ಬೆರಳ್ಗಳಿಂದಂ ತೊಳಪಾ ಕಯ್ಯುಳಿದದೆಂತು ಮುಳುಗಿದೆ ನೀರೊಳ್ ?" "ಪಳಿಯೆನ್ ಅಚೇತನವೆಂದು ಇದನ್, ಎಳೆಯಳ ಕೈವಿಡಿದು ನಾನೆ ತೊರೆದುದರಿಂದಂ". ಈ ಮಾತುಗಳಲ್ಲೂ ಉತ್ತರಭಾಗವೆ ಅರ್ಥವತ್ತಾಗಿದೆ. ಉಂಗುರ ಜಾರಿ ಹೋದುದಕ್ಕೆ ಏನು ಕಾರಣ ? ಶಾಪವೆಷ್ಟು ಕಾರಣ, ಮತ್ತೇನಾದರೂ ಎಷ್ಟು ಕಾರಣ ; ಶಕುಂತಲೆಯನ್ನು ದುಷ್ಯಂತ

ಮರೆಯುವುದಕ್ಕೆ ಶಾಪ ಅಷ್ಟು ಮಾತ್ರ ಕಾರಣವಾಗುತ್ತದೆ.

ಆರನೆ ಅಂಕದ ಈ ಉಂಗುರ ಪ್ರಸ್ತಾಪ ಇಷ್ಟಕ್ಕೆ ನಿಲ್ಲುತ್ತದೆ. ಏಳನೆ ಅಂಕದಲ್ಲಿ ಅದರ ಪ್ರಸ್ತಾಪ ಬರುವ ವೇಳೆಗೆ ನಾವು ನಾಟಕದ ಕೊನೆಯನ್ನು ಮುಟ್ಟಿರುತ್ತೇವೆ. ದೇವಲೋಕದಿಂದಿಳಿದು ಮಾತಲಿಯೊಡನೆ ಮಾರೀಚಾಶ್ರಮಕ್ಕೆ ಬಂದ ದುಷ್ಯಂತ ಪುಣ್ಯವಶಾತ್ ಶಕುಂತಲೆಯನ್ನು ಸಂಧಿಸುತ್ತಾನೆ. ಆ ಸನ್ನಿವೇಶ ಚಿತ್ರಣವಂತೂ ಈ ನಾಟಕದಲ್ಲಿ ಸುರಮ್ಯವಾಗಿ ಬಂದಿದೆ. ಅಲ್ಲಿ ಈ ಉಂಗುರ ಪ್ರಸ್ತಾಪ ಬಹು ಸಹಜವಾಗಿ ಧ್ವನಿಪೂರ್ಣವಾಗಿ ಬರುತ್ತದೆ. ದುಷ್ಯಂತ ತನ್ನ ವಿಸ್ಮೃತಿಯಿಂದ ಶಕುಂತಲೆಗಾದ ಸಂಕಷ್ಟಗಳಿಗಾಗಿ ಎಷ್ಟು ಮರುಗಿದ್ದನೊ. ಆದರೂ ಅವನಿಗೆ ಹೃದಯ ಹಗುರಗೊಂಡಿರಲಿಲ್ಲ. ತನ್ನ ಪುತ್ರನನ್ನು ಸತಿಯನ್ನು ಕಂಡು ಸಂತೋಷಗೊಂಡಿದ್ದರೂ ತನ್ನ ಪ್ರಮಾದವನ್ನು ತನ್ನ ದೇವಿಯ ಮುಂದೆ ಒಪ್ಪಿಕೊಂಡು ಕ್ಷಮಾಯಾಚನೆ ಮಾಡುತ್ತಾನೆ; ಆಕೆಯ ಕಾಲಿಗೆರಗುತ್ತಾನೆ. ಅನಿರೀಕ್ಷಿತ ವರ್ತನೆಯನ್ನು ಎದುರಿಸಬೇಕಾದ ಶಕುಂತಲೆ ಆನಂದ–ದುಃಖ, ವಿಸ್ಮಯ–ಖೇದಗಳನ್ನೊಮ್ಮೆಲೆ ಅನುಭವಿಸುತ್ತಾಳೆ. ಕಾಲಿಗೆರಗಿದ ಗಂಡನನ್ನು ಏಳೆಂದು ಕೇಳಿಕೊಳ್ಳುತ್ತಾಳೆ. ತನ್ನ ದುಃಖ ಶಲ್ಯವನ್ನು ಹೊರ ತೆಗೆಯುತ್ತ ದುಷ್ಯಂತ ;

> "ಅರಸೀ ಮರವೆಯೊಳಾನ್ ಅಂದೊರಸಲ್ಅನಾದರಣೆಗೈದ ನಿನ್ನಯ ಪಕ್ಷ್ಮಂ
> ತರಲಗ್ನ ಬಾಷ್ಪಬಿಂದುವನೊರಸುತುಮಿಂದೆನ್ನ ದುಗುಡಮಂ ಪರಿಹರಿಪೆಂ"

ಎಂದು ಹೇಳಿ ಆಕೆಯ ಕಣ್ಣಂಚಿನ ಬೆಂಕಿಹನಿಗಳನ್ನು ಒರಸುತ್ತಾನೆ. ಶಕುಂತಲೆಗೆ ಆಗಾದ ದುಃಖನೋಕ್ಷಾನುಭವ ಎಂತುದೊ ! ಅಂತಹ ಘಳಿಗೆಯಲ್ಲಿ ಆ ದುಸ್ಸ್ವಪ್ನ ರೂಪಿಯಾಗಿದ್ದ ಉಂಗುರ ತನ್ನ ಪತಿಯ ಬೆರಳಿನಲ್ಲಿರುವುದು ಶಕುಂತಲೆಗೆ ಕಾಣುತ್ತದೆ. ಪತಿಯು ತನ್ನ ಕಣ್ಣೀರನ್ನು ಒರಸಿದಾಗ ಉಂಟಾದ ಹಗುರಭಾವ ಆ ಬೆರಳ ಉಂಗುರದ ಹೊಳಹನ್ನು ಕಂಡದ್ದರಿಂದ ಅರ್ಧಭಂಗವಾಗುತ್ತದೆ.

"ಆರ್ಯಪುತ್ರ! ಇದು ಆ ಉಂಗುರವೆ ಅಲ್ಲವೇ ?" ಎನ್ನುವ ಆ ಅವಳ ಮಾತಿನಲ್ಲಿ ಏನೆಲ್ಲ ಭೀತಿ ನೋವು ಸಂಕಟ ಹಾಗೂ ಮಾರ್ಮಿಕವಾದ ಅವಹೇಳನಗಳಿಲ್ಲ. ದುಷ್ಯಂತನಿಗೆ ಅವಳಿಗಾದ ಅನುಭವವೆಲ್ಲಿ ತಾನೆ ಆಗಬೇಕು.

ಬಹುಶಃ ಅದಕ್ಕೆ ವಿರುದ್ಧವಾದ ಭಾವನೆ ಅವನಲ್ಲಿ ಅಂದು ಆಗುತ್ತಿದ್ದಿರಬೇಕು. "ಅದು ದೊರೆತಮೇಲೇ ನೆನಪು ಉಕ್ಕಿತು" ಎನ್ನುವ ಅವನ ಮಾತಿನಲ್ಲಿ ಉಂಗುರದ ವಿಷಯವಾಗಿ ಅಗಾಧವಾದ ರಕ್ಷಕ ಭಾವವಿದೆ. ಎಂತಹ ವಿಧಿ ಇದು! ಒಂದೆ ಉಂಗುರ ಇಬ್ಬರ ನಡುವೆಯೂ ಆಟವಾಡುತ್ತಿದೆ; ಆದರೂ ಇಬ್ಬರಲ್ಲೂ ಪರಸ್ಪರ ವಿಭಿನ್ನ ಭಾವಗಳನ್ನು ಉಕ್ಕಿಸುತ್ತಿದೆಯೆಲ್ಲ! ಶಕುಂತಲೆ ತಟಕ್ಕನೆ ಹೇಳುತ್ತಾಳೆ, ತನ್ನ ಮಾತು ತನ್ನ ಇನಿಯನ ಮಧುರ ಭಾವನನ್ನು ಭಂಗಗೊಳಿಸೀತು ಎಂಬ ಅರಿವನ್ನೂ ಮೆಟ್ಟಿಕ್ಕಿ: "ವಿಷಮವನ್ನೆಸಗಿತಿದು, ಆರ್ಯಪುತ್ರನಿಗೆ ನಂಬಿಕೆ ಉಂಟು ಮಾಡುವ ಸಂದರ್ಭದಲ್ಲಿ ದೊರೆಯದೆ, (ವಿಷಮಂ ಕೃತಮನೇನ ಯತ್ತ್ರದಾಽಽ ರ್ಯ ಪುತ್ರಸ್ಯಪ್ರತ್ಯಯಕಾಲೇ ದುರ್ಲಭಮಾಸೀತ್") ಎಂದು. ಅಬ್ಬ! ಇಷ್ಟು ದಿನ ಆಸ್ಫೋಟಗೊಳ್ಳದೆ ಮೆಟ್ಟಿಕ್ಕಲ್ಪಟ್ಟಿದ್ದ ಆ ತಿರಸ್ಕಾರಭಾವ ಈಗ ಸಿಡಿದೆದ್ದಿತಲ್ಲ. ಇದು ಉಂಗುರ ಕಳೆದು ಹೋದ ಮೇಲೆ ಮಾತ್ರ ಮೂಡಿದ ಭಾವವೊ, ಅಥವಾ ಉಂಗುರವನ್ನು ದುಷ್ಯಂತ ಕೊಟ್ಟು ಹೋದ ಮೂರನೆಯ ದಿನದಿಂದ ಅಸ್ಪಷ್ಟವಾಗಿ ಮೂಡಿ ಬೆಳೆದು ಬಂದು ಒಳಗೆ ಸುರುಳಿಗೊಂಡಿದ್ದ ಭಾವವೊ? ಮತ್ತೆ ಪ್ರಸ್ತಾಪಿಸಬೇಕಿಲ್ಲ. ಆದರಿಲ್ಲಿ ಇಷ್ಟು ಮಾತ್ರ ತಿಳಿಸಬಹುದು. ಈ ಉಂಗುರ ದೊರೆತುದು, ಆಮೇಲೆ ಅದರಿಂದಾಗಿ ದೊರೆ ಅತೀವ ಯಾತನೆಗೆ ಒಳಗಾದುದು ಎಲ್ಲವೂ ಸಾನುಮತಿಯ ಮೂಲಕವಾಗಲೆ ಶಕುಂತಲೆಗೆ ತಿಳಿದೆ ಇತ್ತು. ಹಾಗಿದ್ದುದರಿಂದ ಉಂಗುರದ ವಿಷಯವನ್ನು ಆಕೆ ಆಗ ತಾನೆ ಮೊದಲ ಬಾರಿಗೆ ತನ್ನ ಪತಿಯ ಮೂಲಕವೆ ತಿಳಿದುಕೊಂಡಂತಾಗಲಿಲ್ಲ. ತನ್ನ ಸಖಿ ಹೇಳಿರುತ್ತಾಳೆ, ಅದು ದೊರೆತ ಮೇಲೇ ದೊರೆಗೆ ಸಂಸ್ಮೃತಿ ಉಂಟಾಮದು ಎಂದು. ಆ ಕಾರಣದಿಂದಲಾದರೂ ಕೂಡ ಅವಳಿಗೆ ಆ ಉಂಗುರದ ವಿಚಾರವಾಗಿ ಮೊದಲಿದ್ದ 'ವಂಚಕಭಾವ' ಹೋಗಿ ಸ್ವಲ್ಪವಾದರೂ ಕೃತಾರ್ಥಭಾವ, ರಕ್ಷಕಭಾವ ಉಂಟಾಗಬೇಕಿತ್ತು. ಈ ಯಾವ ಭಾವವೂ ಉಂಟಾಗಲಿಲ್ಲವೆಂದಲ್ಲ. ಹಾಗಿದ್ದರೂ ಆ ಎಲ್ಲ ಪ್ರಿಯಭಾವಗಳನ್ನೂ ನುಂಗಿಕೊಳ್ಳುವಂತಹ ಅಸಿತಭಾವ ಅದರ ವಿಷಯವಾಗಿ ಅವಳಲ್ಲಿ ಬೆಳೆದು ಹೋಗಿತ್ತಷ್ಟೆ. ಪಾಪ, ಶಕುಂತಲೆ ಇಷ್ಟೆಲ್ಲ ವ್ಯಕ್ತವಾಗಿ ಭಾವವನ್ನು ತೋರಿಸಿಕೊಂಡಿದ್ದರೂ ದುಷ್ಯಂತ ಅದರ ವಿಷಯವಾಗಿದ್ದ ತನ್ನ ಕೃತಜ್ಞತಾಭಾವವನ್ನು ತೋರಿಸಿ

ಕೊಳ್ಳುತ್ತಾನೆ. "ಹಾಗಾದರೆ ಪುನಶ್ಚ ಋತುಸಂಬಂಧಕ್ಕೆ ಗುರುತಾಗಿ ಬಳ್ಳಿಯು ಹೂತೊಡುವಂತೆ ನೀನೂ ಈ ಉಂಗುರವನ್ನು ತೊಡು", ಎನ್ನು ತ್ತಾನೆ. ಅಷ್ಟು ದಿನಗಳಾದ ಮೇಲೂ, ಅಷ್ಟೆಲ್ಲ ಯಾತನೆಯಿಂದ ಮೆದುವಾಗಿ ಸತೀಹೃದಯ ಸಹಾನುಕಂಪೆಯನ್ನು ಪಡೆದಿದ್ದರೂ ಆ ದುಷ್ಯಂತ ತನ್ನಿನಿಯಳ ಆ ಒಂದು ಭಾವವನ್ನು ಅರಿಯಲಾಗಲಿಲ್ಲವಲ್ಲ! ಶಕುಂತಲೆಯೆ ತನ್ನ ಪತಿಗೆ ಅದನ್ನು ಎಚ್ಚರ ಮಾಡಿಕೊಡುತ್ತಾಳೆ: "**ನನಗೆ ಇದರಲ್ಲಿ ನಂಬಿಕೆಯಿಲ್ಲ. ಆರ್ಯಪುತ್ರನೇ ಇದನ್ನು ಧರಿಸಿಕೊಳ್ಳಬೇಕು.**" ಎಷ್ಟು ಸ್ಪಷ್ಟ, ಎಷ್ಟು ನಿರ್ದಾಕ್ಷಿಣ್ಯ, ಎಷ್ಟು ಮರ್ಮಭೇದಿ! ಆಗ ದುಃಷ್ಯಂತನ ಅವಸ್ಥೆಯೇನಾಗಿದ್ದಿರ ಬೇಕು. ಆದರೆ ಮಾತಿಲಿಯಾದ ಅವನನ್ನು ಮಾತಲಿ ಬಂದು ಉಳಿಸುತ್ತಾನೆ.

ಪುನಸ್ಸಮಾಗಮದಲ್ಲಿ ಹಾಗಾಗಬೇಕೆ? ಹೂವುದುರಿಸಿದ ಬಳ್ಳಿ ಋತು ಪುನ ರಾಗಮದಲ್ಲಿ ಮತ್ತೆ ಹೂವನ್ನೆ ಧರಿಸಲಿ ಎಂಬುದು ಅವನ ಆಶಯ. ಆದರೆ, ಹಾಗೆ ಬಂದ ಹೂವು ಮತ್ತೆ ಉದುರಿಹೋದೀತೆಂಬ ಭಯ ಆ ಸತಿಗೆ. ಸಾಕು ಈ ಹೂತೊಡುವಾಟ, ಹೂಬಿಡುವಾಟ. ಬಿಟ್ಟು ಉದುರಿಹೋದ ಹೂವೆ ಕಾಯಾಗಿ ಹಣ್ಣಾದರೆ ಸಾಕಾಗಿದೆ. ತೊಟ್ಟುಜಾರಿಹೋಗುವ ಅಂಗುಲೀಯಕ ಗತವಾದ ಪ್ರೀತಿ ಸಾಕಾಗಿದೆ. ಅದು ಅಂತರ್ನಿಹಿತವಾಗಿ ಶಾಶ್ವತವಾಗಿ ಉಳಿಯಬೇಕಾಗಿದೆ. ಅಭಿಜ್ಞಾನ ಎಷ್ಟಿದ್ದರೂ ಅಭಿಜ್ಞಾನವೆ; ಜ್ಞಾನವಲ್ಲ. ಅಭಿಜ್ಞಾನದಲ್ಲೆ ನಿಂತರೆ ಜ್ಞಾನೋದಯವೆಲ್ಲಿಬಂತು? ಎಣ್ಣೆಯೊಳಗಿನ ಸುಪ್ತಾಗ್ನಿಯನ್ನು ಎಚ್ಚರಿಸಲೇನೊ ಬೆಂಕಿಯಕಡ್ಡಿ ಬೇಕು. ಆದರೆ ದೀಪ ಹೊತ್ತಿಸಿದ ಮೇಲೂ ಬೆಂಕಿಯ ಕಡ್ಡಿಯನ್ನು ಬಯಸುತ್ತಲೆ ಇರಬೇಕೆ? ಗೀರು ತ್ತಲೆ ಇರಬೇಕೆ? ಕಡ್ಡಿಯನ್ನೆ ಗೀರಿ ಬೆಳಕು ಪಡೆದು ಸಂತೃಪ್ತನಾಗುವುದಾದರೆ ಎಣ್ಣೆ ತನ್ನನ್ನು ತಾನು ಏಕೆ ಸುಟ್ಟುಕೊಳ್ಳಬೇಕು, ತನ್ನೊಳಗಿನ ಬೆಳಕನ್ನು ಅದು ಪಡೆಯದಿದ್ದ ಮೇಲೆ? ಆದರೆ ಕಡ್ಡಿ ಬೇಡ ಎಂದಲ್ಲ. ಕಾರಣ, ಯಾವಾಗ ಕುಡಿ ಆರಿಹೋದೀತೋ. ಹಾಗಾಗದಿದ್ದರೂ ಕಿಟ್ಟ ಕಟ್ಟಬಹುದಲ್ಲ. ಅದನ್ನು ಕೆಡವಿ ಕುಡಿಯನ್ನು 'ರಜ' ಗೊಳಿಸಲಾದರೂ ಆ ಗೀರಿಸದ ಕಡ್ಡಿಬೇಕು. ಉಂಗುರದ ಪಾತ್ರವಿಂದು ಅಷ್ಟೆ. ಅದು ಪ್ರೀತಿ ಉದಯಾನಂತರದಲ್ಲಿ ಆ ಪ್ರೀತಿಯ ಚಿಹ್ನೆ ಯಾಗಿ ಕೊಡುಗೆಯಾಗಿ ಬಂದಿತು; ಆಮೇಲೆ ಆ ಪ್ರೀತಿಯ ಅಭಿಜ್ಞಾನವಾಗಿ ನಿಂತುಕೊಂಡಿತು. ಅದೂ ಅದ ಮೇಲೆ ಮತ್ತಾವ ಪಾತ್ರವಹಿಸಬೇಕು ಅದು?

ಹಣತೆಯಲ್ಲಿಡುವ ಸುಟ್ಟ ಬೆಂಕಿಕಡ್ಡಿಯ ಪಾತ್ರ! ಆದ್ದರಿಂದಲೇ ಮತ್ತೆ ದುಷ್ಯಂತನ ಅಂಗುಲಿಯನ್ನೆ ರಾರಾಜಿಸಬೇಕಾಯಿತು ಆ ಅಂಗುಲೀಯಕ.

ಈಗ ಮೊದಲ ಅಂಕದಲ್ಲಿ ಬರುವ ಆ ಅನುಸೂಯೆಯ ಮಾತನ್ನು ನೆನೆದು ಕೊಳ್ಳಿರಿ: "ಹಾಗಾದರೆ ಈ ಉಂಗುರವು ಆರ್ಯನ ಅಂಗುಲಿಯನ್ನು ಅಗಲ ಕೂಡದು," ಆ ಮಾತನ್ನು ಆಕೆ ತನ್ನ ದೃಷ್ಟಿಯಲ್ಲೆ ಆಡಿದ್ದರೂ ಅದರ ಅರ್ಥ ಸನ್ನಿವೇಶಾತಿಕ್ರಾಂತವಾದುದು. ಆ ಮಾತಿನ ವಾಚ್ಯಾರ್ಥ ಧ್ವನ್ಯಾರ್ಥಗಳೆರಡೂ ತತ್ಕಾಲೀನ ಮಾತ್ರವಾದುದಲ್ಲ. ಅನಸೂಯೆಯ ಈ ಮಾತಿಗಾಗಲಿ ಶಕುಂತಲೆಯ ಮೇಲೆ ಹೇಳಿದ ಕೊನೆಯ ಮಾತಿಗಾಗಲಿ ಒಟ್ಟು ತಾತ್ಪರ್ಯಾರ್ಥ ವೇನು? ಈ ಉಂಗುರದಲ್ಲಿ ನಂಬಿಕೆಯಿಲ್ಲ, ಈ ಉಂಗುರ ರಾಜನನ್ನು ಅಗಲ ಬಾರದು ಎಂಬ ಮಾತುಗಳ ಭಾವಾರ್ಥವೇನು? ಈಗ ವಿವೇಚಿಸೋಣ.

ಶ್ರೀ ವಾಲ್ಮೀಕಿ ಮಹರ್ಷಿಗಳ ರಾಮಾಯಣದ ಸುಂದರಕಾಂಡದಲ್ಲಿ ಒಂದು ಅತ್ಯಂತ ಹೃದಯಸ್ಪರ್ಶಿಯಾದ ಧ್ವನಿಪೂರ್ವಕವಾದ ಹಾಗೂ ನಮ್ಮ ಸದ್ಯಃ ಪ್ರಸಂಗಕ್ಕೆ ಪೋಷಕವಾಗುವಂತಹ ಒಂದು ಸನ್ನಿವೇಶವಿದೆ. ಆಂಜನೇಯನಿತ್ತ ಶ್ರೀರಾಮನ ಅಂಗುಲೀ ಮುದ್ರಿಕೆಯನ್ನು ಸೀತಾದೇವಿ ಕಂಡೊಡನೆಯೆ ಆಕೆಗಾದ ಸುಂದರತಮವಾದ ಅನುಭವವನ್ನು ಶ್ರೀ ವಾಲ್ಮೀಕಿ ಎರಡು ಮೂರು ಶ್ಲೋಕ ಗಳಲ್ಲಿ ಹಾಡುತ್ತಾರೆ:

ವಾನರೋಽಹಂ ಮಹಾಭಾಗೇ ದೂತೋ ರಾಮಸ್ಯ ಧೀಮತಃ
ರಾಮನಾಮಾಂಕಿತಂ ಚೇದಂ ಪಶ್ಯ ದೇವ್ಯಂಗುಲೀಯಕಂ ॥
ಪ್ರತ್ಯಯಾರ್ಥಂ ತವಾನೀತಂ ತೇನ ದತ್ತಂ ಮಹಾತ್ಮನಾ
ಸಮಾಶ್ವಸಿಹಿ ಭದ್ರಂ ತೇ ಕ್ಷೀಣದುಃಖಫಲಾಹ್ಯಸಿ ॥
ಗೃಹೀತ್ವಾ ಪ್ರೇಕ್ಷಮಾಣಾ ಸಾ ಭರ್ತುಃ ಕರವಿಭೂಷಣಂ
ಭರ್ತಾರಮಿವ ಸಂಪ್ರಾಪ್ತಂ ಜಾನಕೀ ಮುದಿತಾ ಭವತ್ ॥
ಚಾರು ತದ್ವದನಂ ತಸ್ಯಾಸ್ತಾಮ್ರಶುಕ್ಲಾಯತೇಕ್ಷಣಂ
ಬಭೂವ ಹರ್ಷೋದಗ್ರಂ ಚ ರಾಹುಮುಕ್ತ ಇವೋಡುರಾಟ್ ॥

—ಶ್ರೀಮದ್ ವಾಲ್ಮೀಕಿ ರಾಮಾಯಣ,

ಸುಂದರಕಾಂಡ : ಸರ್ಗ ೩೬—ಶ್ಲೋಕ ೨-೫.

ತನ್ನ ಪತಿಯ ಬೆರಳನ್ನು ಶೋಭಿಸುತ್ತಿದ್ದು ಜನಕಪುತ್ರಿ ಸೀತೆಗೆ ಪರಿಚಿತ ವಾಗಿದ್ದ ಆ ರಾಮ ನಾಮಾಂಕಿತವಾದ ಉಂಗುರ ಹಳೆಯದೆ ಇದ್ದಿರಬೇಕು.

ಕೆಲವು ವ್ಯಾಖ್ಯಾನಕಾರರು ಅದನ್ನು ಮಾವ ಜನಕನೆ ಕೊಟ್ಟಿದ್ದೂ ಎಂದೂ ಕಲ್ಪಿಸಿದ್ದಾರೆ. ಅದೇನಾದರೂ ಸತ್ಯವಾದರೆ ಈ ಸನ್ನಿವೇಶದ ಅರ್ಥ ಮತ್ತೂ ಸ್ವಾರಸ್ಯಮಯವಾಗುತ್ತದೆ. ಹೇಗಾದರೂ ಆಗಲಿ, ಆ ಉಂಗುರಕ್ಕೆ ೧೪ ವರ್ಷಕ್ಕಿಂತ ಹೆಚ್ಚಾದರೂ ವಯಸ್ಸಾಗಿದ್ದಿರಬೇಕು.

ಶ್ರೀರಾಮನ ಆ ಉಂಗುರವನ್ನು ಕಂಡೊಡನೆಯೆ ಸೀತೆಗೆ ಆತನ ಸಾನ್ನಿಧ್ಯಾನುಭವವಾಗಿ ಆತನನ್ನು ಪಡೆದಂತಾಗಿ ಕಣ್ಣುಗಳಲ್ಲಿ ನೀರು ತುಂಬಿಕೊಳ್ಳುತ್ತದೆಯಂತೆ. ಆ ಉಂಗುರ, ತನ್ನ ನಿಯಮ ಕರಾಂಗುಲಿ ವಿಭೂಷಣವಾದ ಉಂಗುರ, ಅಂತಹ ಅನುಭವವನ್ನು ತಂದುದಕ್ಕಾಗಿ ಅವಳಿಗೆ ಅಪಾರವಾದ ಆನಂದ ಉಂಟಾಗುತ್ತದೆ. ಇಲ್ಲಿ ನಮ್ಮ ಗಮನ ಹರಿಯಬೇಕಾದುದು ಆ ಉಂಗುರ ತಂದು ಕೊಟ್ಟ ಅನುಭವದತ್ತವಲ್ಲ ; ಅದು ಎಂಥ ಉಂಗುರ ಎಂಬುದಷ್ಟೆ. ಶ್ರೀರಾಮಕರ ವಿಭೂಷಣವಾದ ಉಂಗುರ ! ಮದುವೆಯಾಗಿ ಸುಮಾರು ಹತ್ತಾರು ವರ್ಷವಾಗಿದೆ. (ಮದುವೆಯಾದ ಮೇಲೆ ಅಯೋಧ್ಯೆಯಲ್ಲಿ ಹನ್ನೆರಡುವರ್ಷ ಇದ್ದರಂತೆ ; ಆಮೇಲೆ ಕಾಡಿಗೆ ಬಂದೆ ೧೪ ವರ್ಷವಾಗುತ್ತ ಬಂದಿತ್ತು.) ಸ್ವನಾಮಾಂಕಿತವಾದ ಈ ಉಂಗುರವನ್ನು ಶ್ರೀರಾಮ ಬೇರೆ ಯಾರಿಗೂ ಕಳಚಿ ಕೊಟ್ಟಿರಲೆ ಇಲ್ಲ. ಕಾಡಿನಲ್ಲೂ, ತಾನು ಜಟಾವಲ್ಕಲ ವಸ್ತ್ರಧಾರಿಯಾಗಿ ಬರುವಾಗಲೂ ಅದನ್ನು ತೊಟ್ಟುಕೊಂಡೆ ಬಂದಿರುತ್ತಾನೆ. ಅದನ್ನು ಆತ ಅಗಲಿದುದು ಬಹುಶಃ ಅಂದೆ ಮೊದಲ ಬಾರಿ. ಅದೂ ಯಾವ ಕಾರಣಕ್ಕಾಗಿ ; ಸೀತೆಗೆ ಗುರುತಾಗಿ ಕಳಿಸಲಿಕ್ಕಾಗಿ. ಅದನ್ನು ಕಳಿಸಿಕೊಟ್ಟದ್ದಾದರೂ ಯಜ್ಞಾಗ್ನಿ ಸಮಾನನಾದ ಆಂಜನೇಯನ ಕೈಯಲ್ಲಿ. ಆದರೆ ಈ ದುಷ್ಯಂತ ತಾನು ಮೊದಲು ತೊಟ್ಟ ಉಂಗುರವೆಲ್ಲಿ ? ಮಾವಂದಿರೆಷ್ಟು ಜನವೊ ? ಬಂದ ಉಂಗುರವೆಷ್ಟೊ, ಹೋದದ್ದೆಷ್ಟೊ. ಅವನು ತನ್ನ ಉಂಗುರವನ್ನು ಅದೂ ತನ್ನ ರಾಜಮುದ್ರಿಕೆಯನ್ನು ಎಷ್ಟು ಸುಲಭವಾಗಿ ಅನಸೂಯಾ ಪ್ರಿಯಂವದೆಯರ ಕೈಯಲ್ಲಿಡುತ್ತಾನೆ. ಅನಸೂಯೆ ಎಚ್ಚರಿಸಬೇಕಾಗುತ್ತದೆ ಆಗ : 'ಈ ಉಂಗುರವು ಆರ್ಯನನ್ನು ಅಗಲ ಕೂಡದು' ಎಂದು. ಅವನಿಗೆ ಯಾರಾದರೂ ಮೊದಲು ಆ ಎಚ್ಚರವನ್ನಿತ್ತಿದ್ದರೆ? ಹೋಗಲಿ ಆಗಲಾದರೂ ಅರ್ಥವಾಯಿತೆ ? ದುಃಖಾನುಭವವಾದ ಮೇಲೆ ಅರಿವಾಗಬೇಕಾಯಿತಲ್ಲ. ಹಾಗೆ ಕಳಚಿ ಯಾರಿಗಾದರೂ ಕೊಡುವ ಉಂಗುರದಲ್ಲೇನು ತಾನೆ ಬೆಲೆಯುಂಟು ? ಇದಲ್ಲದೆ, ಮತ್ತೊಂದು ಮಾತುಂಟು.

ಉಂಗುರ ಆಭರಣವಾಯಿತೆ ವಿನಾ ಮಾಂಗಲ್ಯವಾಗಲಿಲ್ಲ. ಆಭರಣಗಳನ್ನು ಎಷ್ಟು ಬೇಕಾದರೂ ತೊಡಲಿ ; ದಿನಕ್ಕೊನ್ನು ಬದಲಿಸುತ್ತಾ ಹೋಗಲಿ. ಅವೆಲ್ಲ ಶ್ರೀಮಂತಿಕೆಯ ಗುರುತುಗಳೆ ಆಗುತ್ತವೆ. ಆದರೆ ಮಾಂಗಲ್ಯವನ್ನು ಹಾಗೆ ಮಾಡುತ್ತಾ ಹೋದರೆ ? ಅದಕ್ಕೇಕೆ ಆಭರಣಗಳೊಡನೆ ಸ್ಪರ್ಧೆ ? ಶ್ರೀರಾಮನಿಗೆ ತಾನು ಕೊಟ್ಟ ಉಂಗುರ ಮಾಂಗಲ್ಯವಾಯಿತು. ಆದರೀ ದುಷ್ಯಂತನಿಗೆ ತೊಡವಾಯಿತು ; ಕೊಡವಾಯಿತು. ಶ್ರೀರಾಮ ದುಷ್ಯಂತರು ತಮ್ಮ ತಮ್ಮ ಉಂಗುರದ ವಿಚಾರವಾಗಿ ಇಟ್ಟುಕೊಂಡಿದ್ದ ಸಂಬಂಧ ಭೇದ ಅವರವರಿಗಿವ ವ್ಯಕ್ತಿ ಭೇದವನ್ನು ಸೂಚಿಸುತ್ತದೆ.

ಯಾವಾಗ ಶಕುಂತಲೆ ಆ ಉಂಗುರ ಆರ್ಯಪುತ್ರನ ಬೆರಳನ್ನೆ ಅಲಂಕರಿಸಿರಲಿ ಎಂದಳೊ–ಪ್ರಾಯಶಃ ಆ ಅರ್ಥದ ಮಾತನ್ನು ಹಾಗೆ ಯಾವ ವಧುವೂ ಪತ್ನಿಯೂ ಹೇಳಿದ್ದಿರಲಿಕ್ಕಿಲ್ಲ—ಅಂದೆ ದುಷ್ಯಂತನ ಪ್ರಣಯ ಜೀವನ ಅನ್ಯಾಪೇಕ್ಷೆಯಾಗಿ ಬೇರೆಡೆ ಹರಿಯದಂತಾಯಿತು. ಅದು ಅವನ ಕಾಮಜೀವನದ 'ಕಾಮ' ಮಾತ್ರವಾಗದೆ ಪೂರ್ಣವಿರಾಮವಾಯಿತು. ದುಷ್ಯಂತ ತನ್ನ ಇಡೀ ಬಾಳಿನಲ್ಲಿ ಮತ್ತೆಂದೂ ಆ ಉಂಗುರವನ್ನು ಅಗಲಿರಲಾರ ; ಮತ್ತಾರಿಗೂ ಕೊಟ್ಟಿರಲಾರ ; ಮತ್ತಾರನ್ನೂ ನೆನೆದಿರಲಾರ.

ಆದ್ದರಿಂದಲೆ ಈ ಉಂಗುರ, ನಾಟಕ ಪ್ರಾರಂಭದಲ್ಲಿ ಆಭರಣ ಮಾತ್ರವಾದುದಾಗಿದ್ದು ನಾಟಕ ಮಧ್ಯದಲ್ಲಿ ಅಭಿಜ್ಞಾನವಾಗಿ ಕೊನೆಗೆ ಮಾಂಗಲ್ಯ ಸದೃಶ ಬಂಧಿಯಾಗಿ ದಿಗ್ಬಂಧಿಯಾಗಿ ಪರಿಣಾಮಗೊಳ್ಳುತ್ತದೆ. ಅದರ ಬೆಲೆ ಬೆಳೆದಂತೆ ಮೌಲ್ಯ ಪರಿಣಾಮಗೊಂಡಂತೆ ಪ್ರೀತಿಯ ಸ್ವರೂಪವೂ **ಪರಿಣಾಮಗೊಳ್ಳು ತ್ತದೆ.** ಆಗಲೆ, ಚಾಂಚಲ್ಯ ಶಾಶ್ವತವಾಯಿತು ; ರುಚಿಸ್ಮಿತ ಶುಚಿಸ್ಮಿತವಾಯಿತು ; ಕಾಮಪ್ರೇರಿತ ಪ್ರಣಯ, ರಾಗೋದ್ರಿಕ್ತ ಅನುರಾಗ ಅನುತಾಪೋದ್ದೀಪ್ತ ಪ್ರೇಮವಾಗಿ, ಪ್ರೀತಿನಿಷ್ಠ ಪ್ರಣಯವಾಗಿ ಪರಿಣಾಮಗೊಂಡಿತು ಎಂದು ಹೇಳುವುದು ಸಾಧ್ಯ. ಶಾಕುಂತಲ ನಾಟಕದಲ್ಲಿ ಹೂವನ್ನು ಕಾಣುತ್ತೇವೆ ; ಹೂವು ದಳ ಉದುರಿಸಿಕೊಂಡು ನೋವುಂಟು ಮಾಡುವುದನ್ನು ಕಾಣುತ್ತೇವೆ; ಉದುರಿದ ದಳ ಕಾಯಿ ಹಣ್ಣಿಗೆ ತೆರವು ಮಾಡಿಕೊಡುವುದನ್ನು ಕಾಣುತ್ತೇವೆ. ಆದ್ದರಿಂದಲೆ ಗಯಟೆ ಹೇಳಿದ ಆ ಮಾತಿನಲ್ಲಿ ಕವಿಯ ಭಾವಾತಿಶಯತೆ ಉಂಟೆ ವಿನಾ ಭಾವೋದ್ರೇಕವಿಲ್ಲ ; ಭಾವಾತಿಸಾರ ಗುಣವಿಲ್ಲ.

ಈಗ ದೊಡ್ಡ ಸಮಸ್ಯೆ ತಲೆಯೆತ್ತಿ ನಿಲ್ಲುತ್ತದೆ : ಹಾಗೆಂದರೇನು, ದುಷ್ಯಂತ ಶಕುಂತಲೆಯರ ಪ್ರೇಮ ಮೊದಲೂ ಶುದ್ಧವೇ ಆಗಿತ್ತು, ಕೊನೆಯಲ್ಲೂ ಹಾಗೆಯೆ ಇದೆ ; ಅದರಲ್ಲಿ ಕುಂದುಕರೆಯಿಲ್ಲ ; ಹಾಗಿರುವಾಗ ಎಲ್ಲಿತಾನೆ ಬಂತು ಪ್ರೀತಿಯ ಪರಿಣಾಮ ಎಂಬೆಲ್ಲ ಮಾತು—ಎಂದು. ಈ ಮಾತನ್ನು ಒಪ್ಪತಕ್ಕದ್ದೇ ಅಲ್ಲ. ಹೀಗೆಂದು ವಾದಿಸುವುದು ಸುಲಭ. ಆದರೆ ಕಾಳಿದಾಸನಿಗೆ ಅಪಚಾರ ಬಗೆದಂತಾಗುತ್ತದೆ ಅಷ್ಟೆ. ನಾಟಕ ಇಷ್ಟುದ್ದವೇತಕ್ಕೆ ಬೆಳೆಯಬೇಕಿತ್ತು ಬರಿದೆ ?

ಮೊದಲಂಕದ ದುಷ್ಯಂತ ಶಕುಂತಲೆಯರೂ ಕಡೆಯ ಅಂಕದಲ್ಲಿ ಬರುವವರೂ ಒಂದೇ ಏನು ? ಮೊದಲ ಅನುರಾಗ ಕೊನೆಯ ಪ್ರೀತಿ ಎರಡೂ ಒಂದೇ ಏನು ? ಹಾಗಾದರೆ ಮಧ್ಯೆ ಬಂದ ಕರಕಷ್ಟದ ಅರ್ಥವೇನು ? ಅದಿರಲಿ, ನಾಟಕದ ಪ್ರಾರಂಭ ನಾಟಕದ ಕೊನೆ ಹೇಗೂ ಒಂದಲ್ಲವೆ ಅಲ್ಲ. ಶಾಕುಂತಲದಲ್ಲಂತೂ ಅದು ಸಾಧ್ಯವೇ ಇಲ್ಲ. ಇಲ್ಲಿ ಹಾಗೆ ತಪ್ಪು ಭಾವಿಸಲು ಎಡೆ ಇದ್ದರೂ ಹಾಗಲ್ಲವೇ ಅಲ್ಲ. ಮೊದಲ ಅಂಕ ಕಡೆಯ ಅಂಕದಲ್ಲಿ ಪುನರಭಿನಯಗೊಂಡಂತೆ ಕಂಡರೂ ಅವುಗಳ ಮಧ್ಯೆ ಎಷ್ಟಂತರವಿದೆ. ನಾಟಕದ ಪ್ರಾರಂಭದಲ್ಲಿ ರಥಯಾನ ಬರುತ್ತದೆ : ಕೊನೆಯಲ್ಲೂ ರಥ ಬರುತ್ತದೆ. ಇಲ್ಲೂ ತಪೋವನ ; ಅಲ್ಲೂ ತಪೋವನ ; ಇಲ್ಲೂ ಬಲಭುಜ ಅದುರುತ್ತೆ, ಅಲ್ಲೂ ಬಲಭುಜ ಅದುರುತ್ತದೆ ; ಅದರಲ್ಲಿ ತನ್ನ ಮನಸ್ಸು ಹರಿದದ್ದೆ ಲೋಕಮಾನ್ಯ ಪಥವಾಗಿ ತೋರಿದರೆ, ಇಲ್ಲಿ ಲೋಕಧರ್ಮ ಪಥದಲ್ಲೆ ತಾನಿದ್ದರೂ ತನ್ನ ದಾರಿ ಸರಿಯೊ ತಪ್ಪೊ ಎಂಬ ಶಂಕೆ ಮತ್ತೆ ಮತ್ತೆ ತಲೆದೋರುತ್ತದೆ. ಅಲ್ಲಿನ ರಥ ದೂಳೆಬ್ಬಿಸಿಕೊಂಡು ಹೋಗುತ್ತದೆ ; ಜಿಂಕೆಯನ್ನಟ್ಟಿಕೊಂಡು ಹೋಗುತ್ತದೆ. ಇಲ್ಲಿನ ರಥ ನೆಲದ ಮೇಲೆ ಹರಿಯುವುದಿಲ್ಲ ; ವ್ಯೋಮಗಂಗಾಶೀಕರ ಸ್ನಾತವಾಗಿ ಹರಿದು ಬರುವ ಈ ರಥ ಭೂಮಿಯನ್ನು ಸಾಕ್ಷಿಯಾಗಿ ನೋಡುತ್ತಾ ಬರುತ್ತದೆ. ಭೂಮಿಗೆ ಇಳಿದು ಬಂದಾಗಲೂ ನೆಲ ತಾಕದೆ ಹಾಗೆಯೆ ಮೇಲೆ ಉಳಿದುಕೊಳ್ಳುತ್ತದೆ. ಇದಿಷ್ಟೆ ಏನು. ನಾಟಕದ ಪೂರ್ವೋತ್ತರಾರ್ಧಗಳು ಹೆಚ್ಚು ಕಡಿಮೆ ಎದುರು ಬದುರು ನಿಂತಂತೆ ಕಾಣುತ್ತವೆ. ಆರೋಹಣದಲ್ಲಿ ಬರುವ ಸ್ವರಗಳೆ ಅವರೋಹಣ ಕ್ರಮದಲ್ಲಿ ಬಂದರೂ ಅವುಗಳ ಅರ್ಥವೇ ಬೇರೆ. ಇವು ಸಂವಾದಿ ಸ್ವರಗಳಾಗಿ ಬರುತ್ತವೆಯೆ ವಿನಾ ವಾದಿ—ಪ್ರತಿವಾದಿ ಸ್ವರಗಳಾಗಿ ಅಲ್ಲ.

ಆಗ ಪೂರ್ಣತೆಗೆ ಈ ಎರಡೂ ಅನಿವಾರ್ಯ. ಅದಿಲ್ಲದೆ ಆರೋಹಣ ಸ್ವರಗಳಲ್ಲಿ

ನಿಂತರೆ ಯಾವ ರಾಗವೂ ಪೂರ್ಣವಾಗುವುದಿಲ್ಲ.

ಮೊದಲಂಕದಲ್ಲೂ ದುಷ್ಯಂತ ಆಶ್ರಮ ಪ್ರವೇಶಿಸುತ್ತಾನೆ; ಕಡೆಯ ಅಂಕ ದಲ್ಲೂ ಹೊಗುತ್ತಾನೆ. ಅವನ ಪ್ರವೇಶದಿಂದ ಒಂದೆಡೆ ಆಂತರಿಕ ಅಲ್ಲೋಲ ವುಂಟಾದರೆ ಮತ್ತೊಂದೆಡೆ ಉಲ್ಲೀಲೆಯುಂಟಾಗುತ್ತದೆ. ಮೇಲು ನೋಟಕ್ಕೆ ಮೊದಲ ಭಾಗದಲ್ಲಿ ದುಷ್ಯಂತ ಶಕುಂತಲೆಯರ ಪ್ರಣಯಾಂಕುರವಾಯಿತೆಂದಷ್ಟೆ ತೋರಿದರೂ ಆ ರಾಜನ ಮೃಗಯಾಕ್ರೀಡೆಯಿಂದ ಅಲ್ಲಿಯ ಪ್ರಾಣಿ ಪ್ರಪಂಚದ ಪ್ರಶಾಂತ ಜೀವನವೆ, ಪರಸ್ಪರ ನಿರ್ವೈರ ಶಾಂತಿಯೆ, ಕದಡಿ ಹೋಗುತ್ತದೆ. ಅದು ನಮಗೆ ತಿಳಿಯುವುದು, ಋಷಿಕುಮಾರರು "ಎಲೆ ಎಲೆ ತಪಸ್ವಿಗಳಿರಾ! ತಪೋವನ ಪ್ರಾಣಿರಕ್ಷಣೆಗೋಸ್ಕರ ಸನ್ನದ್ಧರಾಗಿ! ಬೇಟೆಯಾಡುತ್ತ ಬಂದ ದುಷ್ಯಂತ ಮಹಾರಾಜ ನಿಮ್ಮ ಸಮೀಪದಲ್ಲಿರಬೇಕಷ್ಟೆ:" ತೆರೆಯ ಹಿಂದೆ ಕೂಗಿಕೊಂಡು ಎಚ್ಚರಿಸಿದಾಗ ಅವರು ಹೇಳುವ ಮುಂದಿನ ಎರಡು ಪದ ಮತ್ತೂ ಅರ್ಥಪತ್ತಾಗಿದೆ:

ಸಲಿಲದೊಳೆ ನಾಂದ ವಲ್ಕಂದಳೆದಾಶ್ರಮ ತರುಗಳಲ್ಲಿ ಪಯಿಖುರಹತಿಯಿಂ।
ದಳುರ್ದ್ದಿಳ್ದ ಧೂಳಿ ಪರಿಣತ ಜಲಜ ಸಖಾಭಂ ಪತಂಗತತಿವೋಲ್ ಬೀಳ್ಗುಂ॥
ಪರಪುತ್ತ್ರಂ ಪುಲ್ಲೆಗುಂಪಂ ಪದಕೆ ತೊಡರ್ದ್ದ ಪೆರ್ಬಳ್ಳಿಗಳ್ ಪಾಶದಂತೊ
ಪ್ಪಿರೆ ನೋಡಲ್ ಪೊಯ್ಲ್ಲ ಬಲ್ಪಿಂ ಮುರಿದ ಪೆರ್ಗ್ಗೊಂಬಿನೊಳ್ ಕೊಂಬದೊಂದಂ
ಟಿರೆ ಧರ್ಮ್ಮಾರಣ್ಯಮಾರ್ಗಂ ಬಿಡಿದುರದೆ ತಪೋವಿಘ್ನವೇ ಮೂರ್ತಿವೆತ್ತಂ
ತಿರೆ ಸೊರ್ಕ್ಕಾಂತಾನೆಯೈತಂದಪುದು ನೃಪರಥಾಲೋಕದಿಂದಂಜುತೀಗಳ್।

ಆಶ್ರಮದ ಮರಗೊಂಬೆಗಳ ಮೇಲೆ ಹರಡಿರುವ ಒದ್ದೆ ನಾರುಡೆಗಳ ಮೇಲೆ ಕುದುರೆಯ ಕಾಲಧೂಳು ಪತಂಗತತಿಯಂತೆ ಬೀಳುತ್ತಿದೆ. ಹುಲ್ಲೆ ಹಿಂಡನ್ನು ಚೆದುರುತ್ತ ಬರುತ್ತಿರುವ ಸೊಕ್ಕಾನೆ ತನ್ನಡಿಗೆ ತೊಡರಿದ ಬಳ್ಳಿಗಳು ಪಾಶದಂತೆ ಒಪ್ಪುತ್ತಿರಲು, ತನ್ನ ಹೊಯ್ಲಿನ ಬಲ್ಪಿನಿಂದ ಮುರಿದ ಮರದ ಹೆಗ್ಗೊಂಬೆ ಯೊಂದನ್ನು ಕೋಡೊಳಗೆ ಸೆಕ್ಕಿಕೊಂಡು ಧಾವಿಸುತ್ತಿದೆ, ಧರ್ಮಾರಣ್ಯವನ್ನು ಪ್ರವೇಶಿಸುತ್ತಿದೆ, ತಪೋವಿಘ್ನವೇ ಮೂರ್ತಿಗೊಂಡಂತೆ—ರಾಜರಥವನ್ನು ಕಂಡಂಜಿ!

ಈ ಎಲ್ಲ ಚಿತ್ರವೂ, ಶಾಂತಿಯನ್ನು ಪ್ರಶಾಂತಿಯನ್ನು ಸ್ವಸ್ಥಸ್ಥಿತಿಯನ್ನು ಕದಡುವ, ಪಾವಿತ್ರ್ಯವನ್ನು ಕೆಡಿಸುವ, ಕಟ್ಟನ್ನು ಮುರಿಯುವ ಒಂದು

ಗೊಂದಲವನ್ನೆ ಧ್ವನಿಸುತ್ತದೆ. ಒದ್ದೆಯಾದ ನಾರುಡೆ ಕುದುರೆಯ ಕಾಲಧೂಳಿನಿಂದ ಮಡಿಗೆಟ್ಟಿತು ಎನ್ನುವುದಕ್ಕಿಂತ ಬೇಕೆ, ತಪೋವನದ ಪಾವಿತ್ರ್ಯ ಭಂಗವಾಗುತ್ತಿದೆಯೆಂಬುದನ್ನು ತಿಳಿಸಲು ? ತಪೋವಿಘ್ನರೂಪಿಯಾದ ಸೊಕ್ಕಾನೆ ಧರ್ಮಾರಣ್ಯದ ದಾರಿಯಲ್ಲಿ ಬರುತ್ತಿದೆ ! ಹುಲ್ಲೆ ಹಿಂಡನ್ನು ಕೆದರುತ್ತ ! ಹೆಗ್ಗೊಂಬೆಯನ್ನುಡಿದು ತನ್ನ ಕೊಂಬೊಳಗೆತ್ತಿಕೊಂಡು ! ಪಾಪ ! ಬಳ್ಳಿಯ ಪಾಶವನ್ನೂ ಹೊತ್ತು ಬರುತ್ತಿದೆ ! ಅದಾದರೂ ತಡೆದೀತೆ ? ಇದಕ್ಕಿಂತ ಬೇಕೆ ರಾಜಮದೇಭಾಗಮನವನ್ನೂ ಅದರಿಂದಾದ ಸ್ಥೂಲ ಸೂಕ್ಷ್ಮ ಅಲ್ಲೋಲಗಳನ್ನೂ ಸೂಚಿಸಲು ?

ಈ ತೆರೆಯ ಹಿಂದಣ ಎಚ್ಚರಿಕೆಯಿಂದ ಕಳವಳಗೊಂಡ ಋಷಿಕುಮಾರಿಯರು ತಮ್ಮ ಎಲೆವನೆಗೆ ತೆರಳಲು ರಾಜಾನುಮತಿ ಕೇಳುತ್ತಾರೆ. ಅವರಿಗೆ ರಾಜ ನೀಡುವ ಧೈರ್ಯವಿದು: "ನೀವು ಹೋಗಿರಿ ; ನಾವೂ ಕೂಡ ಆಶ್ರಮಕ್ಕೆ ಬಾಧೆ ಉಂಟಾಗದ ಹಾಗೆ ಪ್ರಯತ್ನಿಸ ಹೋಗುವೆವು." ಯಾವಾತನ ರಥಾವಲೋಕನದಿಂದಲೆ ಆ ಮದ್ದಾನೆ ಕಟ್ಟುಕಿತ್ತೋಡುತ್ತ ಬಂತೊ ಯಾವಾತನ ರಥಾಶ್ವಗಳ ಖುರಪುಟ ಧೂಳಿಯಿಂದ ನಾರುಡೆಗಳೆಲ್ಲ ಕೊಳೆಯಾದುವೊ ಆ ರಾಜ ಈಗ ಆಶ್ರಮಕ್ಕೆ ಬಾಧೆ ಉಂಟಾಗದ ಹಾಗೆ ಪ್ರಯತ್ನಿಸ ಹೊರಡುತ್ತಾನೆ! ಏನು ಪ್ರಯತ್ನಿಸಿದನೊ ; ಏನಾಯಿತೊ ! ಪ್ರಾಣಿಪ್ರಪಂಚದಲ್ಲಾದ ಕ್ಷೋಭೆಯನ್ನೇನೊ ಅವನು ತಪ್ಪಿಸಿರಬೇಕು. ಆದರೆ ಶಾಂತವಾಗಿದ್ದ ಪ್ರಾಣಪ್ರಪಂಚದಲ್ಲಿ ಮಾತ್ರ ವಿಕ್ಷೋಭೆಯನ್ನು ಹುಟ್ಟಿಸುತ್ತಾನೆ ! ಮದೇಭವನ್ನೇನೊ ಓಡಿಸಬಹುದು, ಆದರೆ ಧೂಳೀಧೂಸರವಾದ ಒದ್ದೆಮಡಿನಾರುಡೆ ಒಣಗಿದರೂ ಮೈಲಿಗೆಯೆ ; ಮತ್ತೆ ಅದನ್ನು ನೀರೊಳಗೆ ತೊಳೆದೆ ಮಡಿಮಾಡಬೇಕು !—ಆದರೆ ಶಕುಂತಲೆಯನ್ನು ಆ ನಿಷ್ಠುರ ವಿಧಿರಜಕ ಉಬ್ಬೆಗೂ ಹಾಕುತ್ತಾನೆ, ಉಳಿದವರನ್ನೇನೊ ಯಥಾ ಯೋಗ್ಯವಾಗಿ ತೊಳೆದರೂ !

ನಾಟಕ ಪ್ರಾರಂಭದ ದುಷ್ಯಂತನೆಲ್ಲಿ ನಾಟಕಾಂತ್ಯದವನೆಲ್ಲಿ. ನಾಟಕಾರಂಭದಲ್ಲಿ (ಎರಡನೆ ಅಂಕದಲ್ಲಿ) ಶಕುಂತಲೆಯನ್ನು ಕಂಡು ಅತಿ ಮೋಹಿತನಾಗಿದ್ದ ಆ 'ರಾಜರ್ಷಿ' ಕಣ್ವರನ್ನು ಕುರಿತು ಆಡುವ ಮಾತು ಎಂತಹವು ! ಋಷಿಗಳು ಎಷ್ಟೆ ಶಾಂತರಾದರೂ ಅಂತರ್ಗತ ತೇಜರಾಗಿರುತ್ತಾರೆ ; ಪ್ರತಿ ತೇಜಸ್ಸು ತಗುಲಿದರೆ ಆಗ ತಮ್ಮೊಳಗಿನ ಬೆಳಕನ್ನು ತೋರುತ್ತಾರೆ ; ಸ್ಪರ್ಶಾನು

ಕೊಲ ರವಿಕಾಂತದಂತೆ, ಎಂದು ಒಂದು ಘಳಿಗೆಯ ಹಿಂದೆ ಮಾತನಾಡಿದ ಆ ರಾಜಋಷಿ, ಮುಂದೆ ಶಕುಂತಲೆಯ ಮಾತು ಬಂದಾಗ ಹೇಳುವ ಮಾತಾದರೂ ಎಂತಹದು ? ಕೌಶಿಕ ಪುತ್ರಿಯಾದ ಈಕೆ, ದೇವಾಂಗನಾ ಶಿಶುವಾದ ಈಕೆ, ಕಣ್ವರನ್ನು ಸೇರಿದಳಲ್ಲ! ಎಕ್ಕದಗಿಡದ ಮೇಲೆ ಜಗುಳಿಬಿದ್ದ ಮಾಲತಿಯಂತೆ ಎನ್ನುತ್ತಾನೆ. ಅಬ್ಬ ! ಕಾಲೇಜು ಹುಡುಗರು ತಮ್ಮ ಪ್ರೇಯಸಿಯರ ಮುದಿ ತಂದೆಗಳನ್ನು ಅವರು ತಮ್ಮ ಸ್ವಚ್ಛಂದತೆಗೆ ಅಡ್ಡಿ ಬರುವರೆಂಬ ಭೀತಿ–ತಿರಸ್ಕಾರಗಳಿಂದ ಹಾಗೆ ಹೋಲಿಸುವುದುಂಟು. ಅಂತಹವರು ದುಷ್ಯಂತ ನಿಗಿಂತಲೂ ಹೇಗೆತಾನೆ ನಿಕೃಷ್ಟರು ? ಕಣ್ವರನ್ನು, ಅದೂ ಅವರ ಆಶ್ರಮದಲ್ಲೆ ಇದ್ದುಕೊಂಡು, ಹಾಗೂ ಋಷಿಗಳ ಮಹಿಮೆಯನ್ನು ಆಗತಾನೆ ಪ್ರಶಂಸಿಸಿಯೂ ಹೀಗೆನ್ನಬೇಕಾದರೆ, ಅವನಿಗಿದ್ದ ಶಕುಂತಲಾಮೋಹ ಎಷ್ಟು ಅಂಧವಾದುದೆನ್ನ ಬೇಕು.

ಆದರೆ ಇದೆ ದುಷ್ಯಂತ ಆರನೆಯ ಅಂಕದಲ್ಲಿ ಆಡುವ ಮಾತನ್ನು ನೋಡಿ. ಶಕುಂತಲೆಯನ್ನು ನೆನೆದು ನೆನೆದು ಅತಿರೇಕ ದುಃಖನಾಗಿದ್ದ ವೇಳೆಯಲ್ಲಿ ಶಕುಂತಲೆಯ ಚಿತ್ರಪಟದಲ್ಲಿ ಮೂರು ಜನರಿರುತ್ತಾರೆ : ತನ್ನ ಪ್ರಿಯೆ ಶಕುಂತಲೆ ಮತ್ತೆ ಆಕೆಯ ಪ್ರಿಯಸಖಿಯರಾದ ಅನಸೂಯಾ ಪ್ರಿಯಂವದೆಯರು. ಅದಷ್ಟೆ ಸಾಕಾಗಿದ್ದಿತು. ಆದರೆ ಅವನು ಆ ಚಿತ್ರವೂ ಕೂಡ ಅಪೂರ್ಣ ಎನ್ನುತ್ತಾನೆ. ಕಾರಣ ಅದರಲ್ಲಿ ಇನ್ನೂ ಬರೆಯಬೇಕಾದ ಚಿತ್ರಗಳಿವೆಯಂತೆ. ಏನನ್ನು ಬರೆಯಬಹುದೆಂದು ನಾವೂ ಯೋಚಿಸುತ್ತೇವೆ. ಹೊಳೆಯುವುದೇ ಇಲ್ಲ. ಏನಾದರೂ ಹೊಳೆದರೆ ಅದು ಆ ವಿದೂಷಕನಿಗೆ ಆನಿಸಿದ ವಿಚಿತ್ರ ಕಲ್ಪನೆಗಿಂತ ಬಹು ಬೇರೆಯೇನೂ ಆಗಿದ್ದಿರಲಾರದು. ಆದರೆ ರಾಜನೆ ಆ ಸುಂದರತಮವಾದ ಚಿತ್ರವನ್ನು ಕೊಡುತ್ತಾನೆ :

"ಕಾರ್ಯಾ ಸೈಕತಲೀನ ಹಂಸಮಿಥುನಾ ಸ್ರೋತೋವಹಾ ಮಾಲಿನೀ
ಪಾದಾಸ್ತಾಮಭಿತೋ ನಿಷಣ್ಣ ಹರಿಣಾ ಗೌರೀಗುರೋಃ ಪಾವನಾಃ ।
ಶಾಖಾಲಂಬಿತ ವಲ್ಕಲಸ್ಯ ಚ ತರೋರ್ನಿರ್ಮಾತುಮಿಚ್ಛಾಮ್ಯಧಃ
ಶೃಂಗೇ ಕೃಷ್ಣಮೃಗಸ್ಯ ವಾಮನಯನಂ ಕಂಡೂಯಮಾನಾಂ ಮೃಗೀಂ" *

---

* ಈ ಪದ್ಯವನ್ನು ಶ್ರೀ ತೀ.ನಂ.ಶ್ರೀ. ಅವರು ಭಾವಪೂರ್ಣವಾಗಿ ತಮ್ಮ ಉಪ ನ್ಯಾಸಗಳಲ್ಲಿ ಉದ್ಧರಿಸಿ ತನ್ಮಯತೆಯಿಂದ ವಿವರಿಸಿರುವುದು ನನಗೆ ಈ ಸಂದರ್ಭದ ವಿವರಣೆ ಬರೆಯುವಾಗ ಸ್ಫೂರ್ತಿಯಾಗಿದೆ. ಅದಕ್ಕಾಗಿ ಅವರಿಗೆ ಋಣಿ, ಕೃತಜ್ಞ.

(ಮರಲೊಳಗಾಡುವಂಚೆಗಳಿನೊಪ್ಪುವ ಮಾಲಿನಿಯಂ ಮೃಗಾಳಿ ಪ
ಟ್ಟಿರೆ ಕರಮೊಪ್ಪುತಿರ್ಪ ತುಹಿನಾದ್ರಿಯ ತಪ್ಪಲನಾರ್ದ್ರ ವಲ್ಕ ಬಂ
ಧುರ ತರುಮೂಲದೊಳ್ ಹರಿಣ ಶೃಂಗದೆ ತನ್ನಯ ವಾಮನೇತ್ರಮಂ
ತುರಿಸುತಮಿರ್ಪ ಪೆಣ್ಮೃಗಮುಮಂ ಬರೆಯಲ್ಕಿದರಲ್ಲಿ ವಾಂಛಿಪೆಂ)

ಎಷ್ಟು ಸುಂದರವಾಗಿದೆ ಈ ಚಿತ್ರ ; ಎಷ್ಟು ಧ್ವನಿಪೂರ್ಣವಾಗಿದೆ. ಮಾಲಿನಿಯ ತೀರದ ಮರಲೊಳಗೆ ಕರಗಿದಂತೆ ತೋರುತ್ತಿರುವ ಹಂಸಮಿಥುನವೊಂದು, ಅರೆನಿದ್ರಿಸುತ್ತಿರುವ ಹರಿಣಗಳ ಹಿಂಡಿರುವ ಗೌರೀಗುರುವಾದ ಹಿಮಾಲಯದ ತಪ್ಪಲೊಂದು, ಕೊಂಬೆಗಳ ಮೇಲೆ ಆರಬಿಟ್ಟಿರುವ ನಾರುಡೆಗಳ ಅಡಿಯಲ್ಲಿ ತನ್ನ ಎಡಗಣ್ಣಿನ ನವೆಯನ್ನು ತನ್ನ ಇನಿಮಿಗದ ಕೋಡಿನಿಂದ ತುರಿಸಿಕೊಳ್ಳುತ್ತಿರುವ ಹೆಣ್ಣಿಗವೊಂದು, ಇವಿಷ್ಟನ್ನು ಆ ಚಿತ್ರದಲ್ಲಿ ಬರೆಯಬೇಕೆಂಬಾಸೆ, ಅವನಿಗೆ. ಅಲ್ಲಿಯತನಕ ಆ ಚಿತ್ರ ಅಪೂರ್ಣ. ಮೇಲಿನ ಆ ಚಿತ್ರವೆ ಬಹಳ ಅರ್ಥಪೂರ್ಣವಾಗಿದೆ. ಈ ಎಲ್ಲ ಚಿತ್ರಗಳಲ್ಲೂ ಮಿಥುನಗಳೆ ಇದ್ದರೂ ಯಾವೂ ಉದ್ರಿಕ್ತ ಕಾಮವಲ್ಲ ; ಮಾಗಿದ ಪ್ರಶಾಂತವಾದ ದಾಂಪತ್ಯ ಪ್ರಣಯವುಳ್ಳವು. ಹಂಸಗಳ ಜೋಡಿ ಮರಳಿನಲ್ಲಿ ಕರಗಿದಂತೆ ಇರುವಷ್ಟರಮಟ್ಟಿಗೆ, ಗಂಡುಜಿಂಕೆ ಕಣ್ಣನವೆತವನ್ನು ತನ್ನ ಹೆಣ್ಣು ಜಿಂಕೆಯ ಕೊಂಬಿನಂಚಿನಿಂದ ತುರಿಸಿಕೊಳ್ಳುವಷ್ಟುಮಟ್ಟಿಗೆ ಅನುದ್ವಿಗ್ನಕಾರಿ. ಇಲ್ಲಿ ಪ್ರಾರಂಭಪ್ರಣಯದ ಆವೇಗ ಆವೇಶಗಳಿಲ್ಲ. ನವರಾತ್ರಿಯ ನದಿಯಾಗಿದೆ ಪ್ರೀತಿ. ನವೆತವಿದೆ, ಆದರೆ ಕಣ್ಣನವೆತದಷ್ಟು ಸೂಕ್ಷ್ಮ; ಅದರ ಪರಿಹಾರವೂ ಸೂಕ್ಷ್ಮ; ಎಚ್ಚರತಪ್ಪಿದರೆ ಕಣ್ಣೇರಿಯಬಹುದಾದ ಮೊನೆಕೊಂಬಿನ ಸಹವಾಸ!....ಜೊತೆಗೆ ಈ ಯಾವ ಜೋಡಿಯೂ ಕಾರ್ಯಾಸಕ್ತವಾಗಿಲ್ಲ. ಪ್ರಶಮನವೆ ಅವುಗಳ ಕರ್ಮಯೋಗವಾಗಿದೆ. ಜೊತೆಗೆ ಬೇರೆ ನಾರುಡೆಯ ಅಡಿಯಲ್ಲೆ ಮಲಗಿವೆ. ಅದರ ಪ್ರಭಾವ ಅವುಗಳ ಮೇಲೂ ಆಗಿದ್ದಿರಬೇಕು. ಅವುಗಳಿರುವುದರಿಂದ ನಾರುಡೆಗಳ ಪಾವಿತ್ರ್ಯಕ್ಕೇನು ಭಂಗವಾಗುವುದಿಲ್ಲ. ಇದಿಷ್ಟೂ ಒಂದರ್ಥ. ಮತ್ತೊಂದರ್ಥ ಮತ್ತೂ ವ್ಯಾಪಕವಾಗಿರುವುದುಂಟು. ನಾಟಕದ ಮೊದಲ ಭಾಗದಲ್ಲಿ, ದುಷ್ಯಂತ ಶಕುಂತಲೆಯನ್ನು ತಪೋವನದಿಂದ ಬೇರ್ಪಡಿಸಿ ಪಡೆಯಬಯಸುತ್ತಾನೆ ; ನೋಡಲೆಳಸುತ್ತಾನೆ. ಹಾಗಿದ್ದುದರಿಂದಲೇ ಕಣ್ವಸಹಿತಳಾದ ಶಕುಂತಲೆಯನ್ನು ಅವರಿಂದ ಬೇರ್ಪಡಿಸುವ ಆಶಯವನ್ನು ತೋರುತ್ತಾನೆ. ಅವರಿಬ್ಬರೂ ಒಂದೆಡೆ ಇರಬಾರದು. ಎಷ್ಟು [illegible]! [illegible] ಕಣ್ವ ಕೃ[illegible]ದ್ದರೆ ಅವಳು

ಸ್ಮೃತಜೀವಿ ಆಗಿರುತ್ತಿದ್ದಳೋ, ಜೀವಿಸಿದ್ದರೂ ಆರಣ್ಯಕರ ಮಕ್ಕಳಿಗಿಂತಲೂ ಹೆಚ್ಚೇನೂ ಮುಂದೆಬರುತ್ತಿರಲಿಲ್ಲವೊ ಅಂಥ ಆ ಋಷಿಯನ್ನೇ ಪಕ್ಕೆಯ ಗಿಡ ವೆಂದು ಭಾವಿಸಿತು ಪ್ರಾರಂಭದ ಅವನ ಉದ್ರಿಕ್ತ ಕಾಮಭಾವ. ಅಂದರೆ ಶಕುಂತಲೆ ಮಾತ್ರ, ತಪೋವನ ವಿವಿಕ್ತವಾದ ಹೆಣ್ಣೊಂದು ಮಾತ್ರ ಆಗ ಬೇಕಾಗಿದ್ದಿತು. ಆದರೆ ಇಂದು, ಶಕುಂತಲೆಯೊಡನೆ ಅವಳ ಸಖಿಯರಿದ್ದರೂ, ಆ ಮೇಲಿನ ಚಿತ್ರ ಅಪೂರ್ಣವಾಗಿಯೆ ತೋರುತ್ತದೆ ಅವನಿಗೆ. ಋಷಿ ಪ್ರತಿನಿಧಿ ಯಾಗಿ ವಲ್ಕಲವಿದೆ. (ಕಣ್ವರನ್ನೇಕೆ ತರಬಾರದಿತ್ತು ಎಂದು ಕುಚೇಷ್ಟೆ ಮಾಡ ಬಹುದು. ಆ ಚಿತ್ರದ ರಸಪ್ರಪಂಚಕ್ಕೆ ಯಾವ ಗಂಡಸೂ ಬರಕೂಡದು, ದುಷ್ಯಂತ ಸಹಿತವಾಗಿ!) ಆದ್ದರಿಂದ ದುಷ್ಯಂತನಿಂದು ಶಕುಂತಲೆಯನ್ನು ಅಪಹರಿಸುತ್ತಿಲ್ಲ. ಅವಳನ್ನು ಅವಳಿರುವ ಸಮಗ್ರ ಆವರಣವನ್ನೂ ಪ್ರೀತಿಸು ತ್ತಿದ್ದಾನೆ, ಸಂವರಿಸುತ್ತಿದ್ದಾನೆ. ಅವಳನ್ನು ಅವಳಿರುವ ಆವರಣದಿಂದ ವಿವಿಕ್ತ ಗೊಳಿಸದೆ ಅಲ್ಲಿ ಬೆಳೆಯ ಬಿಟ್ಟು ಅಲ್ಲೆ ಹಾಗೆಯೆ ಪ್ರೀತಿಸುತ್ತಿದ್ದಾನೆ. ಅಂದು ವ್ಯಕ್ತಿಮಿತವಾಗಿದ್ದ ರಾಗೋದ್ರೇಕವಿಂದು ಸಮಗ್ರಾವರಣ ವ್ಯಾಪ್ತವಾದ ಪ್ರಶಮಿತ ಅನುರಾಗವಾಗುತ್ತದೆ. ಮೊದಲ ದುಷ್ಯಂತನಿಗೂ ಇಂದಿನ ದುಷ್ಯಂತನಿಗೂ ಇರುವ ವ್ಯತ್ಯಾಸವನ್ನು ತಿಳಿಸುವುದಕ್ಕೆ ಈ ಸನ್ನಿವೇಶಕ್ಕಿಂತ ಬೇರೆ ನಿದರ್ಶನ ಬೇಕೆ ?

ಪ್ರಾರಂಭ ಪ್ರಣಯ ಸನ್ನಿವೇಶದಲ್ಲಿ ದುಷ್ಯಂತ ಮಾತ್ರವೇ ಅಲ್ಲ ಶಕುಂತಲೆಯೂ ತನ್ನನ್ನು ಬೆಳಸಿದ ತಪೋವನದ ಆವರಣವನ್ನು ಮರೆತು ತನ್ನ ಭಾಗ್ಯದೇವತೆಯಾದ ಕಣ್ವರ ಪ್ರೀತಿಯನ್ನೂ ನೆನೆಯದೆ ಪರವಶಳಾಗುತ್ತಾಳೆ. ಅವಳು ಮಾಡಿದ ಅಪರಾಧ ಅತಿಥಿಕಾರ್ಯವನ್ನು ಮಾಡದೆ ಪ್ರೈನುರೆತುದೇ ಅಲ್ಲ, ಕವಿ ರವೀಂದ್ರರು ಸುಂದರವಾಗಿ ಹೇಳಿದಂತೆ. ನಾಲ್ಕನೆಯ ಅಂಕದಲ್ಲಿ, ಪತಿ ಮಂದಿರಕ್ಕೆ ತೆರಳುವಾಗ ಕಾಡೆಲ್ಲವನ್ನೂ ಮಾತಾಡಿಸಿ ಕಂಬನಿಗರೆದು ಬಿಡಲಾರದೆ ಬಿಟ್ಟು ಹಿಂದೆ ಹಿಂದೆ ನೋಡುತ್ತ ಮುಂದಡಿಯಿಟ್ಟು ತೆರಳುವ ಶಕುಂತಲೆ ಮೊದಲಂಕಗಳಲ್ಲಿ ಆ ಎಲ್ಲವನ್ನೂ ಮರೆಯುತ್ತಾಳೆ; ಅವೆಲ್ಲಕ್ಕೂ ಕುರುಡಾಗುತ್ತಾಳೆ. ಅದು ನ್ಯಾಯವಿರುದ್ಧವಾದ ಅಪರಾಧವೆಂದಲ್ಲ. ತಾ ಪಡೆದ ಪ್ರೀತಿವಾತ್ಸಲ್ಯಕ್ಕೆ ಅವಜ್ಞೆ ತೋರಿದ ಸಹಜಾಪರಾಧವೆಂದಷ್ಟೆ. ಅದಕ್ಕೆ ಫಲ ತಿಳಿದೇ ಇದೆ. ಈ ಅಪರಾಧದಲ್ಲಿ ಅವಳಂತೆ ಅವಳ ಗೆಳತಿಯರೂ

ಭಾಗಿಗಳು. ಅವರಾದರೂ ಅವಳ ಪ್ರಣಯಾವೇಶವನ್ನು ಕೊಲ್ಲದೆ ಸಂಯಮನ ಗೊಳಿಸಬಹುದಿತ್ತು. ಅದರ ಬದಲು ಅವರೂ ಅದನ್ನು ಉದ್ವೇಗಗೊಳಿಸುತ್ತಾರೆ; ಗೋಪನ ಮಾಡುತ್ತಾರೆ. ಕಣ್ವರೇನೊ ಇರಲಿಲ್ಲ; ವಯೋವೃದ್ಧಳೂ ಗೌರವಾನ್ವಿತಳೂ ಆದ ಗೌತಮಿಯಾದರೂ ಇರಲಿಲ್ಲವೆ? ಆಕೆಯನ್ನಾದರೂ ಕೇಳಬಾರದಿತ್ತೆ? ಆಕೆಗೂ ಪ್ರಣಯತಾಪವನ್ನು ತಿಳಿಸದೆ ಹೋಗುತ್ತಾರೆ. ಪಾಪ ಆ ವೃದ್ಧ-ಮುಗ್ಧೆ ಶಕುಂತಲೆಯ ಮನ್ಮಥ ತಾಪವನ್ನು ಅನ್ಯಥಾ ಭಾವಿಸಿ ಮಂತ್ರೋದಕವಾದ ದರ್ಭೋದಕವನ್ನು ತರುತ್ತಾಳೆ; ಅವಳ ಮುಡಿಯ ಮೇಲೆ ಸಿಂಚಿಸುತ್ತಾಳೆ. ಆ ರಕ್ಷೆಯೂ ಇಲ್ಲದಿದ್ದರೆ ಅಂದು ಅವಳೇನಾಗುತ್ತಿದ್ದಳೊ!....ಹೋಗಲಿ ಆ ಸಖಿಯರು ಈ ಪ್ರಣಯ ವೃತ್ತಾಂತವನ್ನು ತಿಳಿಸದುದಕ್ಕೆ ಕಾರಣವಾದರೂ ಏನು? ಭೀತಿಯಾದರೂ ಏನು? ಅಧೈರ್ಯವಾದರೂ ಏನು? ಗೌತಮಿ ಅನುಮತಿಸಳು ಎಂಬ ಭೀತಿಯೆ? ಹಾಗಾದರೆ ಮತ್ತಾರು ಅನುಮತಿಸುತ್ತಾರೆ ಎಂಬ ಧೈರ್ಯ? ಪ್ರಣಯ ಭಾವಗಳ ಅನುಭವವಾಗಲಿ ಪ್ರಣಯಿಗಳ ಪರಿಚಯವಾಗಲಿ ಇಲ್ಲದ ಈ ಋಷಿಕನ್ಯೆಯರಿಗೆ ಶಕುಂತಲೆಯ ಪ್ರಣಯವನ್ನು ಗೋಪನ ಮಾಡಿ ಅದನ್ನು ತ್ವರಿತಗೊಳಿಸುವಲ್ಲಿ ಎಷ್ಟು ಧೈರ್ಯವಿದೆ, ಸಾಹಸವಿದೆ! ಅವರೂ ತಪ್ಪೆಸಗಲಿಲ್ಲವೆ? ಭಾವ ಪರವಶಳಾದ ಶಕುಂತಲೆಗೇನೊ ಹೊರಗೆಲ್ಲ ಕುರುಡುಗಂಡಿತು; ಅವರಿಗೆ? ಆ ಭಾವದ ಪ್ರಥಮ ಪರಿಚಯವೂ ಇಲ್ಲದ ಅವರಿಗೆ? ತಪ್ಪಲ್ಲವೆ ಅವರು ತೋರಿದ ಆತುರ? ಅವರು ಕಟ್ಟಿದ ಗುಟ್ಟಿನ ಕೋಟೆ ಕಾಪಿಟ್ಟದ್ದೇನನ್ನು? ಬೆಳಕನ್ನೆ? ಅರೆಗತ್ತಲನ್ನೆ?

ಮುಂದೆ ನೋಡೋಣವಂತೆ. ದುಷ್ಯಂತ ಶಕುಂತಲೆಯರ ಪ್ರಾರಂಭ ಪ್ರಣಯ ವಿಧಾನವೆ ಶುಭಸೂಚಕವಾಗಿದ್ದಂತೆ ತೋರುವುದಿಲ್ಲ. ಯಾರು ಎಷ್ಟೆ ಹೇಳಬಹುದು—ದುಷ್ಯಂತನಿಗೆ ಅಂದು ಉದಿಸಿದ ರಾಗ ಶುದ್ಧ ಪ್ರೇಮವೆಂದೇ ಹೇಳಬಹುದು— ಆದರೂ ಅದು ತಾನಾಗಿರುವುದೆ ಆಗಿರುತ್ತದೆ. ಮುಖ ಬೆಲೆಗೆ ಅವನ ಅಂದಿನ ಮಾತನ್ನು ಕೊಂಡುಕೊಳ್ಳುವುದಾದರೆ ಅದರ ಒಳಬೆಲೆ ತಿಳಿದಾಗ ನಿರಾಶರಾಗಬೇಕಾದೀತು. ಅನುರಕ್ತ ಘಳಿಗೆಯಲ್ಲಿ ಲೋಕದ ಯಾರೂ ಹಾಗಲ್ಲದೆ ಮತ್ತೇನೂ ಹೇಳುವುದಿಲ್ಲ. ಹೋಗಲಿ, ದುಷ್ಯಂತ ಒಂದು ಎರಡನೆಯ ಅಂಕಗಳಲ್ಲಿ ಬರಿದೆಯೆ ಆಡಿದ ಸುಳ್ಳು ಮಾತುಗಳಿಗೆ ಲೆಕ್ಕವುಂಟೆ? ಮಾತುಮಾತು ಸುಳ್ಳು,

ತಾನು ರಾಜನ ಕಡೆಯುವನು ಎಂದದ್ದು (ಅದೂ ಕೂಡ ಬಹಳ ಯೋಚಿಸಿದ ಮೇಲೆ ಹೇಳುವುದು.) ಎರಡನೆಯದು ಉಂಗುರ ಕೊಡುವಾಗ ಗುರುತು ತಿಳಿಯಿತಲ್ಲಾ ಎಂದಾಡುವ ಸುಳ್ಳು ; ಮೂರನೆಯ ಭಯಂಕರ ಅಸತ್ಯ ಮಾಢವ್ಯನಿಗೆ ಹೇಳುವ ಸುಳ್ಳು. ಅದೂ ಎಂತಹುದು ! ಅಬ್ಬ ! ಶಕುಂತಲೆಯನ್ನು ಅಷ್ಟೆಲ್ಲ ದೀರ್ಘವಾಗಿ ವರ್ಣಿಸಿ, ಕಣ್ವರನ್ನು ಬೈದು ಎಲ್ಲಾ ಆದ ಮೇಲ್ವೆ, ಒಂದು ಕಾರಣಕ್ಕಾಗಿ, ಎಲ್ಲಿ ಈ ಮಾಢವ್ಯ ಊರಿಗೆ ಹೋದಮೇಲೆ ತನ್ನ ನವೀನ ಪ್ರಣಯವನ್ನು ಗುಲ್ಲೆಬ್ಬಿಸುತ್ತಾನೊ ಎಂದು, ಆಡುವ ಸುಳ್ಳು ಮಾತು: "ಎಲೈ ಮಿತ್ರನೆ....ತಪಸ್ವಿ ಕನ್ಯೆಯಾದ ಶಕುಂತಳೆಯಲ್ಲಿ ನಿಜವಾಗಿಯೂ ನನಗೆ ಅನುರಾಗವಿಲ್ಲ,

> ಹರಿಣಗಳೊಡನೆ ಕಾಮನ ಪರಿಯರಿಯದೆ ಬಳೆದಳೆಲ್ಲಿ ! ನಾವೆಲ್ಲಿ ! ಕರಂ ಪರಿಹಾಸಕುಸಿದ್ದುದಂ ನೀಂ ಪರಮಾರ್ಥಮಿದೆಂದು ಬಗೆಯ ಬೇಡೈ, ಮಿತ್ರಾ!"

ಭಯಂಕರವಿದು. ನಗ್ನ ಹತ್ಯೆಯಿದು ! ತಾನೊಲಿದ ಯಾರನ್ನಾದರೂ ಹಾಗೆ ಅನ್ನುತ್ತಾರೇನು ? ಅನ್ನಬಹುದು ; ಯಾರಮುಂದೆ, ಯಾವ ಕಾರಣಕ್ಕಾಗಿ ? ತನ್ನ ನರ್ಮಸಚಿವನ ಮುಂದೆಯೆ ? ಅದು ಅಪವಾದ ಭೀತಿಗಾಗಿಯೆ ? ಗುಟ್ಟು ಗೊತ್ತಾಗುತ್ತದಲ್ಲಾ ಎಂದು ಇಂದು ಸುಳ್ಳು ಹೇಳಿದ ವ್ಯಕ್ತಿ ಗುಟ್ಟಿನ ಪೊಟ್ಟೆಯಾದ ಪ್ರೀತಿಯನ್ನೆ ಏಕೆ ನಿಂದಿಸಲಾರ ಮುಂದೆ ? "Before the cock crows twice you will deny me thrice"ಎಂದು ಕ್ರಿಸ್ತ ಭಗವಾನ್ ತನ್ನ ಶಿಷ್ಯಶ್ರೇಷ್ಠನಿಗೆ ಹೇಳಿದ. ಅದು ಸತ್ಯವೇ ಆಯಿತು. ಇಲ್ಲೂ ಅಷ್ಟೆ. ಎಂದಿದ್ದರೂ ತನ್ನ ಹೊಸ ಗೆಳತಿಯನ್ನು ವರಿಸಿ ರಾಣಿವಾಸಕ್ಕೆ ಕರೆಸಿಕೊಳ್ಳಲೇ ಬೇಕೆಂಬ ಹಟವಿದ್ದಿದ್ದರೆ ಈ ಗುಟ್ಟುರಟ್ಟಿಗೆ ಸುಳ್ಳುಹೇಳಬೇಕೆ ? ಮೊದಲೆ ಸುದ್ದಿ ಹರಡಿದ್ದರೆ ತಾನು ಊರಿಗೆ ಹೋಗುವ ವೇಳೆಗೆ, ಆಮೇಲೆ ಶಕುಂತಲೆಯನ್ನು ಅಂತಃಪುರಕ್ಕೆ ಕರೆಸಿಕೊಳ್ಳುವ ವೇಳೆಗೆ, ಅಲ್ಲಿನ ಅವಾಂತರ ಕಡಿಮೆಯಾಗುತ್ತಿತ್ತು ಎಂಬ ವಿವೇಕವಿರಲಿಲ್ಲವೆ ? ವಿವೇಕ ಇದ್ದೂ ಕೂಡ ಅನ್ಯೋದ್ದೇಶವೇನಾದರೂ ಇತ್ತೊ ? ಈಗಲೆ, ಪ್ರೀತಿಗೆಮೊದಲೆ, ಇಷ್ಟು ಹೆದರಿ ಅಮೂ ಮಾಢವ್ಯನ ಬಳಿ ಸುಳ್ಳು ಹೇಳಿದ ಮೇಲೆ ಮುಂದೆ ತನ್ನ ಮಾತಿನಂತೆ ಶಕುಂತಲೆಯನ್ನು ದಿನ ಮೂರರಲ್ಲಿ ಅಂತಃಪುರಕ್ಕೆ ಕರೆಸಿಕೊಳ್ಳುವ ನೈತಿಕ ಧೈರ್ಯವಿದೆಯೆ ಆ ಚಪಲಧೀರನಿಗೆ ? ಇದೇ ಪರಿಹಾಸವೊ ? ಅದೇ ಪರಿಹಾಸವೋ ? ಇಂತಹ

ಆರ್ಥವಂಚನೆಗಳನ್ನು ನೈತಿಕ ಧೈರ್ಯ ದಾರಿದ್ರ್ಯಜನ್ಯವಾದ ಛದ್ಮವಂಚನೆಗಳನ್ನು ತಿದ್ದಲು ವಿಧಿಯೂ ಕೂಡ ಪರಿಹಾಸ ಮಾಡಬೇಕು ತಾನೆ ? ಹಾಗಿಲ್ಲವೆ ಬಿಟ್ಟರೆ ಅಂಥವರ ಕೈಗೆ ಸಿಲುಕಿದ ಮುಗ್ಧರಾದವರ ಪಾಡೇನು ? ಅವರನ್ನು ಇನ್ನೆಂತೂ ಬಿಡಿಸಿ ತರುವಂತಿಲ್ಲ ; ಉಳಿಸಬೇಕಷ್ಟೆ ! ಅದು ಹೇಗೆ ? ಇಂಥವರನ್ನು ಜೆಂಕಿಯಲ್ಲಿಟ್ಟು ತಿದ್ದುವ ಮೂಲಕ ; ಅಷ್ಟೆ. ಇದು ಹೋಗಲಿ, ಈ ಸುಳ್ಳಿನ ಜತೆಗೆ ಮುಂದೆಷ್ಟು ಸುಳ್ಳು ಬರುತ್ತವೆ ನೋಡಿ.

ಸಖಿಯರ ಮುಂದೆ ಶಕುಂತಲೆಯನ್ನು ಸ್ವೀಕರಿಸಿಕೊಳ್ಳುವಾಗ ಅವನು ಮಾಡುವ ಪ್ರತಿಜ್ಞೆ ಎಂತಹುದು :

"ಪಲವರಸಿಯರ್ ಎನಗಿರ್ದುಂ ಕುಲದುತ್ಕರ್ಷಾಸ್ಪದಂಗಳ್ ಎನಿಸುಗುಮಿರ್ವರ್
ಜಲನಿಧಿರಶನಾಂಚಿತೆಯಾದಿಳೆಯುಂ ನಿಮ್ಮಿರ್ವರಿಷ್ಯ ಸಖಿಯಾದಿವಳುಂ !"

ಈ ಮಾತಿಗೆ ಎಷ್ಟೆ ಬೆಲೆ ಕೊಟ್ಟರೂ ಅದೆಲ್ಲವೂ ತತ್ಕಾಲೀನ ಪ್ರಯೋಜನಕ್ಕಾಗಿ ಬೆಲೆ ಪಡೆಯುವ ಕಾಗದದ ನೋಟಿನಂತೆ, ಹೆಚ್ಚೆಂದರೆ, ಬಣ್ಣದ ನಾಣ್ಯದಂತೆಯೆ ವಿನಾ ಚಿನ್ನದ ನಾಣ್ಯದಂತಾಗುವುದಿಲ್ಲ. ಚಲಾವಣೆಯೇನೋ ಸಿಕ್ಕುತ್ತದೆ. ಆದರೆ ಯಾರಿಗೆ ಧೈರ್ಯ. ನಾಣ್ಯ ಕೊಟ್ಟ ಸರ್ಕಾರವೆ ತಾ ಕೊಟ್ಟ ನಾಣ್ಯವನ್ನೆ ಖೋಟಾ ನಾಣ್ಯ ಎನ್ನುವ ಘಳಿಗೆ ಬಾರದೆಂದು ? ಹೋಗಲಿ, ಮೇಲಿನ ಮಾತಿನ ವಾಚ್ಯಾರ್ಥವೆ ಆಗಲಿ ಅದು ಸತ್ಯವಾಗುವ ಪಕ್ಷಕ್ಕೆ ಅಂತಃಪುರದ ರಾಣಿಯರ ಬಾಯಿಗೆ ಮಣ್ಣು ಬೀಳುವುದೆ ? ಇದೆ ನಿಜದ ಪ್ರೀತಿ ? ಅವರಿಗೇನಾದರೂ ಈ ಮಾತು, ಯಾರಾದರು ಅದನ್ನು ಟೇಪ್‌ರೆಕಾರ್ಡ್ ಮಾಡಿಕೊಂಡು ಹೋಗಿ ತೋರಿದ್ದರೆ, ಕೇಳಿಸಿದ್ದರೆ ಅವರೇನೆನ್ನುತ್ತಿದ್ದರು ? ಒಮ್ಮೆ ತನಗೂ ಇದೆ ಮಾತು ಹೇಳಿದ್ದ ಎನ್ನುತ್ತಿದ್ದರೋ ಅಥವಾ ತನ್ನ ಗತಿ ಹಾಳಾಯತೆಂದು ಗೋಳಿಡುತ್ತಿದ್ದರೊ ? ಇದರೆ, ಆರನೆಯ ಅಂಕದ ರಾಜ ದುಷ್ಯಂತ ವರ್ತಿಸುವ ಬಗೆ ನೋಡಿ. ದುಃಖಗೊಂಡು ಶಕುಂತಲೆಯ ಚಿತ್ರಪಟದೊಡನೆ ಸಲ್ಲಾಪಿಸುತ್ತಿರುವಾಗ ಮತ್ತೊಬ್ಬ ರಾಣಿ ವಸುಮತಿದೇವಿ ಬರುವ ಸದ್ದು ಕೇಳಿದೊಡನೆಯೆ ಚಿತ್ರಪಟವನ್ನು ರಕ್ಷಿಸಿಕೋ ಎಂದು ಅವನು ಮಾಢವ್ಯನಿಗೆ ಸೂಚಿಸುತ್ತಾನೆ. ಅದನ್ನು ಕಂಡು ಅಗೋಚರೆಯಾದ ಸಾನುಮತಿ ಆಡುವ ಮಾತೇನು: "ಈತನು ಮತ್ತೊಬ್ಬಳಲ್ಲಿ ಮನಸುಳ್ಳವನಾಗಿದ್ದರೂ ಮೊದಲನೆಯವಳ ಪುರಸ್ಕಾರವನ್ನು ಇಚ್ಛಿಸುವನು. **ಆದುದರಿಂದ ಇವನ ಮೈತ್ರಿಯು ಸ್ಥಿರ**

ವಾದುದು." ಅದೇ ಮಾತನ್ನು ಮೂರನೆಯ ಅಂಕಕ್ಕೆ ಅನ್ವಯಿಸುವುದಾದರೆ ಮೇಲಿನ ಕೊನೆಯ ಮಾತು ತಾನಾಗಿಯೇ ಹಿಂದುಮುಂದಾಗುತ್ತದೆ: "ಆದು ದರಿಂದ ಇವನ ಮೈತ್ರಿಯು ಸ್ಥಿರವಾದುದಲ್ಲ." ಅದು ತಿಳಿಯಬಾರದಿತ್ತೆ ಸಖಿ ಯರಿಗೆ ? ಪಾಪ ತಪೋವನ ಜೀವಿಗಳು, ನಾಗರಿಕರ ವರ್ತನೆ ತಿಳಿಯದು. ಅಲ್ಲೊಬ್ಬ ಸಾನುಮತಿ ಇದ್ದಿರಬೇಕಾಗಿದ್ದಿತು. (ಇದ್ದರೂ, ಆಕೆಯಾಡುವ ಮಾತು ಬೇರೆಯವರಿಗೆ ಕೇಳುತ್ತಲೆ ಇರಲಿಲ್ಲವೇನೊ !)

ಋಷಿಯ ಶಾಪದಿಂದ ವಿಸ್ಮೃತಿಗೊಳ್ಳುವ ರಾಜ ಅಭಿಜ್ಞಾನಾಭರಣದರ್ಶನ ದಿಂದ ಸಂಸ್ಮರಣಗೊಳ್ಳುತ್ತಾನೆ ಎಂಬ ವಿಶಾಪವೂ ಇತ್ತು. ನೆನಪಿಗೆ ಗುರು ತೊಂದು ಬೇಕಾಗಿದ್ದರೆ ಅದು ಆಭರಣವೆ ಆಗಬೇಕಿತ್ತೆ ? ಆದೂ ಉಂಗುರವೆ ಆಗ ಬೇಕಿತ್ತೆ ? ಇದನ್ನು ನೋಡಿದರೆ ಶಾಪ ಕೊಡುತ್ತಿರುವ ಋಷಿಗೆ ಭವಿಷ್ಯದ ಅರಿವಿತ್ತೆಂದು ಅರಿವಾಗುವುದಿಲ್ಲವೆ ? ಅದನ್ನು ನಂಬದವರು ಶಾಪದಲ್ಲಾದರೂ ಹೇಗೆ ನಂಬಿಕೆ ಇಡುತ್ತಾರೆ ? ಒಂದು ವೇಳೆ ಋಷಿಗೆ ಮುನ್ನರಿವಿಲ್ಲದಿದ್ದರೆ ವಿಶಾಪ ನೀಡುತ್ತಿದ್ದರೆ ? ನೀಡಿದರೂ ಅಭಿಜ್ಞಾನಾಭರಣ ದರ್ಶನವನ್ನೆ ವಿಧಿಸುತ್ತಿದ್ದರೆ ? ಅಭಿಜ್ಞಾನಾಭರಣ ಎನ್ನುವಾಗ ಉಂಗುರವನ್ನೆ ನಿರ್ದೇಶಿಸುತ್ತಿರುವಂತೆ ತೋರು ತ್ತದೆ. ಅದಲ್ಲದೆ ಅಭಿಜ್ಞಾನವೆಂದಿದ್ದರೆ ಅದು ಎಂತಹದಾದರೂ ಆಗುತ್ತಿತ್ತು. ಕಾಣುವ ಗುರುತಿಗಿಂತ ಕಾಣದ ಭಾವದ ಅಭಿಜ್ಞಾನವೂ ಆಗಬಹುದಿತ್ತು. ದುಷ್ಯಂತನ ಮುಂದೆ ಶಕುಂತಲೆಯು ನಿರೂಪಿಸುವ ಏಕಾಂತ ಸಂಭಾಷಣೆಯೂ ಸಾಕಾಗಿತ್ತು. ಈ ಭಾವಾಭಿಜ್ಞಾನಕ್ಕಿಂತ ಬೇರೊಂದು ಆಭರಣ ಬೇಕಿತ್ತೆ ? ದುಷ್ಯಂತನಿಗೆ ನೆನಪುಂಟುಮಾಡಲು ಬೇರೆನೂ ಇರಲಿಲ್ಲವೆ ? ಹೋಗಲಿ, ಶಕುಂತಲೆ ಬರೆದ ಪ್ರಣಯ ಪತ್ರವನ್ನಾದರೂ ರಾಜ ಇಟ್ಟುಕೊಂಡಿದ್ದರೆ ? ಅದನ್ನು ತಾನು ಪಡೆಯುವ ಮೊದಲೆ ಅವನು ಶಕುಂತಲೆಯತ್ತ ಧಾವಿಸಿ ಹೋಗುತ್ತಾನೆ (ಅವನ ಆತುರವನ್ನು ಹೇಗೆ ಸಮರ್ಥಿಸಿಕೊಳ್ಳುವುದೊ ತಿಳಿ ಯದು.) ಆದರೆ ಅವಳು ಬಿಟ್ಟು ಹೋದಾಗ ದುಷ್ಯಂತ ತನ್ನ ಮುಂದಿದ್ದ ಶೂನ್ಯಲತಾಲಯವನ್ನು ದಿಟ್ಟಿಸುತ್ತ, ಶಕುಂತಲೆ ಮಲಗಿ ಬಿಟ್ಟು ಹೋದ ತಳಿರ ಹಾಸನ್ನೂ ಬರೆದಿದ್ದ ಪ್ರಣಯಪತ್ರವನ್ನೂ–ಆದಾಗಲೆ ನೆಲದಲ್ಲಿ ಬಿದ್ದು ಬಾಡಿತ್ತು–ನೋಡುತ್ತಾನೆ. ಆದರೆ ಅವನೇನೂ ಆ ಪ್ರಣಯ ಪತ್ರವನ್ನು ಕೈಗೆತ್ತಿಕೊಂಡಂತೆಯೂ ಕಾಣದು. ಆವೇಳೆಗೆ ಮತ್ತೇನೊ ಘಟನೆ ಒದಗುತ್ತದೆ

ಸರಿ. ಆದರೆ ಅದನ್ನಾದರೂ ಭಾವುಕಪ್ರಣಯಿಯಂತೆ ಮುದ್ದಿಸಿದನೆ? ತನ್ನೊಡನೆ ಕೊಂಡು ಹೋದನೆ ? ಪ್ರೀತಿಯಿಂದ ಕಾಪಿಟ್ಟನೆ ?ಅದು ಅಲ್ಲಿ ಒಣಗಿ ತರಗೆಲೆಯಲ್ಲಿ ಬೆರೆತ ಗೊಬ್ಬರವಾಯಿತೆ ? ಪ್ರಾಮಾಣಿಕನಾದ ಭಾವುಕ ಪ್ರೇಮಿಯಾರೂ ತನ್ನ ಪ್ರೇಯಸಿ ಬರೆಯುವ ಅಂತಹ ಪ್ರಣಯಾರ್ಪಣ ಪತ್ರಲೇಖನವನ್ನು ಕಡೆಗಣಿಸುವನೆ ? ಭಕ್ತ ತನ್ನ ಆರಾಧ್ಯ ದೈವದ ಸ್ಮರಣಸ್ಮಾರಕವಾಗಿ ಒಂದು ಹಲ್ಲನ್ನೊ ಕೂದಲನ್ನೊ ಪಾದುಕೆಯನ್ನೊ ಕಾಪಿಟ್ಟುಕೊಳ್ಳುತ್ತಾನೆ. ಅಷ್ಟೇಕೆ, ರವೀಂದ್ರರ ಕಾಬೂಲಿವಾಲ ಕಥೆಯಲ್ಲಿ ಬರುವ ಆ ಕಥಾನಾಯಕ ದೂರದ ಬಂಗಾಲಕ್ಕೆ ಬಂದಾಗಲೂ—ಸೆರೆಮನೆಯಲ್ಲಿದ್ದಾಗಲೂ—ತನ್ನ ಮಗಳ ಹೆಜ್ಜೆಗುರುತಿನ ಕಾಗದವನ್ನು ತನ್ನ ಒಳಂಗಿಯ ಒಳಜೇಬಿನಲ್ಲಿ ಎದೆಮಗ್ಗುಲಲ್ಲಿ ಇರಿಸಿಕೊಂಡಿರುತ್ತಾನೆ. ಅದನ್ನು ಕಂಡು ತನ್ನ ಮುದ್ದು ಮಗಳನ್ನು ನೆನೆದು ನಿಟ್ಟುಸಿರು ಬಿಡುತ್ತಾನೆ. ದುಷ್ಯಂತ ಮುಗ್ಧ ಉನ್ಮತ್ತ ಪ್ರಣಯಿಯಾಗಿದ್ದರೆ ಹೀಗೆಯೆ ಮಾಡುತ್ತಿದ್ದ. ಆ ಪ್ರಣಯ ಪತ್ರ ಅವನ ಪಕ್ಕದಲ್ಲೆ ಇದ್ದಿದ್ದರೆ–ಅವನ ಉಂಗುರ ಶಕುಂತಲೆಯ ಬಳಿ ಇದ್ದಿರಬೇಕಾದಂತೆ—ಆಗ ಅದೇ ಅಭಿಜ್ಞಾನವಾಗುತ್ತಿತ್ತು. ಆರನೆಯ ಅಂಕದಲ್ಲಿ ಅಷ್ಟೆಲ್ಲ ನೆನೆದು ಅಳುವ ಹೃದಯವಂತ ವ್ಯಕ್ತಿ ಮೂರನೆಯ ಅಂಕದಲ್ಲಿ ಎಂತಹ ಕೆಂಪು ನೀರಿನ ತೊರೆಯಾಗಿರುತ್ತಾನೆ! ತಾನು ತಿರಸ್ಕರಿಸಿದ ಸತಿ ಅನಾಥಳಾಗಿ ಇಟ್ಟ ಕಣ್ಣೀರು ಆ ಹೊತ್ತಿನಲ್ಲಿ,ಐದನೆಯ ಅಂಕದಲ್ಲಿ, ಸುಡುನೀರಾಗಿ ತೋರದಿದ್ದರೂ ಆರನೆಯ ಅಂಕದಲ್ಲಿ ಅದೆ ದುಷ್ಯಂತನಿಗೆ ವಿಷಶಲ್ಯವಾಗಿ ಶೋಷಿಸುತ್ತಿರುತ್ತದೆ. ಇದೇ ತರಹದ ಅನುಭವವಾಗಿರುತ್ತದೆ ಸ್ವಪ್ನ ವಾಸವದತ್ತ ನಾಟಕದ ಉದಯನನಿಗೆ. ತನ್ನ ವಧು ವಾಸವದತ್ತೆಯನ್ನು ಅಪಹರಿಸಿಕೊಂಡು ಹೋಗುವಾಗ ಅವಳು ತವರೂರಿನ ಹೆಬ್ಬಾಗಿಲನ್ನು ಬಿಡುವ ಹೊತ್ತಿನಲ್ಲಿ ಬಿಟ್ಟ ಕಂಬನಿ ಉದಯನನಿಗೆ ಆಗ ಯಾವ ಮರುಕವನ್ನೂ ತರದಿದ್ದರೂ, ಅವಳನ್ನು ಕಳೆದುಕೊಂಡೆನೆಂದು ತಿಳಿದಾಗ ಅವನಿಗೆ ಅದೆ ಕಂಬನಿ ನೆನಪಿನಲ್ಲಿ ಇರಿಯುವ ವಿಷಬಾಣವಾಗುತ್ತದೆ. ಅಪಹರಣೋತ್ಸಾಹದ ಪ್ರಣಯಿಗೆ ಕಾಣದಿದ್ದ ಕಣ್ಣೀರು ವಿಯೋಗದಲ್ಲಿ ದಳ್ಳುರಿಯಾಗಿ ಸುಡುತ್ತದೆ. ಬರಿಕಾವಿದ್ದೂ ಬೆಳಕಿಲ್ಲದಿದ್ದಾಗ ಪ್ರಣಯ ಏನನ್ನೂ ತೋರದು. ಅದು ಉದಯನನಿಗೇನು ದುಷ್ಯಂತನಿಗೂ ಅಷ್ಟೆ. ಅವನಿಗೆಂತೊ ಇವನಿಗೂ ದುರ್ಭರವಿಯೋಗವೆ ಪೂರ್ವಯೋಗದ ನಿಜಮಹತ್ತನ್ನು

ಅರಿಸುತ್ತದೆ, ಯಾತನೆಯ ಮೂಲಕ. ಆ ಯಾತನೆಯೆ ಅವರಿಗೆ ಹೆಚ್ಚು ಹೊಸ ಸಂವೇದನೆಯನ್ನು ತಂದುಕೊಡುತ್ತದೆ. ತಾವು ವಿಯೋಗಗೊಂಡದ್ದರ ಬಗ್ಗೆ ಗಾಢ ಪ್ರೀತಿಯನ್ನೂ ತರುತ್ತದೆ. ಹೀಗಾಗಿ ಆರನೆಯ ಅಂಕದಲ್ಲಿ ದುಷ್ಯಂತ ಅಷ್ಟು ತೀವ್ರ ಸಂವೇದನೆ ತೋರುತ್ತಾನೆ. ಸುಯೋಗದಿಂದ ಲಭಿಸುವ ಉಂಗುರವನ್ನು ಕಂಡು ಅಷ್ಟೆಲ್ಲ ನಿರರ್ಗಳ ಭಾವಧಾರೆ ಹರಿಸಿ ಹಗುರಾಗುವ ದುಷ್ಯಂತ ಮೂರನೆಯ ಅಂಕದಲ್ಲಿ ತನ್ನ ಪ್ರಣಯಿನಿ ಬರೆದ ಕಮಲಪತ್ರವನ್ನೂ ಕೈಗೆತ್ತಿ ಕಾಪಿಟ್ಟುಕೊಳ್ಳುವುದೂ ಇಲ್ಲ, ಎಂಬಂಶವಷ್ಟೆ ಸಾಕು ಅವನ ಪೂರ್ವೋತ್ತರ ಸ್ಥಿತಿಯ ಸಂಕ್ರಮಣವನ್ನೂ ತಿಳಿಸಲು.

ಮತ್ತೊಂದು ಅಂಶವನ್ನಿಲ್ಲಿ ಕಾಣಬೇಕು. ಪುರೋಹಿತರು ರಾಜನಿಗೆ ಕೊಡುವ ಸಲಹೆಯನ್ನಿಲ್ಲಿ ವಿವೇಚಿಸಬಹುದು: "ಪೂಜ್ಯೆಯಾದ ಈಕೆಯು ಹೆರುವವರೆಗೂ **ನನ್ನ ಮನೆಯಲ್ಲಿ** ಇರಲಿ ; ಹೀಗೇತಕ್ಕೆ ಹೇಳುವೆನೆಂದರೆ, ಮೊದಲಲ್ಲಿ ಚಕ್ರವರ್ತಿ ಲಕ್ಷಣವುಳ್ಳ ಪುತ್ರನು ಉದಿಸುವನೆಂದು ಋಷಿಗಳು ಹೇಳಿಯೆ ಇರುವರು ; ಹಾಗೆ ಈ ಮುನಿ ಪುತ್ರಿಯಲ್ಲಿ ಹುಟ್ಟುವ ಮಗನು ಚಕ್ರವರ್ತಿ ಲಕ್ಷಣದಿಂದ ಕೂಡಿರುವನೆಂದಾದರೆ ಆಮೇಲೆ ಅಭಿನಂದಿಸಿ ಈಕೆಯನ್ನು ನಿನ್ನ ರಾಣಿವಾಸಕ್ಕೆ ಸೇರಿಸು ; ಹಾಗೆ ಆಗದೆ ಇರುವ ಪಕ್ಷಕ್ಕೆ ಈಕೆಯನ್ನು ತಂದೆಯ ಬಳಿಗೆ ಕಳುಹಿಸುವುದು ಸಿದ್ಧವಾಗಿರುವುದು."

ಈ ಮಾತುಗಳನ್ನು ಎಚ್ಚರದಿಂದ ನೋಡಬೇಕಷ್ಟೆ. ಮೊದಲನೆಯ ಅಂಶ, ರಾಜಪುರೋಹಿತನು ತಾನೆ ಶಕುಂತಲೆಯನ್ನು ತನ್ನ ಮನೆಯಲ್ಲಿ ಆಕೆ ಪ್ರಸವಿಸುವ ತನಕ ಇಟ್ಟುಕೊಳ್ಳುವುದಾಗಿ ಹೇಳುತ್ತಾನೆ. ಸಲಹೆ ಕೊಟ್ಟು ಮಾತ್ರ ವಿರಮಿಸಿದೆ ಅದನ್ನು ಕಾರ್ಯಗತಮಾಡಲು ತಾನೆ ಮುಂದು ಬರುತ್ತಾನೆ. ಒಂದು ವೇಳೆ ಏನಾದರೂ ಆತನಿಗೆ ಶಕುಂತಲೆಯ ವಿಷಯವಾಗಿ ಸಂಶಯವಿದ್ದಿದ್ದರಾಗಲಿ, ದುಷ್ಯಂತ ತಾನು ಮದುವೆಯಾದ ಹೆಣ್ಣನ್ನು ಎಂದೂ ಮರೆಯಲಾರ ಎಂಬ ವಿಷಯವಾಗಿ ವಿಶ್ವಾಸವಿದ್ದಿದ್ದರಾಗಲಿ, ಹಾಗೆ ರಾಜ-ಪರಿತ್ಯಕ್ತೆಯಾದ ಹೆಣ್ಣನ್ನು ತಾನೆ ಕಾಪಾಡುತ್ತೇನೆ ಎಂದು ಎಂದೂ ಮುಂದೆ ಬರುತ್ತಿದ್ದಿರಲಿಲ್ಲ. ಒಂದು ವೇಳೆ, ಶಕುಂತಲೆಯು ಪ್ರಸವಿಸುವ ತನಕ ಇರಲಿ ನೋಡೋಣ ಎಂದು ತಾನೆ ಸಲಹೆ ಕೊಟ್ಟಿದ್ದರೂ ಆ ತನಕ ಆಕೆಯನ್ನು ರಕ್ಷಿಸುವ ಭಾರವನ್ನು ತಾನೆಂದೂ ಹೊರುತ್ತಿರಲಿಲ್ಲ. ತಾನೇಕೆ ಬರಿದೆ ಲೋಕಾಪವಾದಕ್ಕೆ ಗುರಿಯಾಗ

ಬೇಕು ಎಂದು ಸುಮ್ಮನಿರುತ್ತಿದ್ದ. ಮತ್ತೊಂದು ಅಂಶ, ಆಕೆಯಲ್ಲೇನಾದರೂ ಚಕ್ರವರ್ತಿ ಚಿಹ್ನೆಯಿರುವ ಮಗ ಜನಿಸಿದರೆ ರಾಜ ಆಕೆಯನ್ನು ಸ್ವೀಕರಿಸಬೇಕು ಎಂದು ಅವನಾಡುವ ಮಾತು. ಋಷಿಗಳ ಮಾತಿನಲ್ಲಿ ನಂಬಿಕೆ ಇಟ್ಟಿರುವುದು ಹಾಗಿರಲಂತೆ ; ಒಂದು ವೇಳೆ, ರಾಜನೆಂದೂ ಮದುವೆಯಾದ ಹೆಂಡತಿಯನ್ನು ಮರೆಯನೆಂಬುದರಲ್ಲಿ ಅಚಲ ವಿಶ್ವಾಸವಿದ್ದಿದ್ದರೆ ಹಾಗೆ ಅವನು ಆ ಸಲಹೆಯನ್ನಾದರೂ ತಾನೆ ಹೇಗೆ ನೀಡುತ್ತಿದ್ದ ? "ಅಪರಾಧತಿರಸ್ಕಾರ ಸಾಧ್ಯವಲ್ಲ. ಆದರೆ ಸಾಕ್ಷಿ ದೊರೆಯುವ ತನಕ, ಅಪರಾಧವನ್ನು ತಿರಸ್ಕರಿಸದೆ ಹಾಗೆ ಒತ್ತಟ್ಟಿಗಿಟ್ಟಿರೋಣ," ಎನ್ನುವ ನ್ಯಾಯಾಲಯದ ತೀರ್ಪಿನಂತಿದೆ ಅವನ ಸಲಹೆ. ರಾಜನ ನೈತಿಕ ಚಾರಿತ್ರ್ಯದಲ್ಲೆ ಕೇವಲ ವಿಶ್ವಾಸವಿದ್ದಿದ್ದರೆ ಅದರ ಆಧಾರದ ಮೇಲೆಯೆ ಸ್ಪಷ್ಟವಾದ ಕೊನೆಯ ಮಾತನ್ನಾಡಬೇಕಾಗಿತ್ತು. ಅದೇ ಅನಿಶ್ಚಿತ ; ಅದರಿಂದಲೆ ಸಾಕ್ಷಿಬೇಕಾಯಿತು. ಆ ಸಾಕ್ಷಿಯೆ ಮುಂದೆ ಹುಟ್ಟುವ ಮಗು. ಋಷಿವಾಣಿಯಲ್ಲಿ ಶ್ರದ್ಧೆಯಿದ್ದುದರಿಂದ, ಜಾತಕಗಳಲ್ಲಿ ಪರಮವಿಶ್ವಾಸವಿದ್ದುದರಿಂದ ಆ ರಾಜಪುರೋಹಿತ ಹಾಗೆ ಧೈರ್ಯ ತಾಳಿದ. ಆ ಯಾವ ನಂಬಿಕೆಯೂ ಇಲ್ಲದೆ ಅನ್ಯ ಸಾಕ್ಷ್ಯಾಧಾರಗಳನ್ನೆ ಹುಡುಕುವ ನ್ಯಾಯವಾದಿಯಾಗಿದ್ದಿದ್ದರೆ ಶಕುಂತಲೆಯ ಗತಿಯೇನಾಗುತ್ತಿತ್ತು ?

ರಾಜಪುರೋಹಿತನಿಗೆ ರಾಜನ ಜಾತಕ ಚೆನ್ನಾಗಿ ತಿಳಿದಿದೆ ! ಅವನ ಬದುಕಿನ ಪರಿಚಯವಿದೆ. ಅವನು ಹೇಗೆತಾನೆ ಶಕುಂತಲೆಯನ್ನು ತ್ಯಜಿಸಲು ಸಲಹೆ ಮಾಡಿಯಾನು ? ಇದೇ ಐದನೆಯ ಅಂಕದ ಪ್ರಾರಂಭದ ಗೀತೆ ಪ್ರೇಕ್ಷಕರಿಗೆ ಮೊದಲ ಬಾರಿಗೆ ಮಾತ್ರ ಕೇಳಿಸಿದ್ದರೆ ಅಂತಹ ಗೀತೆಗಳೆಷ್ಟು ಎಷ್ಟು ಬಾರಿ ಆ ಪುರೋಹಿತನ ಕಿವಿಗೆ ಬಿದ್ದಿಲ್ಲ ! ಎಷ್ಟು ನತದೃಷ್ಟ ರಾಣಿಯರನ್ನು ಸಮಾಧಾನ ಪಡಿಸಬೇಕಾದ ಅವಕಾಶ ಬಂದಿದ್ದಿರಲಾರದು : ಅರಮನೆಯ ಸಹಜತೆ ಅವನಿಗೆ ತಿಳಿದಿರುವಂತೆ ಮತ್ತಾರಿಗೂ ತಿಳಿದಿದ್ದಿರಲಾರದು.

ಹಂಸಪದಿಕೆಯ ಹೃದಯ ವಿದ್ರಾವಕ ಗೀತೆಯನ್ನು ತೇಲಿಸಿ ಹಾರಿಸುವ ವಿಮರ್ಶಕರು ರಾಜಪಕ್ಷಪಾತಿಗಳಾಗಿ ಏನೇನೊ ಹೇಳುವುದುಂಟು. ರಾಜನ ನೂರಾರು ಕಾರ್ಯಗೊಂದಲದಲ್ಲಿ ಎಲ್ಲೊ ಒಮ್ಮೆ ಪ್ರೀತಿ ಪಡೆಯಲಾಗದ ಯಾವಳೊ ಹೆಣ್ಣು ಹಾಡಿದ ಗೀತೆ ಅದು, ಎನ್ನುವ ವಿಮರ್ಶೆ ಸತ್ಯದೂರವಾದುದಷ್ಟೆ. ಆ ಹಾಡನ್ನು ಮತ್ತೆ ಕೇಳಿರಿ :

"ಹೊಸತಪ್ಪ ಮಧುವ ಬಯಸುತೆ ರಸಾಲ ಮಂಜರಿಯನಾಂತು ಚುಂಬಿಸಿ ನೀಂ ಸಾರಸ ವಾಸ ಮಾತ್ರದಿಂ ಸಂತಸವಾಂತದನೆಂತು ಮರೆದೆಯೆಲೆ ಮಧುಕರನೇ"

* ಅಭಿನವ ಮಧುಲೋಲುಪಸ್ತ್ವಂ ! ತಥಾ ಪರಿಚುಂಬ್ಯ ಚೂತಮಂಜರೀಮ್ ಕಮಲವಸತಿ ಮಾತ್ರ ನಿವೃತೋ ಮಧುಕರ ! ವಿಸ್ಮೃತೋಽಸ್ಯೇನಾಂ ಕಥಮ್!

ಇದನ್ನು ಕೇಳಿದ ವಿಮರ್ಶಕರು ಹೇಗಾದರೂ ವಾದಿಸಲಿ. ಸಂಬಂಧಪಟ್ಟ ಅಪರಾಧಿಯನ್ನೇ ಕೇಳಿ : "ಒಂದಾವೃತ್ತಿ ಪ್ರೀತಿಸಿದವಳೀಕೆ. ಆದ್ದರಿಂದ ಈ ಹಾಡಿನಲ್ಲಿ ವಸುಮತಿಯನ್ನು ಕುರಿತಾದ ಅವಹೇಳನವೊಂದನ್ನು ಹುದುಗಿಸಿರುವಳೆಂದು ಭಾವಿಸುತ್ತೇನೆ. ಮಿತ್ರ, ಮಾಢವ್ಯ! ಬಹು ಜಾಣ್ಮೆಯಿಂದ ಏಳಿಸಿದ್ದೀಯೆ ಎಂದು ನಾನು ಹೇಳಿದುದಾಗಿ ಹಂಸಪದಿಕೆಗೆ ತಿಳಿಸು." ಒಂದು ಬಾರಿ ಪ್ರೀತಿಸಲ್ಪಟ್ಟವಳು, ಮದುವೆ ನಿಂದವಳೊ ಅಲ್ಲವೊ ತಿಳಿಯದು, ಆಮೇಲೆ ಮರೆಯಲ್ಪಟ್ಟವಳು. ಎಷ್ಟು ಜನ ಅವನ ಅರಮನೆಯಲ್ಲಿ ಅಂಥವರಿದ್ದರೊ ಯಾರು ಬಲ್ಲರು ; ಎಷ್ಟು ಜನ ಅರ್ಧಶಕುಂತಲೆಯರು, ಉಂಗುರವನ್ನು ಪಡೆದುಕೊಂಡು ಮರೆಯಲ್ಪಟ್ಟದ್ದಾರೊ. ಅದಿರಲಿ, ಅವನು ಕೊಡುವ ಉತ್ತರವಾದರೂ ಎಷ್ಟು ಬಿಗುಮಾನದ ಮಾತಾಗಿದೆ. ಗೂಢವೂ ಗಂಭೀರವೂ ಆದುದಾಗಿದೆ ಸರಿ. ಆದರೆ ಅದರ ಹಿಂದಿರುವ ಮನೋಧರ್ಮ, ತಾನು ಮಾಡಿರುವ ತಪ್ಪಿಗೆ ಮರುಗದೆ, ತನ್ನಿಂದ ವಂಚಿತಳಾದವಳ ದುಃಖಕ್ಕೆ ಅನುಕಂಪೆದೋರದೆ, 'ಬಹುಪತ್ನೀ

---

*ಹಂಸಪದಿಕೆಯಾಡುವ ಮೊದಲ ಮಾತನ್ನು ಮರೆಯಬಾರದು. "ಅಭಿನವ ಮಧುಲೋಲುಪಃ ತ್ವಂ !" ಆ ರಾಜ ಆಗ ಮಾತ್ರ ಹೊಸಮಧುವನ್ನು ಬಯಸಿ ಬೇರೆಡೆಗೆರಗಿ ಹೋಗಲಿಲ್ಲ. ಅವನು ಯಾವಾಗಲು ಹೊಸ ಬಂಡಿಗೆಳಸುವ ದುಂಬಿ। ಚೂತಮಂಜರಿ ಮೂಡಿದಾಗ ಅದಕ್ಕೆರಗುತ್ತದೆ. ತಾವರೆ ಅರಳಿದಾಗ ಅಲ್ಲಿರುತ್ತದೆ. ತಾವರೆ ಸದಾ ಇರುವ ಹೂ. ಚೂತಮಂಜರಿ ಕಾಲಿಕ. ಅದರಿಂದ ಅದು ಮೋಹಕ, ಸಹಜ ಮಾದಕವಾಗಿರುವುದರ ಜತೆಗೆ ! ಹಂಸಪದಿಕೆ ಚೂತಮಂಜರಿ ! ಒಮ್ಮೆ ಚುಂಬಿತಳಾದವಳು ! ವಸುಮತಿ ಸಾರಸ. ಆದರೆ ಶಕುಂತಲೆ ?...ಹೋಗಲಿ, ಈ ಹಂಸಪದಿಕೆಯಂತೂ ಬಹಳ ಹಿಂದೆ ಚುಂಬಿತಳಾದವಳೇನೂ ಅಲ್ಲ. ಅಗತಾನೆ ಅವಳು ಆ ವಿರಹ ಕಾಣುತ್ತಿದ್ದಾಳೆ ; ಅದು ಹಳೆಯ ಕಥೆಯಾಗಿದ್ದರೆ ಈಗೇಕೆ ಬರಬೇಕಿತ್ತು ; ರಾಜನಿಗಾದರೂ ತಿಳಿದಿರುತ್ತಿತ್ತಲ್ಲ. ಆದ್ದರಿಂದ ಅವಳ ಪ್ರಣಯ-ವಿರಹಗಳು ಹೊಸವು. ಅಂದರೆ ಶಕುಂತಲೆಯನ್ನು ನಂಬಿಸಿ ಪ್ರಣಯಿಸಿ ಬಂದಮೇಲೆ ಮಾಡಿದ ಹೊಸಬೇಟವೆ ? ಅಭಿನವಮಧುಲೋಲುಪನಲ್ಲವೆ ಎಷ್ಟಾದರೂ !

ವ್ರತಧರ್ಮರಕ್ಷಿತ'ನಾದ ದಿಮಾಕಿನಿಂದಲೆ ಆಡುವ ಪಶ್ಚಾತ್ತಾಪರಹಿತವಾದ ಮಾತುಗಳು ಅವು. ಪ್ರೀತಿ ಬೇಡಿ ಪಡೆಯಬೇಕಾದುದಲ್ಲ, ಭಿಕ್ಷೆಯಾಗಿ ಆಗಲಿ, ಕೃಪೆ ಕರುಣೆ ದಯೆಗಳಾಗಿ ಆಗಲಿ ಪಡೆಯಬೇಕಾದುದಲ್ಲ, ಅದು ಯಾವುದೂ ಪ್ರೀತಿಯಲ್ಲ. ಅಯಾಚಿತವಾಗಿ ಅಂತಃಸ್ಫೂರ್ತಿಜನ್ಯವಾಗಿ ಬರುವುದು ಅದು.

ದುಷ್ಯಂತನೊಬ್ಬನೆ ಯಾತನಾದಗ್ಧನಾಗುವುದಿಲ್ಲ, ಆಗಬೇಕಾದವನಾಗಿರಲಿಲ್ಲ. ಅವನೊಡನೆ ಉಚಿತ ಪ್ರಮಾಣದಲ್ಲಿ ಉಳಿದವರೂ ದುಃಖವಶರಾಗುತ್ತಾರೆ. ಕಾರಣ ನಿಷ್ಕಾರಣವಲ್ಲ. ಅವರೂ ಒಂದಲ್ಲ ಒಂದು ರೀತಿ ತಪ್ಪೆಸಗಿದ್ದಾರೆ. ತಪ್ಪೆಂದರೆ ತಪ್ಪಲ್ಲ ; ಅಲ್ಲವೆಂದರೂ ಸಲ್ಲ. ಮೊದಲನೆಯ ತಪ್ಪು ಆ ರಹಸ್ಯ ಪ್ರಣಯಾನುಮತಿ. ಗಾಂಧರ್ವ ವಿವಾಹ ಸರ್ವಸಮ್ಮತವೆಂದು ಒಪ್ಪುತ್ತೇವೆ. ಆದರೆ ಗಾಂಧರ್ವ ವಿವಾಹ ಆತುರದಲ್ಲಿ ಮಾಡಿ ಬೇಗ ಮರೆಯುವುದಲ್ಲ. ಮಂತ್ರಪೂತವಾದ ತಪೋವನದಲ್ಲಿ ನಿರ್ಮಂತ್ರ ಜಾತವಾದ ಗಾಂಧರ್ವ ವಿವಾಹ ನಡೆಯಬಾರದು ಎಂದೂ ಅಲ್ಲ ; ನಡೆಯಲಿ. ಆದರೆ, ಅದಕ್ಕೆ ಬಂದ ಗತಿ ಸರಿಯಾದುದಲ್ಲ. ಒಬ್ಬೊಬ್ಬರದಾಗಿ ಆ ವಿಷಯದ ಬಗೆಗಿನ ಅಭಿಪ್ರಾಯವನ್ನು ಇಲ್ಲಿ ಕೇಳಬಹುದು. ಮೊದಲು ಸ್ವಯಂ ಅನಸೂಯೆಯ ಮಾತನ್ನೆ ಲಾಲಿಸಿರಿ. ಇನ್ನೂ ಗಾಂಧರ್ವ ವಿವಾಹ ನಡೆದು ಬಹಳ ದಿನವಾಗಿಲ್ಲ. ಕಣ್ವರೂ ಆಶ್ರಮಕ್ಕೆ ಬಂದಿಲ್ಲ. ಆಗ ಆಡುವ ಮಾತಿದು : "**ನಾನು ಸಖಿಯ ತಪ್ಪೆಂದು ನಿರ್ಣಯಿಸಿದರೂ** ಸೋಮತೀರ್ಥದಿಂದ ಬಂದ ತಂದೆಯಾದ ಕಣ್ವರಿಗೆ ದುಷ್ಯಂತ ನನ್ನು ವರಿಸಿ ಶಕುಂತಲೆ ಗರ್ಭಿಣಿಯಾಗಿರುವಳೆಂದು ಹೇಗೆ ತಿಳಿಸಲಿ ?" ಇದಕ್ಕೆ ವ್ಯಾಖ್ಯಾನ ಬೇಡ. ಮುಂದೆ ಐದನೆಯ ಅಂಕದಲ್ಲಿ ಗೌತಮಿ ಹಾಗೂ ತಪಸ್ವಿಕುಮಾರರು ಆಡುವ ಮಾತನ್ನು ನೋಡಿ :

"ಗುರುಜನವನಪೇಕ್ಷಿಸದಾದರದಿಂದಂ ಬಂಧುಜನವ ಕೇಳದೆ ನೀವಿ
ರ್ವರೆ ನೇಹದೊಳೊಡಗೂಡಿದ ಪರಿಯಂ ನೋಡಲ್ಕೆ ನಿಮ್ಮೊಳಾರ್ಗಂದೊರೆವಂ !"

ಗೌತಮಿ ತಾನೆಷ್ಟು ದಿನದಿಂದ ತಡೆದಿಟ್ಟುಕೊಂಡಿದ್ದ ಭಾವನೆಯೊ ಇದು. ಆದರೂ ಎಷ್ಟು ತಡೆದು ತಡೆದು ಮಾರ್ಮಿಕವಾಗಿ ಹೇಳುತ್ತಾಳೆ. ಇವಳ ಮಾತು ಹೀಗಿದ್ದರೆ ಆ ಹುಳಿ ಮುರಿಯದ ತರುಣ ತಪಸ್ವಿಕುಮಾರರು ಇನ್ನೂ ಒರಟು ಒರಟಾಗಿ ಉಗ್ರವಾಗಿಯೆ ಹೇಳುತ್ತಾರೆ. "**ಹೀಗೆ ತಾನಾಗಿ ಮಾಡಿಕೊಂಡ ಚಾಪಲ್ಯವು ತನ್ನನ್ನು ಬಿಡದೆ ಸುಡುವುದು.**

ಅದರಿಂ ಮಿಗೆ ಪರಿಕಿಸಿ ನೋಳ್ಪುದು ತಾನೇಕಾಂತಸಂಗಮುವನಲ್ಲದಿರಲ್
ಹೃದಯುವನಣಮರಿಯದೆ ಮಾಡಿದ ಸೌಹೃದಮಿಂತು ಜಗದೊಳ್
ಅಹಿತಮೆನಿಕ್ಕುಂ"

ಇದು ಎಷ್ಟೆ ನಗ್ನವಾಗಿದ್ದರೂ ಉಜ್ವಲ ಸತ್ಯವೆ. ಪ್ರೀತಿಸುತ್ತೇನೆ ಎಂದೊಡನೆಯೆ ಪ್ರೀತಿಯು ಸತ್ತ್ವವಾಗಲಿ ಸತ್ತ್ವ ಶುದ್ಧಿಯನ್ನಾಗಲಿ ತೋರ್ಪಡಿಸಿದಂತಾಗಲಿಲ್ಲ. ಪ್ರೀತಿ ನಾಲ್ಕು ದಿನ ಹಾಗೇ ಅತೃಪ್ತವಾಗಿಯೆ ಉಳಿದಿರಲು ಶಕ್ತವಾದರೆ ಮಾತ್ರ ಸತ್ತ್ವ ಪರೀಕ್ಷೆಯಲ್ಲಿ ತೇರ್ಗಡೆಗೊಳ್ಳಬಲ್ಲದು. ವಿಷಮ ಸನ್ನಿವೇಶಗಳನ್ನು ಹಾಯ್ದು ಅಖಿಲವಾಗಿ ಉಳಿದಾಗ ಮಾತ್ರ ಶುದ್ಧ ಸತ್ತ್ವವಾಗುತ್ತದೆ. ಅದಿಲ್ಲದೆ ಹೂಸಕದ ಪ್ರೀತಿಗೆ ಮಾತಿಗೆ ಬೆಲೆ ಎಲ್ಲಿ ? ನಾಲ್ಕು ಜನರ ಕಣ್ಣಿಗೆ ಬೀಳಲೂ ಅಂಜುವಂತಹ ಗುಪ್ತಪ್ರೀತಿ ಪ್ರೀತಿಯೇನು ? ಶುದ್ಧವೇನು ? ಎಲ್ಲಿ ಶುದ್ಧಿ ದೋಷವಿರುತ್ತದೊ ಅಲ್ಲಿ ಅಧೈರ್ಯ–ದೌರ್ಬಲ್ಯವಿರುತ್ತದೆ. ಹಾಗಿದ್ದಾಗಲೆ ಗೋಪನಾಕಾಂಕ್ಷೆ ಉದಿಸುತ್ತದೆ. ರಾಜ ತನ್ನ ಪ್ರೀತಿಯನ್ನು ಗೋಪನ ಮಾಡಲು ಮಾಢವ್ಯನಿಗೂ ಸುಳ್ಳು ಹೇಳುತ್ತಾನೆ. ತಪೋವನದವರಾರೂ ಕಾಣದಂತೆ ತನ್ನ ಆಸೆಯನ್ನು ತೀರಿಸಿಕೊಳ್ಳುವ ಹೊಂಚು ಹಾಕುತ್ತಾನೆ. ಮಾಢವ್ಯನಿಗೆ ಎರಡನೆಯ ಅಂಕದಲ್ಲಿ ಹೇಳುವುದನ್ನು ನೋಡಿ : "ನಾನಿಲ್ಲಿರುವುದನ್ನು ಕೆಲವು ತಪಸ್ವಿಗಳು ಬಲ್ಲರು ; ಯೋಚಿಸು ; ಯಾವ ನೆವದಿಂದ ಪುನಃ ಆಶ್ರಮಕ್ಕೆ ಹೋಗಲಿ ?" ಅದಷ್ಟೆ ಅಲ್ಲ, ಶಕುಂತಲೆಯನ್ನು ಗಾಂಧರ್ವ ವಿಧಿಯಿಂದ ಸ್ವೀಕರಿಸಿ ಆಶ್ರಮದಲ್ಲಿ ಕೆಲವು ದಿನ ಇದ್ದಾಗಲೂ ಅವನದನ್ನು ಅಲ್ಲಿಯ ಯಾರೊಬ್ಬರಿಗೂ ತೋರಿಸಿಕೊಂಡಿಲ್ಲ. ಅದಿರಲಿ, ಕುಲಪತಿಗಳಾದ ಕಣ್ವರು ಬರುವತನಕ ಇದ್ದು ಅವರನ್ನೆದುರಿಸುವ, ಅವರಿಗೆ ತನ್ನ ಪ್ರೀತಿಯನ್ನೊಪ್ಪಿಸುವ ಮುಗ್ಧಶುದ್ಧ ಧೈರ್ಯವನ್ನೆ ಪ್ರದರ್ಶಿಸುವುದಿಲ್ಲ. ರಾಜಕಾರ್ಯಭಾರವಿರುವಾಗ ಕಣ್ವರು ಬರುವತನಕ ಹೇಗೆ ತಾನೆ ಕಾದುಕೊಂಡಿರುವುದು ಎಂದಾರಾದರೂ ಅಭಿಪ್ರಾಯಪಡಬಹುದು. ಆದರೆ ಆ ವಿವೇಕ ಅವನಿಗೆ ಶಕುಂತಲಾ ಪ್ರೀತಿ ಲಭಿಸುವ ಮುನ್ನವೆ ಏಕೆ ಬರಬಾರದಿತ್ತು ? ತಾಯಿಯಿಂದ ಸುದ್ದಿ ಬಂದರೂ ಹೂಸಕದ ನೆಪಗಳನ್ನು ನೀಡಿ ಮಾಢವ್ಯನನ್ನೆ ತಳ್ಳುತ್ತಾನೆ. ಅಬ್ಬ ! ಕಾರಣವಿಷ್ಟೆ ; ತಾನು ಮಾಡಿದುದು ಆದಷ್ಟೂ ರಹಸ್ಯವಾಗಿರಬೇಕು. ರಹಸ್ಯ ಎಂದೊಡನೆಯೆ ಅದರಲ್ಲಿ ಎಷ್ಟು ಶುದ್ಧಿ ಇದೆ, ಧೈರ್ಯವಿದೆ ತಿಳಿದೆ ಇದೆ. ಗುಟ್ಟಾಗಿ

ಸಾಲಮಾಡಿಕೊಂಡೆ ವ್ಯಾಪಾರ ನಡೆಸುವ ಶ್ರೀಮಂತರು ತಾವು ಒಂದು ಕಡೆ ಸಾಲಮಾಡುವುದು ಮತ್ತೊಂದು ಕಡೆಯ ಬ್ಯಾಂಕಿನವರಿಗೆ ತಿಳಿಯದಂತೆ ನೋಡಿಕೊಳ್ಳುತ್ತಾ ಹೋಗುತ್ತಾರೆ. ದುಷ್ಯಂತ, ಪ್ರಣಯ ವ್ಯಾಪಾರಿ, ಸಟ್ಟಾ ವ್ಯಾಪಾರಿ; ಅದು ತನಕ ತನ್ನ ನರ್ಮಸಚಿವ–ಮಾಢವ್ಯ–ದಳ್ಳಾಳಿಗೂ ತಿಳಿಯ ದಂತೆ ಕೆಲವೊಮ್ಮೆ ಸಾಲ ವ್ಯಾಪಾರ ಮಾಡುವ ಘನ ಪುಡಾರಿ ಆಗಿದ್ದ.

ಅದು ಹೋಗಲಿ ಸಖಿಯರೂ ಅದನ್ನು ಗೋಪನ ಮಾಡಲು ಅನೇಕ ಸಾಹಸ ಕೈಗೊಳ್ಳುತ್ತಾರೆ : "**ನಮ್ಮ ಸಖಿಯ ಮನೋರಥವನ್ನು ಶೀಘ್ರ ವಾಗಿಯೂ ಗುಟ್ಟಾಗಿಯೂ ನೆರವೇರಿಸುವುದಕ್ಕೆ ತಕ್ಕ ಉಪಾಯ ಯಾವುದು ?....ಗುಟ್ಟಾಗಿ ನೆರವೇರಿಸುವುದೇನೂ ಕಷ್ಟವಲ್ಲ !**" ಇದಕ್ಕೇನೂ ವ್ಯಾಖ್ಯಾನ ಬೇಕಿಲ್ಲ.

ಮುಂದೆ ಕಣ್ವರು ಶಕುಂತಲೆಯ ಪ್ರಣಯ ವೃತ್ತಾಂತವನ್ನು ಕೇಳಿದೊಡ ನೆಯೆ ಹೇಳುವ ಮಾತೆ ಗಮನಾರ್ಹವಾಗಿದೆ : "ಯಜಮಾನರು ಹೊಗೆಯಿಂದ ಕಣ್ಣುಗಳನ್ನು ತೆರೆಯದಿದ್ದರೂ ಆತನ ಕೈಯಿಂದ ಆಹುತಿಯು ದೈವಯೋಗ ದಿಂದ ಅಗ್ನಿಯಲ್ಲೆ ಬಿದ್ದಿತು." ಈ ಮಾತನ್ನು ಬಳಸಿಕೊಂಡೆ ದುಷ್ಯಂತನನ್ನು ತಲೆಯ ಮೇಲೆ ಕುಳ್ಳರಿಸಿಕೊಳ್ಳುವವರುಂಟು. ಆದರೆ ಆ ಮಾತಿನ ಒಳ ಹೊಕ್ಕಾಗ ನಿಜ ತಿಳಿದೀತು. ಯಜಮಾನನಿದ್ದಾನೆ, ಹವಿಸ್ಸನ್ನು ಹಿಡಿದಿದ್ದಾನೆ; ಹೊಗೆಯಿಂದ ಕಣ್ಣು ಕಾಣುತ್ತಿಲ್ಲ. ಆಗ ಕೈಜಾರಿದ ಹವಿಸ್ಸೇನೊ ಅದೇ ಅಗ್ನಿ ಯಲ್ಲೆ ಬಿದ್ದಿತು ; ಬೆಂಕಿಯಲ್ಲೆ ಬಿದ್ದಿತು. ಸರಿ. **ಮಂತ್ರೋಚ್ಚಾರಣೆಯೆಲ್ಲ** ಆದ ಮೇಲೆ **ಸುಮನಃ ಪೂರ್ವಕವಾಗಿ** ಆ ಹವಿಸ್ಸು **ಸುಮುಹೂರ್ತದಲ್ಲಿ** ಅಗ್ನಿಗೆ **ಅರ್ಪಿತವಾಯಿತೇನು ?** ಅದು ಬಿದ್ದಿತಷ್ಟೆ. ತೃಪ್ತಿಯೇನೆಂದರೆ ಅದು ಮತ್ತೆಲ್ಲೂ ಬೀಳಲಿಲ್ಲವಲ್ಲ ಎಂದು, ಅಷ್ಟೆ. ಕಾಲ ಪೂರ್ವದಲ್ಲೆ ಹವಿಸ್ಸು ಬೆಂಕಿಗೆ ಬಿತ್ತು, ಹಾಗಾಗಿ ಅದಕ್ಕೆ ಮಂತ್ರದ ಪೂರ್ಣರಕ್ಷೆ ದೊರೆಯಲಿಲ್ಲ. ಬೆಂಕಿಯೂ ತಾನು ನಿರ್ಧೂಮವಾಗಿ ಹುತವಾಹನವಾಗಿ ರಾರಾಜಿಸದೆ ಹೊಗೆ ಕಾರಿತ್ತು. ಆ ಹೊಗೆಯಿಂದಲೆ ಕಣ್ಣು ಕಾಣಲಿಲ್ಲ. ಕಣ್ವರು ಮುಂದೆ ತಮ್ಮ ಮಗಳನ್ನು ದುಷ್ಯಂತನಿಗೇ ಮದುವೆ ಮಾಡಬೇಕೆಂದು ನಿರ್ಧರಿಸಿದ್ದರೆಂಬುದರಲ್ಲಿ ಸಂದೇಹ ವಿಲ್ಲ. ಆದರೆ ಆ ದುಷ್ಯಂತ ಕಾಲಪೂರ್ವದಲ್ಲೆ ಅವರಿಲ್ಲದ ವೇಳೆಯಲ್ಲೆ ಹೊಗೆ

ಗೊಂಡ ಬೆಂಕಿಯಂತೆ ಹವಿಸ್ಸನ್ನು ಅಪಹರಿಸುತ್ತಾನೆ. *ಇದನ್ನು ಅವರು ನಿರೀಕ್ಷಿಸಿದ್ದಿರಲಾರರು. ಅದಕ್ಕಾಗಿಯೆ ಈ ಪ್ರಾಯಶ್ಚಿತ್ತ. ಯಜಮಾನನೂ ಹವಿಸ್ಸೂ, ಹುತವಾಹನನೂ ಎಲ್ಲರೂ ಆ ಹವಿರ್ಭಾಗರಾದ ದೇವತೆಗಳ ಅಸಮಾಧಾನಕ್ಕೆ ಗುರಿಯಾಗುತ್ತಾರೆ, ಆ ಕಾರಣದಿಂದಲೇ.

ಮುಂದೆ ಕಣ್ವರು ದೊರೆಗೆ ಹೇಳಿಕಳಿಸಿಕೊಡುವ ಸಂದೇಶದಲ್ಲಿ ಒಂದು ಗಂಭೀರವಾದ ಎಚ್ಚರಿಕೆಯ ಮಾತನ್ನಾಡಿ ಕಳಿಸಿರುತ್ತಾರೆ :

> "ಅಸ್ಮಾನ್ ಸಾಧು ವಿಚಿಂತ್ಯ ಸಂಯಮಧನಾನುಚ್ಚೈಃ ಕುಲಂ ಚಾತ್ಮನಃ
> ತ್ವಯ್ಯಸ್ಯಾಃ ಕಥಮಪ್ಯಬಾಂಧವ ಕೃತಾಂ ಸ್ನೇಹಪ್ರವೃತ್ತಿಂ ಚ ತಾಮ್
> ಸಾಮಾನ್ಯ ಪ್ರತಿಪತ್ತಿಪೂರ್ವಕಮಿಯಂ ದಾರೇಷು ದೃಶ್ಯಾ ತ್ವಯಾ
> ಭಾಗ್ಯಾಯತ್ತಮತಃ ಪರಂ ನ ಖಲು ತದ್ವಾಚ್ಯಂ ವಧೂ ಬಂಧುಭಿಃ !"

ಕಣ್ವರ ಮಾತಿನ ಧಾಟಿ ಬಹಳ ಅರ್ಥವತ್ತಾದುದು: "ನಾವು ಸಾಧುಗಳು, ಸಂಯಮಧನರು ! ನೀನೋ ಉಚ್ಚಕುಲಸಂಪನ್ನ ; ಈ ಎರಡನ್ನೂ ಗಮನಿಸು. ಹಾಗೂ ಈಕೆಯ ಪ್ರೀತಿಯನ್ನು-'ಅಬಾಂಧವಕೃತಾಂ ಸ್ನೇಹಪ್ರವೃತ್ತಿಂ'— ಬಂಧುಗಳು ಮಾಡದೆ ಆದ ಸ್ನೇಹ ಪ್ರವೃತ್ತಿಯನ್ನು ಗಮನಿಸು ! ನಿನ್ನ ಹೆಂಡಿರಲ್ಲಿ ಈಕೆಯನ್ನು ಸರಿಗಾಣು. ಉಳಿದಂತೆ ಎಲ್ಲವೂ ಭಾಗ್ಯಾಧೀನವಾದುದು ; ಅದನ್ನೆಲ್ಲ ವಧುವಿನ ಬಂಧುಗಳು ವಾಚ್ಯ ಮಾಡಬಾರದು !" ಸದ್ಯಕ್ಕೆ ನಮಗೆ ಬೇಕಾದುದು ಇಷ್ಟೆ : 'ಅಬಾಂಧವಕೃತಾಂ ಸ್ನೇಹಪ್ರವೃತ್ತಿಂ,' ಸಖಿ ಅನಸೂಯೆ ಗೌತಮಿ, ಶಾಙ್ಗರ್ಗರವರೆಲ್ಲ ಆಡಿದ ಅಭಿಪ್ರಾಯವನ್ನೆ ತಮಗೆ ಸಹಜವಾದ ಸಂಯಮದಿಂದ (ತಾವೆ ಹೇಳಿದ್ದಾರೆ ಆಗಲೆ, ಸಂಯಮಧನರು ತಾವೆಂದು) ಹೇಳುತ್ತಾರೆ. 'ನ ಖಲು ವಾಚ್ಯಂ ಸಂಯಮಧನಾನ್ !'

---

* ಶಕುಂತಲೆಯಾದರೂ ಕೂಡ ತನ್ನನ್ನು ಸಾಕಿದ ತಂದೆ_ಋಷಿವರ್ಯನಿಲ್ಲದಂದು ತನಗಾದ ಮೊದಲ ಕಣ್ ಬೇಟಕ್ಕೆ ಬಲಿಯಾಗುತ್ತಾಳೆ, ಮಂತ್ರಪೂರ್ವದಲ್ಲೆ ಕೈಯಿಂದ ಜಾರಿದ ಹವಿಸ್ಸಿನಂತಾಗುತ್ತಾಳೆ. ನೋಟದೊಡನೆ ಬೇಟ, ಬೇಟವನ್ನೂ ಹಿಂದುಮಾಡಿ ಕೂಟಕ್ಕೆ ಹಾತೊರೆಯುತ್ತಾಳೆ. ಆ ಬಯಕೆಯನ್ನು ಅವಳು ಸಂಯಮಿಸಿಕೊಂಡಂತೆಯೆ ಭಾಸವಾಗುವುದಿಲ್ಲ. ಇದು ಬಯಕೆಯ ದೃಷ್ಟಿಯಲ್ಲಿ ತಪ್ಪಲ್ಲದಿದ್ದರೂ ಭಾವ ಸಂಯಮದ ದೃಷ್ಟಿಯಲ್ಲಿ ತಪ್ಪಿಲ್ಲದಿಲ್ಲ. ಆತುರದ ಪ್ರಣಯ ಶಾಶ್ವತ ಪ್ರೀತಿಯಾಗುವುದು ಅನಿವಾರ್ಯ.

ಈ 'ಅಬಾಂಧವ ಕೃತಾಂ ಸ್ನೇಹ ಪ್ರವೃತ್ತಿಂ' ಎನ್ನುವ ಮಾತಿಗೆ ಅರ್ಥವಿಲ್ಲ ಎನ್ನುವವರು, ಶ್ರೀಮದ್ ವಾಲ್ಮೀಕಿ ರಾಮಾಯಣದ ಮಾತನ್ನು ನೋಡಲಿ. ಸೀತಾದೇವಿ ಶ್ರೀರಾಮಚಂದ್ರರು ಪರಸ್ಪರ ದೇಹ ಹೃದಯ ಆತ್ಮ ಸಮಾನಾನು ರಾಗರಾಗಿ ಪ್ರೀತಿಸುತ್ತಾರಂತೆ. ಹೀಗಿರುವಾಗ ಸೀತಾದೇವಿ ಶ್ರೀರಾಮನನ್ನು ತನ್ನ ಆತ್ಮದ ಪ್ರತಿಮೆಯಂತೆ ಪ್ರೀತಿಸುತ್ತಾಳಂತೆ. ಹಾಗೂ ಆ ಶ್ರೀರಾಮನಿಗೆ ತಾನು 'ಪಿತೃಕೃತ' ಭಾರ್ಯೆಯಾಗಿದ್ದ ಕಾರಣದಿಂದ ಅತಿಶಯವಾಗಿ ಪ್ರೀತಳಾಗಿದ್ದಳು.

"ಪ್ರಿಯಾತು ಸೀತಾ ರಾಮಸ್ಯ ದಾರಾಃ ಪಿತೃಕೃತಾ ಇತಿ
ಗುಣಾದ್ರೂಪಗುಣಾಚ್ಚಾಪಿ ಪ್ರೀತಿರ್ಭೂಯೋಽಭ್ಯವರ್ಧತ ॥"

ತನ್ನ ಪ್ರೀತಿಸಂಬಂಧ ಸ್ವಕೃತ ಮಾತ್ರವಾದಾಗ ಆಗುವ ಆನಂದ ಉಲ್ಲಾಸ ಗಳಿಗೂ, ಸ್ವಪ್ರೀತಿಯುತವಾಗಿರುವ ಜತೆಗೆ 'ಪಿತೃಕೃತ'ವಾದುದಾದಾಗ ಉಂಟಾ ಗುವ ಅತಿಶಯವಾದ ಧರ್ಮರುಚಿರ ಆನಂದೋಲ್ಲಾಸಗಳಿಗೂ ಅಂತರವಿದೆ. ಅದು ಹೇಗಾದರೂ ಇರಲಿ, ಕಣ್ವರ ಆ ಮಾತಿನಲ್ಲಿ ಏನರ್ಥವಿದೆಯೆಂದು ಈಗ ಲಾದರೂ ಕಾಣಬಹುದು.

ಯಾರು ಎಷ್ಟೆ ಹೇಳಲಿ ಶಕುಂತಲಾ ದುಷ್ಯಂತರ ಪ್ರಣಯ, ಅಂದಿನ ನೀತಿಗೆ ಬದ್ಧವಾಗಿದ್ದಿದ್ದರೂ, ಅದು ಸಕಾಲ ಪೂರ್ವವಾದುದು ; ಅತಿ ಆತುರಕ್ಕೆ ತುತ್ತಾ ದುದು ; ಗೋಪ್ಯವಾಗಿ ದುರ್ಬಲಗೊಂಡುದು ; ಆದ್ದರಿಂದಲೆ ಅದಕ್ಕೆ ಶುದ್ಧಿ ಶಕ್ತಿಯನ್ನು ಧೈರ್ಯವನ್ನು ಲೋಕಪೂಜ್ಯತೆಯನ್ನು ನೀಡಲೆಂದೆ ಶಾಪರಕ್ಷೆ ಒದಗ ಬೇಕಾಯಿತು. ಏನೋ ಅಮಂಗಳ ಒದಗುತ್ತದೆಂಬುದನ್ನು ಮುನ್‌ಕಂಡ ಕಣ್ವರಿಗೆ ಶಾಪ ವಿಶಾಪಗಳ ಘಟನಾಸೃಷ್ಟಿ ಕ್ರಿಯೆಯ ಸ್ಪಷ್ಟ ದರ್ಶನವಾಗಿರು ತ್ತದೆ.*

ಶಾಪ ಒದಗದೆ ಇದ್ದಿದ್ದರೆ ಶಕುಂತಲೆಗೆ ಒದಗುತ್ತಿದ್ದ ಗತಿ ಸ್ವಯಂವೇದ್ಯ ವಾದುದು. ಒಂದು ವೇಳೆ ಆ ಅರಮನೆಯಲ್ಲಿ ಆಕೆ ನೆಲಸಿದ್ದರೂ ದುಷ್ಯಂತನಿಗೂ ಶಕುಂತಲೆಗೂ ಸಂಸ್ಕಾರಭೇದವಿದ್ದುದರಿಂದ ಅವರಲ್ಲಿ ಪೂರ್ಣ ಸಾಮರಸ್ಯ ಉಂಟಾಗುತ್ತಿರಲಿಲ್ಲ. ಶಕುಂತಲೆ ಬಹು ಸುಂದರಿ, ಇತ್ಯಾದಿ ಎಂದೆಲ್ಲಾ ಮಾತ

---

* ಶ್ರೀ ಕುವೆಂಪು ಅವರ 'ತಪೋನಂದನ'ದಲ್ಲಿನ "ಕಾವ್ಯ ವಿಮರ್ಶೆಯಲ್ಲಿ ಪೂರ್ಣ ದೃಷ್ಟಿ" ಎಂಬ ಲೇಖನವನ್ನು ನೋಡಿ.

ನ್ನಾಡಿದರೂ ಆಕೆ ಕಾಡಹುಡುಗಿ ಎಂಬ ಭಾವನೆ ದುಷ್ಯಂತನಲ್ಲಿ ಅವ್ಯಕ್ತ ವಾಗಿಯೆ ಇತ್ತು. ಎರಡನೆಯ ಅಂಕದಲ್ಲಿ ಮಾಢವ್ಯನಿಗೆ ಅವನಾಡುವ ಮಾತಿನಲ್ಲಿ ಆಗುತ್ತಿದೆ. ಹಾಗೂ ಏಕಾಂತದಲ್ಲಿ ಶಕುಂತಲೆಯೊಡನಿದ್ದಾಗ ಅವನಾಡಿದ ಮಾತಿನಲ್ಲಿ—ಐದನೆ ಅಂಕದಲ್ಲಿ ಶಕುಂತಲೆ ವಿವರಿಸುವ ಘಟನೆಯಲ್ಲಿ—ಆ ಭಾವ ವಿದೆ. ಶಕುಂತಲೆ ದುಷ್ಯಂತರು ಏಕಾಂತದಲ್ಲಿದ್ದಾಗ ಜಿಂಕೆಯೊಂದು ಬರುತ್ತದೆ. ಅದನ್ನು ದುಷ್ಯಂತ ಕರೆದು ತಾವರೆ ಎಲೆಯ ಬಟ್ಟಲಲ್ಲಿ ನೀರನ್ನು ನೀಡಲು ಹೋದಾಗ ಅದು ಬರಲಿಲ್ಲ. ಶಕುಂತಲೆ ಕರೆದರೆ ಬರುತ್ತದೆ. ಅದನ್ನು ಕಂಡು ಅವನಾಡುವ ಮಾತಿದು :

"ಸರ್ವಃ ಸಗಂಧೇಷು ವಿಶ್ವಸಿತಿ, ದ್ವಾವಪಿ ಅತ್ರ ಆರಣ್ಯಕೌ ಇತಿ"— ಎಲ್ಲರೂ ತಮ್ಮ ಗಂಧದವರನ್ನೆ ನಂಬುತ್ತಾರೆ! ನೀವಿಬ್ಬರೂ ಎಷ್ಟಾದರೂ ಕಾಡವರು !–ಈ ಮಾತುಗಳು ಎಷ್ಟು ಅರ್ಥಪೂರ್ಣವ್ಯಂಗ್ಯ ! ಹರಿಣ ಹರಿಣಾಕ್ಷಿಯರು ಸಗಂಧರು, ಕಾಡವರು. ಅದರಿಂದ ಅವರಲ್ಲಿ ಪರಸ್ಪರ ವಿಶ್ವಾಸ. ತಾನು ನಾಗರಿಕ, ಆಕೆ ಜಿಂಕೆಯಂತೆ ಆರಣ್ಯಕಳು ; ಎಷ್ಟಿದ್ದರೂ ತನಗೆ ಸಗಂಧ ಳಲ್ಲ. ಅಂದರೆ, ಅಷ್ಟು ಅಖಂಡ ವಿಶ್ವಾಸ ಇರದಿರಬಹುದು ? ಪ್ರಣಯೋತ್ಕಟ ತೆಯಲ್ಲಿ ಯಾರೂ ಪರಸ್ಪರ ವೈಲಕ್ಷಣ್ಯ ವೈಗಂಧ್ಯಗಳನ್ನು ಲೆಕ್ಕಿಸುವುದಿಲ್ಲ. ಅವೆಲ್ಲ ಆಗ ಮುಳುಗಿರುತ್ತವೆ. ಆದರೆ ಮೊದಲ ಉಕ್ಕು ಇಳಿದಾಗ, ಆಗ ಮೇಲೆದ್ದು ಕಾಣತೊಡಗುತ್ತವೆ ಅದುವರೆಗೆ ಗೋಚರಿಸಿರದ ಕೊರಕುಗಳು. ಉಕ್ಕಿಳಿದಿದ್ದ ದುಷ್ಯಂತ ಶಕುಂತಲೆಯಲ್ಲಿ ತನ್ನ ಸಂಗಧವನ್ನೂ ಕಾಣಲಾಗದಿದ್ದರೆ ಆಶ್ಚರ್ಯವಲ್ಲ, ತಪ್ಪೂ ಅಲ್ಲ. ಅವನು ಅವಳನ್ನು ಆರಣ್ಯಕಳೆಂದು, ಆಗ ಮಾತ್ರ ವಲ್ಲ, ಪ್ರಥಮ ಸಮಾಗಮಕ್ಕೆ ಮೊದಲಲ್ಲೆ ಭಾವಿಸಿರುವುದು ತಿಳಿಯುತ್ತದೆ, ವಿದೂಷಕನಿಗೆ ದುಷ್ಯಂತನಾಡಿ ಕಳಿಸಿದ ಮಾತಿನಲ್ಲೆ: "ಕ್ವ ವಯಂ ಕ್ವ ಪರೋಕ್ಷ ಮನ್ಮಥೋ ಮೃಗಶಾವೈಃ ಸಮಮೇಧಿತೋ ಜನಃ" !– ನಾವೆಲ್ಲಿ! ಎಲ್ಲಿ ಮನ್ಮಥನನ್ನು ನೇರಕಾಣದ, ಜಿಂಕೆಮರಿಯೊಡನಿರುವ ಜನ !–ಎನ್ನುವ ಮಾತಿ ನಲ್ಲೆ ಆದರ ಸುಳಿವಿತ್ತು. 'ನಾವೆಲ್ಲಿ! ಅವಳೆಲ್ಲಿ' ಎನ್ನುವ ಮಾತಿನ ಹಿಂದಿರುವ ಮನೋಭಾವ ಒಳಗಿದ್ದ ಅಂತರವನ್ನು, ಮನೋಧರ್ಮದಲ್ಲಿದ್ದ ಹಾಗೂ ಸ್ಥಿತಿ ಯಲ್ಲಿದ್ದ-ಆರಣ್ಯಕ ನಾಗರಿಕ ಎಂಬ–ಅಂತರವನ್ನು ಗಂಭೀರವಾಗಿ ವ್ಯಂಜಿಸುತ್ತದೆ. ಉತ್ಕಟತೆಯಲ್ಲಿ ಮುಚ್ಚಿಕೊಳ್ಳುವ ಈ ಅಂತರಗಳು-ಬಿರುಕುಗಳು-ವೈಗಂಧ್ಯ

ಗಳು ಯಾವತ್ತಾದರೂ ಕಾಣುವಂತಹವೆ ಆದ್ದರಿಂದ ಪ್ರೀತಿ ದುರ್ಬಲವಾಗುವ ಭೀತಿ ಇದ್ದೆ ಇದೆ. ಎರಡು ವರ್ಗದ–ಮನೋಧರ್ಮದ ವ್ಯಕ್ತಿಗಳು ಮೊದಲ ನೋಟದ ಬೇಟಕ್ಕೆ ಒಳಪಡುವುದು ಎಷ್ಟೆ ಸಹಜವಾದರೂ ಪ್ರಥಮಾವೇಶ ಮಯಗಿದಾಗಿ, ಆಮೇಲಣ ಪರೀಕ್ಷೆಗೆ ಒಳಪಟ್ಟಾಗ ಕೊಂಚವಾದರೂ ಬಣ್ಣಗೆಡುವುದು ಸಾಧ್ಯ.

ಮೇಲಾಗಿ ವರ್ಗಭಾವನೆಯೆ, ಭಿನ್ನ ಮನೋಧರ್ಮವಷ್ಟೆ ಅಲ್ಲ, ಕಟುವಾದಾಗ ಹೇಗೆಲ್ಲ ವಿಷಮಿಸಬಹುದು ಎಂಬ ಅರಿವೂ ಕವಿಗಿಲ್ಲದಿಲ್ಲ. ನಾಗರಿಕಗೆ ಆರಣ್ಯಕರ ಚೆಲವು ಕಂಡು, ವಿಸ್ಮಯ ಮೋಹಾಕರ್ಷಣೆ ಉಂಟಾದರೂ ಎಲ್ಲೊ ಒಂದೆಡೆ ಅದು ತಪ್ಪು ಗಂಧದ್ದಲ್ಲ ಎಂಬ ಅರಿವಿರುವಂತೆಯೆ, ಆರಣ್ಯಕರಿಗೂ ನಾಗರಿಕರ ವೈಭವವನ್ನು ಕಂಡು ವಿಸ್ಮಯವಾದರೂ ವಿಷಮಭಾವ ಉಂಟಾಗದಿರದು. ಶಕುಂತಲೆಯೊಡನೆ ಆಶ್ರಮದಿಂದ ಅರಮನೆಗೆ ಬಂದ ಶಾರದ್ವತ ಶಾರ್ಙ್ಗರವರ ಕಟುವಾದರೂ ಬಹು ಸಹಜವಾದ ಪ್ರತಿಕ್ರಿಯೆಯಲ್ಲಿ ಇದು ವ್ಯಕ್ತವಾಗುತ್ತದೆ. ಶಾರ್ಙ್ಗರವ ಹೇಳುತ್ತಾನೆ: "ಈ ಮಹಾಭಾಗ ರಾಜ ಮರ್ಯಾದೆ ಮೀರ; ಪ್ರಜೆಗಳೂ, ಯಕಶ್ಚಿತ್ ವರ್ಣನೂ ಕುಪಥವನ್ನು ಹಿಡಿಯ. ಆದರೂ ಶಾಶ್ವತ ಪರಿಚಯವಿಲ್ಲದ ನಾನು ಈ ಜನಾಕೀರ್ಣವನ್ನು ಕಂಡು ಉರಿ ಸುತ್ತಿದ ಮನೆಯೆಂದೆ ತಿಳಿಯುತ್ತೇನೆ." ಈ ಮಾತಿಗೆ ಕಡಿಮೆ ಇಲ್ಲದ ಮಾತನ್ನು ಶಾರದ್ವತ ಆಡುತ್ತಾನೆ: "ಮಿಂದವ ಮೀಯದವನನ್ನು, ಎಚ್ಚೆತ್ತವ ಮಲಗಿರುವವನನ್ನು, ಶುಚಿ ಅಶುಚಿಯನ್ನು, ಬದ್ಧನನ್ನು ಸ್ವಚ್ಛಂದ ಕಾಣುವ ಹಾಗೆ ನಾನು ಸುಖಸಂಗಿಗಳನ್ನು ಕಾಣುವೆ"! ಹೀಗಿರುವುದರಿಂದ ಎರಡು ಭಿನ್ನ ವರ್ಗಗಳು–ಮನಸ್ಸ್ತರಗಳು ಕೂಡುವುದು ಸುಲಭ ಸಾಧ್ಯವಲ್ಲ.

ನಿಜ, ದುಷ್ಯಂತನಿಗೆ ಶಕುಂತಲೆಯನ್ನು ಕಂಡಾಗ ಅತಿಶಯವಾದ ಆಕರ್ಷಣೆ ಉಂಟಾದುದೇನೊ ನಿಜ. ಆದರದಕ್ಕೆ ನಿರ್ಮಲ ಸ್ನೇಹ, ಸಮಾನಧರ್ಮಾನುರಕ್ತಿ ಕಾರಣವಾಗಿದ್ದುದಕ್ಕಿಂತ ಅವಳ ನಾಗರಿಕ ಸುಲಭ ಸಾಧಾರಣವಲ್ಲದ, ಮಾಸಲಳಿಯದ ಆಶ್ರಮ ಸಂಸ್ಕಾರಕ್ಕೊಳಪಟ್ಟ ಆರಣ್ಯಕ ಸೌಂದರ್ಯವು ತೀವ್ರ ಕಾರಣವಾಗಿತ್ತು ಎಂಬುದನ್ನು ಮರೆಯಬಾರದು. ಅವನಿಗೆ ಮಕ್ಕಳಿರಲಿಲ್ಲ; ಶಕುಂತಲೆಯಲ್ಲಿ ಮಕ್ಕಳಾದೀತೆಂಬ ಬಯಕೆಯಿಂದ ಅವಳಲ್ಲಿ ಪ್ರೀತಿ ವಿಶೇಷವಾಗಿ ಮೂಡಿತು ಎಂಬ ಅಭಿಪ್ರಾಯಕ್ಕೂ ನಾಟಕದಲ್ಲಿ ಆಳವಾದ ಬೇರುಗಳಿಲ್ಲ.

ಆಸ್ಥಾನದಲ್ಲಿ ನಾಗರಿಕರನ್ನೆ ನೋಡುತ್ತಿದ್ದ ಕಣ್ಣಿಗೆ ತದ್ಭಿನ್ನವಾದ ಆವರಣದಲ್ಲಿ ಸಹಜಸುಂದರವಾದವಳನ್ನು ಕಂಡುದೆ ಪ್ರೀತಿಕಾರಕವಾಗುತ್ತದೆ. ನಾಗರಿಕರ ಚೆಲುವಿನಲ್ಲಿ ಮೆರುಗಿದ್ದರೂ ತಪೋವನ ಪೋಷಿತವಾದ ನಾಗರಿಕವಲ್ಲದ ಸಹಜ ಪ್ರಾಕೃತಿಕ ಸೌಂದರ್ಯದಲ್ಲಿರುವ ಬಿಂಕಕೊಂಕಿಲ್ಲದ ಶುಚಿಸ್ಮಿತಶೀಲ, ಎಂಜಲಾಗದ ಕೀಡೆ ಎರಗದ ತರಗು ಸುತ್ತದ ಹೊಚ್ಚಹೊಸ ಹಸಿರುತನ ಇರುತ್ತದೆಂದು ಹೇಳಬರುವಂತಿಲ್ಲ. ಶಕುಂತಲೆಯನ್ನು ಕಂಡ ಘಳಿಗೆಯಲ್ಲಿ ದುಷ್ಯಂತನಿಗೆ ಅವಳ ಈ ಲೇಪನಗೊಳ್ಳದ ಚೆಲುವು ಸೂರೆಗೊಂಡಿತು. ವಿದೂಷಕನಿಗೆ ಅವಳ ಸೊಗಸನ್ನು ವರ್ಣಿಸುವಾಗ ದುಷ್ಯಂತ, ತನ್ನ ಮನಸ್ಸು ಅವಳತ್ತಲೆ ತುಡಿಯುತ್ತಿದ್ದುದಕ್ಕೆ ಕಾರಣವನ್ನು ಕೊಡುವುದು ಈ ದೃಷ್ಟಿಯಿಂದ ಅರ್ಥಗರ್ಭಿತವಾಗಿದೆ: "ಮೂಸಿರದ ಹೂ, ಉಗುರಿಂದ ಚಿವುಟಿರದ ಚಿಗುರು, ಎಜ್ಜವಿಕ್ಕದ ರತ್ನ, ರಸದ-ರುಚಿನೋಡಿರದ ಹೊಸ ಜೇನು, ಹೆಚ್ಚಿಲ್ಲದ ಪುಣ್ಯಫಲ–ಎನುವಂತಿರುವ ಅವಳ ರೂಪವೊ ಪಾಪವಿಲ್ಲದ್ದು! ಅದನ್ನು ಸವಿಯುವ ಯಾವ ಭೋಕ್ತೃವನ್ನು ವಿಧಿ ಇರಿಸಿದ್ದಾನೊ!"

(ಅನಾಘ್ರಾತಂ ಪುಷ್ಪಂ, ಕಿಸಲಯಮಲೂನಂ ಕರರುಹೈಃ,
ಅನಾವಿದ್ಧಂ ರತ್ನಂ, ಮಧು ನವಮನಾಸ್ವಾದಿತ ರಸಮ್ ॥
ಅಖಂಡಂ ಪುಣ್ಯಾನಾಂ ಫಲಮಿವ ಚ ತದ್ರೂಪಮನಘಂ!
ನ ಜಾನೇ ಭೋಕ್ತಾರಂ ಕಿಮಿಹ ಸಮುಪಸ್ಥಾಸ್ಯತಿ ವಿಧಿಃ!)

ಮಾಲವಿಕೆಯನ್ನು ಕಂಡ ಅಗ್ನಿಮಿತ್ರನಾಗಲಿ ಉರ್ವಶಿಗೆ ಮೋಹಗೊಂಡ ವಿಕ್ರಮನಾಗಲಿ ತಮ್ಮ ಪ್ರಣಯಿಗಳಲ್ಲಿ ಈ ಬಗೆಯ ಎಜ್ಜವಿಕ್ಕದ ರತ್ನದ, ಎಂಜಲಾಗದ ಹೊಸ ಜೇನಿನ, ಉಗುರಿಕ್ಕದ ಚಿಗುರಿನ, ಶುದ್ಧ ಕನ್ಯಾ ಸೌಂದರ್ಯವನ್ನು ಕಂಡಂತೆ ಅವರ ಮಾತಿನಲ್ಲಾಗಲಿ ವರ್ಣನೆಯಲ್ಲಾಗಲಿ ವ್ಯಕ್ತವಾಗುವುದಿಲ್ಲ. ಅದಕ್ಕೆ ಕಾರಣ, ಅವರಲ್ಲಿ ಒಬ್ಬ ಪ್ರೀತಿಸುತ್ತಿದ್ದ ಹೆಣ್ಣು ಕನ್ಯೆಯಾದರೂ ನಾಗರಿಕಳು, ನರ್ತನ ಶಿಕ್ಷಿತೆ. ಮತ್ತೊಬ್ಬ ಮೋಹಿಸುತ್ತಿದ್ದ ಹೆಣ್ಣು ಅಪ್ಸರೆ, ಕನ್ಯೆಯಲ್ಲ ವಧು. ಅದರಿಂದಲೆ ಅವರು ದುಷ್ಯಂತನಾಡುವ ತೆರನಾದ ಮಾತನ್ನಾಡಲಿಲ್ಲ. ಇಲ್ಲಿ ದುಷ್ಯಂತ ಬಳಸಿರುವ ಒಂದೊಂದು ಮಾತೂ ಲೈಂಗಿಕ ಸಂಕೇತವಾಗಿಯೆ ಇದೆ ಎಂಬುದನ್ನು ನಿರ್ಲಕ್ಷಿಸಬಾರದು. ಅವನಿಗೆ ಶಕುಂತಲೆಯಲ್ಲಿ ಉಂಟಾದ ಅನುರಾಗಕ್ಕೆ ಅವಳ ನಾಗರಿಕ ದುರ್ಲಭವಾದ

ಶಕುಂತಲೆಯ ನೆನಪು ಬಂದುದಾದರೂ ಕೂಡ. ಆಗವನಿಗೆ ತಾನು ಆಕೆಯನ್ನು ಮತ್ತೆ ಪಡೆದೇನೆ, ಕೊನೆಗೆ ಕಂಡೇನೆ ಎಂಬ ದುರ್ಬಲ ಆಸೆ ಕೂಡ ಇರಲು ಸಾಧ್ಯವಿರಲಿಲ್ಲ. ಆದರೆ ಶಕುಂತಲೆಗೆ ತಾನು ಎಂದಾದರೂ ತನ್ನ ಪತಿಯನ್ನು ಪಡೆದೇ ಪಡೆಯುವ ಧೈರ್ಯವಿತ್ತು. ಕಾರಣ, ಆಕೆಯಿದ್ದ ತಪೋವನದ ಕುಲಪತಿಗಳ ಅವ್ಯಕ್ತ ಆಶ್ವಾಸನೆ; ಮೇಲಾಗಿ ಸಾನುಮತಿಯ ವಾರ್ತಾಲಾಪ. ಸಾನುಮತಿಯ ಮೂಲಕ ತನ್ನ ಪತಿಗೆ ಆಗಿದ್ದ ವಿಸ್ಮೃತಿ–ಪುನಃಸ್ಮೃತಿ ಹಾಗೂ ಆ ಮೂಲಕವಾದ ಅಗಾಧ ಪಶ್ಚಾತ್ತಾಪ ಎಲ್ಲವೂ ತಿಳಿದು ಅದರಿಂದ ಆ ಅಗಲಿಕೆಯ ನೋವು ಸ್ವಲ್ಪ ಹಗುರವಾಗಿತ್ತು. ಆದರೂ ಅವಳು ಸಂತೋಷವಾಗಿಲ್ಲದಿರುವುದಕ್ಕೆ ಕಾರಣವೇನು ? ತನ್ನ ಪತಿಯನ್ನು ಮತ್ತೆ ಪಡೆದೇನೆ ಎಂಬ ಸಂಶಯವಲ್ಲ; ತನ್ನ ಪತಿ ತನ್ನನ್ನು ಅಂದು ಮರೆತುದಕ್ಕೆ ಇಂದು ಮರುಗುತ್ತಿಲ್ಲ ಎಂದೂ ಅಲ್ಲ. ಆದರೆ ಅವನು, ತನ್ನನ್ನು ಅಂದು ಅಷ್ಟು ಮೋಹಿಸಿ ನಂಬಿಸಿ ಪ್ರೀತಿಸಿದ ಅವನೂ, ಮರೆತನಲ್ಲ! ಅದಾವ ಕಾರಣದಿಂದ ? ಯಾವ ಅಪೌರುಷೇಯ ಕಾರಣವೂ ಅವಳ ಅರಿವಿಗೆ ಬಾರದು. ತನ್ನ ಪತಿಯೆ ಕಾರಣವೆಂಬಂತೆ ಕಾಣುತ್ತದೆ, ಹಾಗಾಗಿ ದುಃಖ ಅತ್ಯಧಿಕವಾಗುತ್ತದೆ. ಅಂಥ ವಿಶ್ವಾಸಾರ್ಹವ್ಯಕ್ತಿಯೆ ಹಾಗೆ ಸುಳ್ಳಬಹುದೆ, ಮರೆಯಬಹುದೆ ? ಮಾನುಷ ಪ್ರೀತಿಯೆಲ್ಲ ಇಷ್ಟೇ ಏನು ? ಆ ಮಹಾವಿಷಾದ ವಿಸ್ಮಯದತ್ತ ಅವಳ ಚಿತ್ತ ಹರಿಯುತ್ತದೆ. ಹಾಗಾಗಿ ಅವಳು ಅಶಾಂತಳಾಗಿದ್ದಾಳೆ. ತಾನು ದುಷ್ಯಂತನನ್ನು ಪಡೆಯುವುದು, ಖಚಿತನೆಂದು ತಿಳಿದೂ, ಹಾಗೂ ತನ್ನನ್ನು ಬಿಟ್ಟುದಕ್ಕಾಗಿ ಆತ ಪಶ್ಚಾತ್ತಾಪ ಪಡುತ್ತಿದ್ದಾನೆ ಎಂಬ ಹಿತಕರ ವೃತ್ತಾಂತವನ್ನೂ ತಿಳಿದೂ, ಕೊನೆಯಲ್ಲಿ ಪುನಃ ಸಮಾಗಮವಾದಮೇಲೂ ಆ ಒಂದು ಅರೆಕರೆ ಅವಳ ಎದೆಯ ಆಳದಲ್ಲಿ ಉಳಿದುಕೊಂಡೆ ಉಳಿದುಕೊಂಡಿರುತ್ತಿತ್ತು. ಹಾಗಾಗಿದ್ದರೆ ಏನಾಗುತ್ತಿತ್ತು ? ರೋಗವಾಸಿಯಾಯಿತು; ಆದರೆ ಔಷಧಿಯ ಕಹಿ, ಶಸ್ತ್ರ ಚಿಕಿತ್ಸೆಯ ಭೀಕರ ಪರಿಣಾಮ ಮಾಯದೆ ಉಳಿದುಕೊಂಡಿದೆ ಎಂಬಂತಾಗುತ್ತಿತ್ತು. ಆದ್ದರಿಂದಲೆ ಶಾಪದ ವೃತ್ತಾಂತ ಬಂತು. ಇದರಿಂದ, ಆದ ಘಟನೆಯೆಲ್ಲ ವ್ಯಕ್ತಿಕೃತವಲ್ಲ ; ಶಾಪಕೃತವೆಂದೂ ತಿಳಿವಂತಾಯಿತು. ಹಾಗಾಗಿ ಇಬ್ಬರಿಗೂ ಅದರಲ್ಲೂ ಶಕುಂತಲೆಗೆ ಅಪಾರ ಉಲ್ಲಾಸ. ಮಾರೀಚರಿಂದ ದುರ್ವಾಸ ಶಾಪದ ಪ್ರಭಾವವನ್ನು ತಿಳಿದಾಗ ರಾಜ ನಿಟ್ಟುಸಿರೆಳೆದು ಹೇಳುತ್ತಾನೆ : "ಈಗ ನಾನು ಅಪವಾದದಿಂದ

ಬಿಡುಗಡೆಯಾದೆ !" ಶಕುಂತಲೆ ತನ್ನೊಳಗೆ ಅಂದುಕೊಳ್ಳುತ್ತಾಳೆ: "ದೈವ ಯೋಗದಿಂದ ಆರ್ಯಪುತ್ರನು ನನ್ನನ್ನು ನಿಷ್ಕಾರಣವಾಗಿ ತೊರೆದವನಾಗ ಲಿಲ್ಲ !...."

ಕಡೆಯದಾಗಿ ಗಮನಾರ್ಹ ಅಂಶವೊಂದನ್ನು ಇಲ್ಲಿ ತಿಳಿಸುವುದು ಸೂಕ್ತ. ಅದೆಂದರೆ, ನಾವು ಕಾಳಿದಾಸನ ಶಾಕುಂತಲವನ್ನು ವಿವೇಚಿಸುವಾಗ ಅವನಿಗೆ ಮೂಲವಸ್ತುವೂ ಪ್ರೇರಕವೂ ಪೋಷಕವೂ ಆದ ವ್ಯಾಸ ಕಥೆಯೊಂದಿತ್ತು ಎಂಬುದರ ಬಗೆಗಿನ ಎಚ್ಚರದ ಅಗತ್ಯ. ನಮ್ಮ ವಿಮರ್ಶಕರು ಸಾಮಾನ್ಯವಾಗಿ ಶಾಕುಂತಲವನ್ನು ಸದ್ಯೋಜಾತ ಸೃಷ್ಟಿಯೆಂದೆ ಬಗೆಯುತ್ತಾರೆ. ಮೂಲ ವೊಂದಿದೆ ಎಂದು ಗೊತ್ತಿರುವವರೂ ಅದರ ಸತ್ತ್ವ ತೀರಾ ನಿರ್ಲಕ್ಷಿಸಿ ಇದನ್ನೆ ಸ್ವರ್ಗಕ್ಕೇರಿಸುತ್ತಾರೆ. ಕೆಲವರಿಗೆ ವ್ಯಾಸಕಥೆಯ ಗುಣ ತಿಳಿದಿದ್ದರೂ ಅದರ ನಿಜವಾದ ಜೀವಧಾತು ಯಾವುದು ಎಂಬ ಬಗೆಗೆ ತಪ್ಪಭಿಪ್ರಾಯವಿರುತ್ತದೆ. ಅದನ್ನು ಕುರಿತ ಸರಿಯಾದ ತಿಳಿವಳಿಕೆ ಕಾಳಿದಾಸನ ದುಷ್ಯಂತಪಾತ್ರದ ಸ್ವಭಾವವನ್ನು ಅರಿಯಲು ಅವಶ್ಯ. ಕಾಳಿದಾಸನಿಗೆ ವ್ಯಾಸರ ಶಕುಂತಲೋ ಪಾಖ್ಯಾನದ ಅರಿವು ಚೆನ್ನಾಗಿದೆ. ಅಷ್ಟೆ ಅಲ್ಲ, ಆ ವಸ್ತುವಿನ ಶಕ್ತಿವ್ಯಾಪ್ತಿಗಳು, ಅದು ಒಡ್ಡುತ್ತಿರುವ ಸಮಸ್ಯೆಗಳು ಅದರ ಸಾಧ್ಯತೆಗಳು ಹಾಗೂ ಆ ಪ್ರಣಯ ಕೇಂದ್ರಸತ್ತ್ವ—ಜೀವಧಾತು ಏನೆಂಬುದು ಎಲ್ಲ ಚೆಲೋ ತಿಳಿದಿದೆ. ಅದಿಲ್ಲದಿದ್ದರೆ ಅವನು ಈ ಪ್ರಣಯ ಸಮಸ್ಯೆಯನ್ನೆ ಸರಳಗೊಳಿಸುತ್ತಿದ್ದ. ದುಷ್ಯಂತ ಪೂಜಕ ವಿಮರ್ಶಕವರ್ಗ ಭಾವಿಸಿರುವಂತೆ ಚಿತ್ರಿಸ ಹೋಗಿದ್ದರೆ ಆಗ ಅವನ ಪಾತ್ರ ವನ್ನು ಕವಿ ಸರಳಗೊಳಿಸಿ ಸಪ್ಪೆಯಾಗಿಸುತ್ತಿದ್ದ. ವಾಸ್ತವವಾಗಿ ಕವಿ ಹಾಗೆ ಮಾಡಿಲ್ಲ ; ವ್ಯಾಸರ ಕಥೆಯನ್ನೆ ಇನ್ನೂ ಗಂಭೀರಗೊಳಿಸಿದ್ದಾನೆ. ಅಲ್ಲಿನ ಧೀರ ಶಕುಂತಲೆಯನ್ನು ಇವನೇನೊ ಹೆಚ್ಚು ಕೋಮಲಗೊಳಿಸಿದ್ದಾನೆ—ವೀರ ಕಥೆಯ ಆವರಣದಿಂದ ನಾಗರಿಕ ರಮ್ಯ ಕಥೆಯ ಆವರಣಕ್ಕೆ ಆಕೆಯನ್ನು ಒಗ್ಗಿಸಿಕೊಳ್ಳು ವಾಗ. ಹಾಗೆಯೆ ದುಷ್ಯಂತನನ್ನು ಹೆಚ್ಚು ಶೋಧನಕ್ಕೊಳಪಡಿಸುತ್ತಾನೆ, ಆಳಗೊಳಿಸುತ್ತಾನೆ.

ಇಬ್ಬರೂ ದುಷ್ಯಂತರು ಶಕುಂತಲೆಯನ್ನು ಕಣ್ವರಿಲ್ಲದಾಗಲೆ ಮದುವೆಯಾಗು ತ್ತಾರೆ. ಕಾಳಿದಾಸನ ದುಷ್ಯಂತನಿಗಿಂತ ವ್ಯಾಸರ ದುಷ್ಯಂತ ಹೆಚ್ಚು ನೇರವಾಗಿ ತನ್ನ ಪ್ರೀತಿಯನ್ನು ಸ್ಪಷ್ಟಪಡಿಸುತ್ತಾನೆ. ನಾಗರಿಕನಾದ ಕಾಳಿದಾಸನ ದುಷ್ಯಂ

ತನೂ ನಾಗರಿಕ ಮಾರ್ಗವನ್ನೆ ಅನುಸರಿಸುತ್ತಾನೆ. ಅಲ್ಲಿಯು ದುಷ್ಯಂತನೂ ಬೇಟೆಯಾಟದ ಮೂಲಕವೆ ಕಣ್ವಾಶ್ರಮ ಪ್ರವೇಶಿಸುತ್ತಾನೆ. ನೇರವಾಗಿ ಕಣ್ವರ ಪರ್ಣಶಾಲೆಯ ಮುಂದೆ ನಿಂತು "ಯಾರಿದಾರೆ" ಎಂದು ಕೂಗಿದಾಗ 'ಶ್ರೀಸಮಾನ'ಳಾದ ಶಂಕುತಲೆ ಬಂದು ಅರ್ಘ್ಯಪಾದ್ಯಗಳನ್ನು ನೀಡಿ ಉಪಚರಿಸು ತ್ತಾಳೆ, ಅವನ ಕ್ಷೇಮ ಸಮಾಚಾರ ಕೇಳುತ್ತಾಳೆ. ತಾನು ಕಣ್ವರಿಗೆ ಗೌರವ ಸಮರ್ಪಿಸಲು ಬಂದಿರುವುದಾಗಿಯೂ ಅವರೆಲ್ಲಿ ಹೋಗಿರುವರೆಂದೂ ರಾಜ ಕೇಳಿ ದಾಗ, ತನ್ನ ತಂದೆ ಫಲಸಂಚಯನಕ್ಕೆ ತೆರಳಿರುವುದಾಗಿಯೂ, 'ಮುಹೂರ್ತ' ದಲ್ಲಿ ಹಿಂತಿರುಗುವುದಾಗಿಯೂ ತಿಳಿಸಿ ಕುಳಿತುಕೊಳ್ಳುವಂತೆ ಕೇಳಿಕೊಳ್ಳು ತ್ತಾಳೆ. ಋಷಿಯನ್ನು ಕಾಣದೆ ಆ 'ವರಾರೋಹೆಯನ್ನು–ಶ್ರೀಮತಿ, ಚಾರು ಹಾಸಿನಿ, ದಮದಿಂದ ತಪಸ್ಸಿನಿಂದ ವಿಭ್ರಾಜಮಾನ ವಪುವುಳ್ಳವಳು, ರೂಪ ಯೌವನಸಂಪನ್ನಳೂ ಆದವಳನ್ನು'–ಕಂಡು ದುಷ್ಯಂತ 'ಅಪಹೃತಮನ'ನಾದ, ಹಾಗೆಂದು ತಿಳಿಸಿಯೂ ತಿಳಿಸುತ್ತಾನೆ. ಅವಳ ಬಗ್ಗೆ ವಿವರ ಕೇಳಿ ತಿಳಿದು ಕೊಳ್ಳುತ್ತಾನೆ. ಶಕುಂತಲೆಯೆ ಎಲ್ಲವನ್ನೂ, ಮೇನಕೆ ವಿಶ್ವಾಮಿತ್ರ ವೃತ್ತಾಂತವನ್ನು, ತನ್ನ ತಂದೆ ಯಾರೋ ಋಷಿಗೆ ಹೇಳುತ್ತಿದ್ದುದನ್ನು ತಾನು ಕೇಳತಿಳಿದಿದ್ದಂತೆ ತಿಳಿಸುತ್ತಾಳೆ. ಆಗ ರಾಜ ಅವಳನ್ನು ನೇರವಾಗಿ ಕೇಳಿ ಬಿಡು ತ್ತಾನೆ, ತನ್ನನ್ನು ಮದುವೆಯಾಗು ಎಂದು : "ಎಲ್ಲ ತಿಳಿಯಿತು, ರಾಜಪುತ್ರಿ, ಕಲ್ಯಾಣಿ, ನನ್ನ ಮಡದಿ (ಭಾರ್ಯೆ) ಯಾಗು ಹೇ ಸುಶ್ರೋಣಿ! ಹೇಳು, ನಾನೇನು ಮಾಡಲಿ. ಸುವರ್ಣಮಾಲೆ, ಒಳ್ಳೆ ಓಲೆ, ಪರಿಹಾಟಕ, ನಾನಾ ಪಟ್ಟಣದಿಂದ ತರಿಸಿದ ಶುಭ್ರ ಮಣಿರತ್ನ, ಅಜಿನ, ನಿಷ್ಕ–ಎಲ್ಲವನ್ನೂ, ಸರ್ವ ರಾಜ್ಯವನ್ನೂ ಈಗಲೆ ನಿನ್ನದಾಗಿಸುವೆ, ನನ್ನ ಭಾರ್ಯೆಯಾಗು ಹೇ, ಶೋಭನೆ ! ಗಾಂಧರ್ವ ವಿವಾಹ ಮಾಡಿಕೊಳ್ಳುವ, ಭೀರು ! ವಿವಾಹಗಳಲ್ಲೆಲ್ಲ ಗಾಂಧರ್ವವೇ ಶ್ರೇಷ್ಠ, ಎನ್ನುತ್ತಾರೆ !"

ದುಷ್ಯಂತನ ಈ ಮಾತಿಗೆ ಶಕುಂತಲೆ, "ಹಣ್ಣು ತರಿಯಲು ತಂದೆ ಆಶ್ರಮ ದಿಂದ ಹೋಗಿದಾರೆ ; ಒಂದು 'ಮುಹೂರ್ತ'ನೋಡು, ಬರುತ್ತಾರೆ ; ಅವರೆ ನನ್ನನ್ನ ನಿನಗೆ ಕೊಡುತ್ತಾರೆ," ಎನ್ನುತ್ತಾಳೆ. ದುಷ್ಯಂತರಾಜ, "ನಿನ್ನನ್ನೆ ಬಯ ಸುವೆ ಹೇ, 'ವರಾರೋಹೆ'! ಕೇಳಿಕೊಳ್ಳುವೆ, ಒಪ್ಪಿಕೊ! ನಿನಗಾಗಿಯೆ ಇದ್ದೇನೆ. ನನ್ನ ಮನವಾದರೂ ನಿನ್ನಲ್ಲೆ ಗತವಾಗಿದೆ. ಆತ್ಮನಿಗೆ ಆತ್ಮನೆ ಬಂಧು, ಆತ್ಮನಿಗೆ

ಆತ್ಮನೆ ಗತಿ ! ತನಗೆ ತಾನೆ ಗೆಳೆಯ, ತನಗೆ ತಾನೆ ತಂದೆ. ಧರ್ಮ ಹೇಳಿದಂತೆ ತನಗೆ ತಾನೆ ದಾನ ಮಾಡಬೇಕು !........ಎಂಟು ಬಗೆಯ ಗಾಂಧರ್ವವಿವಾಹ ದಲ್ಲಿ ನಾವು ಯಾವ ರೀತಿಯಿಂದಾದರೂ ಮದುವೆಯಾಗಬಹುದು, ಶಂಕಿಸ ಬೇಡ. ನಿನ್ನನ್ನು ನಾನು ಕಾಮಿಸಿರುವೆ, ನೀನೂ ಕಾಮವುಳ್ಳವಳು, ವರ ವರ್ಣಿನಿ ! ಗಾಂಧರ್ವ ವಿಧಿಯಿಂದ ಮದುವೆಯಾಗುವ", ಎನ್ನುತ್ತಾನೆ. ಶಕುಂತಲೆ "ಇದೆ ಧರ್ಮಪಥವಾದರೆ, ನಾನೆ ನನ್ನ ಒಡತಿಯಾದರೆ ನೋಡು ನನ್ನದೊಂದು 'ಸತ್ಯ'ವಿದೆ ಕೇಳು. 'ರಹಸ್ಯ' ವಿದು; ನನ್ನಲ್ಲಿ ಹುಟ್ಟುವ ಪುತ್ರ ನೀನಾದ ಮೇಲೆ ಯುವರಾಜನಾಗಬೇಕು, ಮಹಾರಾಜ ! ಸತ್ಯವನ್ನು ತಿಳಿ ಸಿರುವೆ. ಇದಾದರೆ ಆಗಲಿ !" "ಹಾಗೆ ಆಗಲಿ, 'ಶುಚಿಸ್ಮಿತೆ,' ನಿನ್ನನ್ನು ನಗರಕ್ಕೊ ಕರೆದೊಯ್ಯುವೆ. ದಿಟ ನುಡಿಯುತ್ತಿರುವೆ, ನೀನು ಇದೆಲ್ಲಕ್ಕೂ ತಕ್ಕವಳು !" ಎಂದು ದುಷ್ಯಂತ 'ವಿಚಾರಮಾಡದೆ' ಹೇಳಿ ವಿಧಿವತ್ತಾಗಿ ಪ್ರಾಣಿಗ್ರಹಣ ಮಾಡಿದ, ಆಕೆಯೂ ಕೂಡ (ಒಪ್ಪಿದಳು). ಆಮೇಲೆ ಅವಳನ್ನುಒಪ್ಪಿಸಿ ನಗರಕ್ಕೆ ತೆರಳಿದ. ಹೋಗುವಾಗ ಮತ್ತೆ ಮತ್ತೆ, "ನೋಡು, ಚತುರಂಗ ಸೇನೆ ಕಳಿಸಿ ಕೊಟ್ಟು ನಿನ್ನನ್ನು ನಗರಕ್ಕೆ ಕರೆಸಿಕೊಳ್ಳುವೆ, ಶುಚಿಸ್ಮಿತೆ !" ಎಂದು ಹೇಳಿದ ರಾಜ ನಗರವತ್ತ ಹೊರಟ. ಆದರೆ ಅವನ ಮನಸ್ಸಿನಲ್ಲಿ ಕಣ್ವರದೆ ಚಿಂತೆ ! ತಪೋಯುಕ್ತನಾದ ಆ ಭಗವಂತ ಕೇಳಿ ಏನುತಾನೆ ಮಾಡುವರೊ, ಎಂದೆ ಚಿಂತಿಸುತ್ತ ತನ್ನ ಪಟ್ಟಣ ಸೇರಿದ.

ವ್ಯಾಸರ ಈ ದುಷ್ಯಂತನಲ್ಲಿಲ್ಲದ ಪ್ರೀತಿ ಯಾವುದು ? ಕಾಳಿದಾಸನ ದುಷ್ಯಂತ ನಲ್ಲಿ ಮಾತ್ರವೇ ಇರಬಹುದಾದ ದೈವೀಪ್ರೀತಿ ಯಾವುದು? ಭಾರತದ ದುಷ್ಯಂತ ನೇರಮಾತಾಡುತ್ತಾನೆ; ನಾಟಕದ ನಾಯಕನಂತೆ ಪೊದೆಯ ಮರೆಯಲ್ಲಿ ಅವಿತು ಆಟವಾಡುವುದಿಲ್ಲ. ಸಮಯಾಚಾರವನ್ನು ನುಡಿದು ಒಪ್ಪಿಸುತ್ತಾನೆ ; ಅವಳ ಷರತ್ತಿಗೂ ಬಾಗುತ್ತಾನೆ. ಆದರೆ ನಾಟಕದ ದುಷ್ಯಂತ ಗಿಡಗಳ ಹಿಂದೆ ಅವಿತು ಅವರನ್ನು ದಿಟ್ಟಿಸುವುದು ಕೇಳುವುದು ಬಾಯಿ ಚಪ್ಪರಿಸುವುದು ಯಾವುದೂ ಗಂಭೀರವಾಗಿ ತೋರದು. ಅವನನ್ನು ರಾಜರ್ಷಿಯೆಂದು ಘೋಷಿಸುವುದಿಂದ ಆ ಬಗೆಯ ವರ್ತನೆಯನ್ನೂ ಸಮರ್ಥಿಸಿದಂತಾಗುವುದಿಲ್ಲ. ಹಾಗೆ ಮರೆ ನೋಡಿದ, ಮರೆ ಕೇಳಿದ ಕಾಳಿದಾಸನ ನಾಟಕದ ನಾಯಕರಲ್ಲಿ ಅವನೆ ಮೊದಲಿಗ ನೇನೂ ಅಲ್ಲ, ಮಾಲವಿಕಾಗ್ನಿಮಿತ್ರ ನಾಟಕದ ಅಗ್ನಿಮಿತ್ರನೂ ಹೀಗೆಯೆ

ಮಾಡಿದ. ಮಾಲವಿಕೆಯನ್ನು ಹೀಗೆ ಪೊದೆಯ ಮರೆಯಿಂದ ಕಾಣುವ ಅಗ್ನಿಮಿತ್ರನನ್ನು ಕುರಿತ ಅವನ ವಿದೂಷಕ, "ನೀನೋ, ಕಟುಕನಂಗಡಿಯ ಸುತ್ತ ಹಾರುವ ಆಮಿಷಲೋಲುಪವಾದ ಹದ್ದಿನಂತೆ ಅಂಜುಬುರುಕ." (–ಭವಾನಪಿ ಸೂನಾಪರಿಸರಚರ ಇವ ಗೃಧ್ರೋ ಆಮಿಷ ಲೋಲುಪೋ ಭೀರುಕಶ್ಚ–) ಎಂದು ನವ್ಯವಾಗಿಯೆ ವರ್ಣಿಸುತ್ತಾನೆ. ಈ ದುಷ್ಯಂತ ಅವನಿಗಿಂತಲೂ ತೀರಾ ಭಿನ್ನನೆಂದೇನೂ ತೋರುವುದಿಲ್ಲ. ಅದು ಹೋಗಲಿ, ಅವನು ತೋರುವ ಆತುರವಾದರೂ ಎಂತಹುದು! ತಾ ಬರೆದ ಪ್ರಣಯ ಪತ್ರವನ್ನು ತಾನೆ ಇನ್ನೂ ಓದುತ್ತಿರುವಾಗಲೆ ಅಲ್ಲಿಗೆ ನುಗ್ಗಿ ಬರಬೇಕೆ ಪೊದೆ ಮರೆಯಲ್ಲಿ ಅವಿತು ಬಿನದಿಸುತ್ತಿದ್ದ ಈ ರಾಜರ್ಷಿ. ಇದಂತೂ ಎಷ್ಟೂ ಸಂಗೋಪಿತ–ಸಂಯಮಿತ ಪ್ರೇಮವಲ್ಲ. ಭಾರತದ ದುಷ್ಯಂತನಿಗಿಂತಲೂ ಇವನು ಉತ್ತಮನೆಂದೂ ತೋರುವುದಿಲ್ಲ, ತನ್ನ ಪ್ರಣಯ ಪ್ರಾರಂಭದಲ್ಲಿ. ಅಷ್ಟೆ ಅಲ್ಲ, ಅವನಷ್ಟು ಉದಾತ್ತನಾಗಿ ಧೀರನಾಗಿ ಕೂಡ ತೋರುವುದಿಲ್ಲ. ಹೀಗಿದ್ದೂ ಇವನು ಭಾರತದ ಸನಾಮನಿಗಿಂತಲೂ ಹೇಗೆ ಉತ್ತಮನಾದ? ಅಗ್ನಿಮಿತ್ರನಿಗಿಂತಲೂ ಭಿನ್ನವಾದ? ಅದು, ಅವನು ಆಮೇಲೆ ಅನುಭವಿಸುವ ಶೋಧದಿಂದಲೆ ಹೊರತು, ಆ ಮೊದಲು ತೋರಿದ ಅಸಂಯಮಿತ ನಿರ್ವಿಶೇಷ ಪ್ರಣಯೋತ್ಸಾಹದಿಂದೇನೂ ಅಲ್ಲ. ಮಹಾಭಾರತದ ದುಷ್ಯಂತನೂ ಕಾಯಲಿಚ್ಛಿಸುವುದಿಲ್ಲ, ನಾಟಕದ ನಾಯಕನಂತೆಯೆ. ಆದರೆ ಆತ ಆತಂಕಗೊಂಡೆ ಇರುತ್ತಾನೆ, ಕಣ್ವರು ಏನೆಂದುಕೊಂಡಾರೊ ಎಂಬುದಾಗಿ. ಆಶ್ರಮವನ್ನು ಬಿಟ್ಟು ಊರಿಗೆ ತೆರಳುವಾಗ ದಾರಿಯಲೆಲ್ಲ ಅದೆ ಕಳವಳ ಅವನಿಗೆ! (–ಮನಸಾಚಿಂತಯನ್ ಪ್ರಾಯಾತ್ ಕಾಶ್ಯಪಂ ಪ್ರತಿ ಪಾರ್ಥಿವಃ ॥ ಭಗವಾಂಸ್ತಪಸಾ ಯುಕ್ತಃ ಶ್ರುತ್ವಾ ಕಿಂ ನು ಕರಿಷ್ಯತಿ । ಏವಂ ಸ ಚಿಂತಯನ್ನೇವ ಪ್ರವಿವೇಶ ಸ್ವಕಂ ಪುರಂ ॥) ಆದರೆ ನಾಟಕದ ಧೀರ ಕಣ್ವರ ಬಗೆಗೆ ಮೊದಲೇನೊ ಗೌರವದ ಮಾತಾಡಿದ; ಆಮೇಲೆ ಅವರನ್ನು ಮಾಲತಿಯ ಪಕ್ಕದ ಎಕ್ಕವೆಂದೆ ಭಾವಿಸುತ್ತಾನೆ, ತನ್ನ ಪ್ರಣಯೋತ್ಕಟತೆಯಲ್ಲಿ. ಅದೇನೊ ಸಹಜವೆಂದೂ ತಿಳಿದುಕೊಂಡರೂ ಅವನೂ ಇವನಂತೆ ಕಣ್ವರಿಗಾಗಿ ಕಾಯದ್ದರದೆ ಜಾರಿಕೊಂಡು ತೆರಳುತ್ತಾನೆ. ಒಂದು ವ್ಯತ್ಯಾಸವೆಂದರೆ ನಾಟಕದ ದುಷ್ಯಂತ ಕಣ್ವರ ಬಗ್ಗೆ ಕಳವಳಗೊಂಡುದರ ಸೂಚನೆಯೂ ಇಲ್ಲ. ಕಳವಳಕ್ಕೆ ಅಗತ್ಯವಿಲ್ಲ ಎಂದೆ ಹೇಳಬಹುದು. ಹಾಗಿದ್ದರೇಕೆ ಅವರಿಲ್ಲದಾಗಲೆ ಜಾರಿಕೊಂಡು ಹೋಗಬೇಕಾ

ಗಿತ್ತು. ಕಾಳಿದಾಸ ತನ್ನ ನಾಯಕ ನಿರ್ಭೀತ ನಿಷ್ಕಲ್ಮಷನೆಂದೆ ಭಾವಿಸಿರುವನೆ ? ವ್ಯಾಸರಿಗಿಲ್ಲದ ಆ ಧೈರ್ಯ ಇವನಿಗೆಲ್ಲಿ ಆತನ ಬಗೆಗೆ ! ದುಷ್ಯಂತನನ್ನು ಕಾಳಿದಾಸ ಎಷ್ಟೆ ರಾಜರ್ಷಿಯಾಗಿ ಚಿತ್ರಿಸ ಹೋದರೂ ಅವನು ಮಾಡುವ ಈ ಕೆಲಸಗಳಿಗೆ ಸಿಂಧುತ್ವ ಬರುವುದಿಲ್ಲ, ಹಾಗೂ ವ್ಯಾಸಕಥೆಯ ಆ ನಾಯಕನಲ್ಲಿದ್ದ ಮೂಲ ಗುಣಗಳನ್ನು ಇಲ್ಲಗಳೆದಂತಾಗುವುದಿಲ್ಲ. ವ್ಯಾಸರೂ ದುಷ್ಯಂತನನ್ನು ರಾಜರ್ಷಿ ಯೆಂದೆ ಕರೆಯುತ್ತಾರೆ. ಆದರಿಂದಲೆ ಅವರು ಅವನ ಪ್ರಮಾದಗಳಿಗೆ ಕುರುಡಾಗಲಿಲ್ಲ. ಕಾಳಿದಾಸನಾದರೂ ಅದಕ್ಕೆ ಹೇಗೆ ಅವಜ್ಞೆ ತೋರಿಯಾನು ? ವ್ಯಾಸರ ದುಷ್ಯಂತ ತನ್ನ ಊರಿಗೆ ಹೋದಮೇಲೆ ಮಾತಿನಂತೆ ಶಕುಂತಲೆಯನ್ನು ಯಾವ ಚತುರಂಗಸೇನೆಯೊಡನೆಯೂ ಕರೆಸಿಕೊಳ್ಳಲಿಲ್ಲ. ಮೂರುವರ್ಷ ತವರಿನಲ್ಲೆ ಉಳಿದ ಶಕುಂತಲೆಯನ್ನೂ ಆಕೆಯ ಮಗನನ್ನೂ ಕಣ್ವರು, ತಮ್ಮ ಶಿಷ್ಯರೊಡನೆ ಅವನಲ್ಲಿಗೆ ಕಳಿಸಿಕೊಡುತ್ತಾರೆ.

ಇಲ್ಲಿ ದುಷ್ಯಂತನ ಸ್ವಭಾವದ ನಿಜಸ್ವರೂಪ ಬೆಳಕಿಗೆ ಬರುತ್ತದೆ. ಶಕುಂತಲೆ ತನ್ನ ನಿಜ ಸಂಗತಿಯನ್ನು ಹೇಳಿಕೊಂಡರೂ ಅದೆಲ್ಲ ದುಷ್ಯಂತನಿಗೆ ತಿಳಿದಿದ್ದರೂ ಅವನದನ್ನು ಅಲ್ಲಗಳೆಯುತ್ತಾನೆ. ಅವಳನ್ನೆ ಹಳಿಯುತ್ತಾನೆ. ಅದಕ್ಕೇನೊ ಶಕುಂತಲೆ ಕುಸಿಯಲಿಲ್ಲ ; ದುಃಖಗೊಂಡರೂ ತನ್ನ ತಪಸ್ವಿನೀಸತ್ತ್ವವನ್ನೆಲ್ಲ ತೋರಿಸುತ್ತಾಳೆ ; ಕಾಳಿದಾಸನ* ನಾಗರಿಕ ಆಸ್ಥಾನ ಪ್ರಪಂಚಕ್ಕೆ ಒಗ್ಗದ ರೀತಿಯಲ್ಲೂ ತನ್ನ ಅಭಿಮಾನವನ್ನು ಪ್ರದರ್ಶಿಸುತ್ತಾಳೆ ; ತನ್ನ ಅವನ ಸಂಬಂಧ ಹರಿಯಿತೆಂದೂ ಘೋಷಿಸುತ್ತಾಳೆ. ದುಷ್ಯಂತ ಅದಾವುದಕ್ಕೂ ಕರಗಲಿಲ್ಲ. ಶಕುಂತಲೆ ಆಶ್ರಮದತ್ತ ಮುಖಮಾಡಿದಾಗ ದೇವವಾಣಿಯೊಂದು ಎಚ್ಚರಿಸಿದ

---

* ಈ ಬಗೆಯ ಹೆಣ್ಣಿನ ಸಾಧ್ವೀಕರಣ ಭಾಸನ ಸ್ವಪ್ನವಾಸದತ್ತ ನಾಟಕದಲ್ಲೆ ಪ್ರಾರಂಭವಾಯಿತು. ಬಹುಪತ್ನೀಲೋಲ ರಾಜರನ್ನು ರಾಜರ್ಷಿಯಾಗಿ ಮೆರೆಸುವ ಕಾಲದಲ್ಲಿ ಹೆಣ್ಣನ್ನು-ಸವತಿಯರ ನಡುವಣ ದುಃಖಿ ಸತಿಯನ್ನು-ಸಾಧ್ವಿಯಾಗಿರು ವಂತೆ ತಾತ್ತ್ವಿಕಾವರಣವನ್ನೂ, ಸಮಯಾಚಾರದ ಆವರಣವನ್ನೂ ನೇಯುವುದು ಆ ಕಾಲಕ್ಕಾಗಲೆ ಬೆಳೆದಿತ್ತು. ಅದರ ಪರಿಣಾಮವೆಂದರೆ ಕಾಳಿದಾಸ ತನ್ನ ಊರ್ವಶಿ ಪಾರ್ವತಿಯರನ್ನೂ ತೀರಾ ಹೆಣ್ಣಾಗಿಸಿದ್ದಾನೆ, ಆ ಪಾತ್ರಗಳ ಮೂಲ ಸ್ವರೂಪವನ್ನೂ ನಿರ್ಲಕ್ಷಿಸಿ. ವ್ಯಾಸರ ಕಾಲ ವೀರಯುಗ. ಅವರ ಹೆಣ್ಣು ಶಕುಂತಲೆಯಾಗಬಹುದು, ಕುಂತಿ ದ್ರೌಪದಿಯಾಗಬಹುದು, ದೇವಯಾನಿ ಶರ್ಮಿಷ್ಠೆಯಾಗಬಹುದು. ಎಲ್ಲರಲ್ಲೂ ಹೆಣ್ಣುತನದ ಕೂಡೆ ಒಂದೆರಡೆಳೆ ಕೆಚ್ಚಿದೆ, ಗಡುಸಿದೆ.

ಮೇಲೆ–ಆಕೆಯನ್ನು ಅವಮಾನಿಸಬೇಡ, ದೌಷ್ಯಂತಿಯನ್ನು ಒಪ್ಪಿಸಿಕೊ ಎಂದು ಆದೇಶಿಸಿದ ಮೇಲೆ–ಅವನು ತನ್ನ ಸುತ್ತೂ ಜನರಿಗೆ ಹೇಳುತ್ತಾನೆ: 'ನನಗಿದು ಮೊದಲೆ ತಿಳಿದಿತ್ತು. ನಾನಾದರೂ ಆಕೆಯ ಮಾತಿನಂತೆ ನನ್ನ ಮಗನೆಂದು ಒಪ್ಪಿಸಿಕೊಂಡಿದ್ದರೆ ಲೋಕದ ಶಂಕೆಗೆ ತುತ್ತಾಗಬೇಕಿತ್ತು; ಈತನೂ ಶುದ್ಧನೆಂದಾಗುತ್ತಿರಲಿಲ್ಲ,' ಎಂದು. ಮಗನನ್ನೂ ಸತಿಯನ್ನೂ ಸ್ವೀಕರಿಸಿಕೊಂಡ ಮೇಲೆ ದುಷ್ಯಂತ ತನ್ನ ಸತಿಗೆ ಹೇಳುತ್ತಾನೆ: "ಲೋಕಪರೋಕ್ಷವಾಗಿ ನಿನ್ನ ಕೂಡೆ ಈ ಸಂಬಂಧವಾಯಿತು. ಅದರಿಂದ ನಿನ್ನ ಶುದ್ಧ್ಯರ್ಥವಾಗಿ ಇದನ್ನು ವಿಚಾರ ಮಾಡಿದೆ. ನನ್ನ ನಿನ್ನ ಸಂಗವನ್ನು ಲೋಕ ಸ್ತ್ರೀಭಾವದಿಂದಲೆ ತಿಳಿಯುತ್ತದೆ; ಈ ಮಗನನ್ನು ರಾಜ್ಯಕ್ಕೆ ಆರಿಸುವುದರಿಂದಲೆ ನಾನು ಹೀಗೆಲ್ಲ ವಿಚಾರ ಮಾಡಿದೆ. ಪ್ರಣಯಮಯಿಯಾದ ನೀನು, ಪ್ರಿಯೆ, ಕೋಪದಿಂದಾಗ ನುಡಿದ ತುಂಬ ಅಪ್ರಿಯವಾದದ್ದನ್ನೆಲ್ಲ ಕ್ಷಮಿಸಿರುವೆ. ಶುಭೆ!" ಹೀಗೆಂದು ಅವಳನ್ನು-ತನ್ನ ಪ್ರಿಯ ಮಹಿಷಿಯನ್ನು–ಮತ್ತು ರತ್ನ ಉಡುಗೆ ಪಾನಾದಿಗಳಿಂದ ಸತ್ಕರಿಸುತ್ತಾನೆ.

ವ್ಯಾಸರ ದುಷ್ಯಂತನ ಈ ವರ್ತನೆಯಲ್ಲಿ ಅವನ ಸ್ವಭಾವದ ಒಂದೆರಡು ಎಳೆಗಳು ಕಾಣುತ್ತವೆ. ಅವನು ತಿಳಿದೂ ತಿಳಿದೂ ಶಕುಂತಲೆಯನ್ನು ನಿರಾಕರಿಸುತ್ತಾನೆ. ಆ ನಿರಾಕರಣಕ್ಕೆ, ಹಾಗೂ ತನ್ನ ಮಾತಿನಂತೆ ಅವಳನ್ನು ಆಶ್ರಮದಿಂದ ಕರೆಸಿಕೊಳ್ಳದಿರುವುದಕ್ಕೆ ಕಾರಣವೇನು? ಶಕುಂತಲೆಯನ್ನು ಸ್ವೀಕರಿಸಿಕೊಳ್ಳುವುದೆಂದರೆ ಅವಳಿಗೆ ಕೊಟ್ಟಿರುವ ಮಾತನ್ನು–ಅವಳನ್ನು ಪಟ್ಟಮಹಿಷಿ ಮಾಡಿ ಮಗನಿಗೆ ಯುವರಾಜಪದವಿ ನೀಡುವುದನ್ನು–ಕಾರ್ಯಗತ ಮಾಡುವುದು ಎಂದೆ ಆಗುತ್ತದೆ. ಮಾತುಕೊಡುವುದು ಎಷ್ಟು ಮೋಹಕವಾಗಿರುತ್ತೆ; ಕೊಟ್ಟ ಮಾತನ್ನು ನಡೆಸುವುದೆಷ್ಟು ಘೋರವಿರುತ್ತೆ! ಅದರಿಂದಲೆ ಅವಳನ್ನವನು ಕರೆಸಿಕೊಳ್ಳಲಿಲ್ಲ. ಆದರೆ ಅವಳೆ ಮಗನೊಡನೆ ಬರಬೇಕೆ! ಮಗ ತೀರಾ ಬೆಳೆದಿದ್ದಾನೆ. ಜನ ಏನೆಂದುಕೊಂಡಾರು? ಆಶ್ರಮದಿಂದ ತಾನು ಹಿಂದಕ್ಕೆ ಬಂದೊಡನೆ ಅವಳನ್ನು ಕರೆಸಿಕೊಳ್ಳುವುದೆ ಅಷ್ಟು ಕಠಕಷ್ಟವಾದುದಾದಾಗ ಅವಳೆ ತನ್ನ ಮಗನೊಡನೆ ಬಂದು ಬಹಿರಂಗವಾಗಿ ಎಲ್ಲವನ್ನೂ ತಿಳಿಸಿದಾಗ ಹೇಗೆ ತಾನೆ ಧೈರ್ಯ ಬರುತ್ತದೆ ಒಪ್ಪಿಕೊಳ್ಳಲು? ಜನ ಏನೆಂದುಕೊಂಡಾರು–ಮುಂದಿನ ರಾಜನಾಗುವವನ ಹುಟ್ಟೆ ಅಸ್ಪಷ್ಟವಾದರೆ, ಹಾಗೂ

ಆಗಲೆ ಪಟ್ಟದ ರಾಣಿಯಾಗುವವಳ ಮದುವೆಯು ಗುಟ್ಟೆ ತಿಳಿಯದಿದ್ದ ಮೇಲೆ? ದುಷ್ಯಂತನಿಗೆ ಮೊದಲಿಗಿಂತ ಈಗ ಹೆಚ್ಚು ಇಕ್ಕಟ್ಟು, ಬಿಕ್ಕಟ್ಟು. 'ಸತ್ಯವೆ ಪರ, ಸತ್ಯವೆ ಬ್ರಹ್ಮ', 'ಸತ್ಯಧರ್ಮಚ್ಯುತರನ್ನು ಕಂಡರೆ ಅನಾಸ್ತಿಕರೂ ಕೂಡ ಕೆರಳಿದ ವಿಷಸರ್ಪಗಳನ್ನು ಕಂಡಂತೆ ಹೆದರುತ್ತಾರೆ-' ಇತ್ಯಾದಿ ಶಕುಂತಲೆಯ ಯಾವ ಮಾತಿಗೂ ಸೊಪ್ಪು ಹಾಕುವುದಿಲ್ಲ ಅವನು. ದೇವವಾಣಿಗೆ ಮಾತ್ರ ಮಣಿಯುತ್ತಾನೆ, ಅದನ್ನು ಜನವೂ ಒಪ್ಪುತ್ತದೆಯಾದ್ದರಿಂದ!

ವ್ಯಾಸರ ದುಷ್ಯಂತನ ಪಾತ್ರದಲ್ಲಿರುವ ಈ ವಿಶಿಷ್ಟಗುಣವನ್ನು ಕಾಳಿದಾಸ ಕಾಣದಿದ್ದರೆ ಹೇಗೆ? ಅವನನ್ನೆಷ್ಟೆ ರಾಜರ್ಷಿಯೆಂದು ಚಿತ್ರಿಸಿದ್ದರೂ ವ್ಯಾಸರು ಮುಂದಿಟ್ಟಿರುವ ದಾಂಪತ್ಯ ಸಮಸ್ಯೆಯನ್ನು ಕಾಳಿದಾಸ ಬಗೆಹರಿಸಿದಂತಾಗುತ್ತಿರಲಿಲ್ಲ, ಒಂದುವೇಳೆ ತಾನೇನಾದರೂ ಮೂಲಕ್ಕೆ ಕರುಡಾಗಿದ್ದರೆ. ತಾನು ಗಾಂಧರ್ವ ವಿಧಿಯಿಂದ ಕೈಹಿಡಿವವಳನ್ನು ಬಹಿರಂಗವಾಗಿ ಸ್ವೀಕರಿಸಿಕೊಳ್ಳುವಾಗ ಏನಾದರೂ ಕ್ಲೇಶವಿದ್ದೆ ಇರುತ್ತದೆ. ಅದೂ ಆ ಹಿಂದಿನ ಸಮಾಜದಲ್ಲಿ, ರಾಷ್ಟ್ರಾಧಿಪತಿಯಾದವನು ಹೀಗೆಲ್ಲ ಮಾಡುವುದು ಎಷ್ಟೊ ಕಷ್ಟವೆ. ಅದನ್ನು ರಗಿಸಿಕೊಳ್ಳುವುದಕ್ಕೆ ಅತಿ ಉದ್ದಾಮ ಸತ್ತ್ವ ಬೇಕು, ಅಥವಾ ಸಮಾಜದ ಬಗೆಗೆ ಅವಜ್ಞೆ ಇರಬೇಕು. ನಾವು ಕಾಣುವ ದುಷ್ಯಂತನಲ್ಲಿ ಎರಡೂ ಇಲ್ಲ. ಸಮಸ್ಯೆ ಇರುವುದು ಇಲ್ಲಿ. ಕಾಳಿದಾಸ ವ್ಯಾಸರು ಎಸೆದ ಸಮಸ್ಯೆಯನ್ನು ಧೈರ್ಯದಿಂದ ಕೈಗೆತ್ತಿಕೊಂಡಿದಾನೆ. ದುಷ್ಯಂತನನ್ನು ಮತ್ತೂ ಶೋಧಿಸುವುದಕ್ಕಾಗಿಯೆ ಅವನಿಗೆ ವಿಯೋಗ ಪರೀಕ್ಷೆ ಒಡ್ಡುತ್ತಾನೆ. ಅದನ್ನು ತರದೆಯೆ ವ್ಯಾಸರು ಅವನಿಗೆ ತೇರ್ಗಡೆ ನೀಡುತ್ತಾರೆ, ಅವನ ಬಂಡವಾಳ ತೋರಿಸಿಯೂ. ಆದರೆ ಕಾಳಿದಾಸ ಶಾಪದ ಮುಸುಕಿನಲ್ಲಿ ಅವನನ್ನು ಶಿಕ್ಷೆಗೊಳಪಡಿಸುತ್ತಾನೆ. ಶಾಪದ ತೋರಿಕೆಯಿಂದ ಅವನ ಪಾತ್ರ ಮೊದಲಿನಿಂದ ಪರಿಶುದ್ಧವಾಗಿರುವಂತೆಯೆ ತೋರುತ್ತದೆ. ಆದರೂ ಅದು ಶೋಧಕಾಗ್ನಿಯಾಗಿಯೆ ಕೆಲಸ ಮಾಡುತ್ತದೆ. ಆಯಾ ಸತ್ತ್ವದ ಲೋಹವನ್ನು ಕರಗಿಸಲೂ ಶುದ್ಧಿ ಮಾಡಲೂ ಆಯಾ ಎತ್ತರದ ಶಾಖವೆ ಬೇಕು ತಾನೆ? ದುಷ್ಯಂತಸತ್ತ್ವಕ್ಕೆ ಶಾಪಾಗ್ನಿಯೆ ತಕ್ಕದ್ದು.

ರಾಜರು ಮಾಡುವುದನ್ನೆಲ್ಲ ಸಾಧುವಾಗಿಸುವ ಕಾಲದಲ್ಲಿ, ಸ್ವಪ್ನವಾಸವದತ್ತ, ಪ್ರತಿಜ್ಞಾಯೌಗಂಧರಾಯಣ, ಮಾಲವಿಕಾಗ್ನಿಮಿತ್ರ, ರತ್ನಾವಳಿ ನಾಟಕಗಳು ಹುಟ್ಟಿಕೊಳ್ಳುತ್ತವೆ. ಅಂತಹ ಕಾಲದಲ್ಲೆ ಇದ್ದ ಕಾಳಿದಾಸ

ಅಂತಹ ರಾಜನನ್ನೂ ಹೆಚ್ಚು ಮೌಲ್ಯವಂತನನ್ನಾಗಿ ಮಾಡಲೆಂದೆ ಈ ರೀತಿಯ ಶಾಪಗೋಪಿತವಾದ, ಪರಿತಾಪ ಮಾಧ್ಯಮದ ಶೋಧನವನ್ನು ಕಲ್ಪಿಸುತ್ತಾನೆ. ಕವಿಯ ಗಮನವೆಲ್ಲ ದುಷ್ಯಂತನ ಶೋಧನದತ್ತಲೆ ಕೇಂದ್ರೀಕರಿಸುವುದರಿಂದ ಆರನೆಯ ಅಂಕಪೂರ್ತಿ ಅವನನ್ನು ಉಬ್ಬೆಯ ಮನೆಯಲ್ಲಿ ನಡೆಸುತ್ತಾನೆ. ಉಂಗುರ ಸಿಕ್ಕು ಶಕುಂತಲೆಯ ನೆನಪೇನೊ ಬರುತ್ತದೆ. ಆಗಲೆ ಅವನ ಒಳ ಕುದಿತವೂ ಪ್ರಾರಂಭವಾಗುತ್ತದೆ. ಉಂಗುರವಿದೆ ಶಕುಂತಲೆ ಇಲ್ಲ. ಅವಳಿದ್ದಾಗ ಅದಿಲ್ಲದೆ ತಿಳಿಯಲಿಲ್ಲ. ಅದು ದೊರೆತು ಕುದಿತ ತಂದಿತ್ತು, ಅವಳನ್ನು ಮರೆಸಿತು. ಮತ್ತೆ ತಾನವಳನ್ನು ಕಂಡೇನೆ ಎಂಬ ಕಿಂಚಿತ್ತಾಶೆಯೂ ಉಳಿಯುವಂತಿರಲಿಲ್ಲ, ಅದು ಸಿಕ್ಕ ಮೇಲೆ ಅವಳೂ ಸಿಗಬಹುದು ಎಂಬ ವಿದೂಷಕನ ಆಶ್ವಾಸವಿನಾ. ಇಂದ್ರನಿಗೆ ಮಹೋಪಕಾರ ಮಾಡಿ ಅವನೊಡನೆ ಅರ್ಧಾಸನ ಭೋಗ ಪಡೆದಾಗಲೂ ಇವನಿಗೆ ತನ್ನ ನಷ್ಟಭಾಗ್ಯ ಲಭಿಸೀತೆಂಬ ಸಂತೈಕೆಯೇನೊ ಅವನಿಂದ ದೊರೆತಂತೆ ತೋರುವುದಿಲ್ಲ. ಸರ್ವಜ್ಞಾನಿ ಇಂದ್ರ ತನಗೆ ಉಪಕಾರ ಮಾಡಿದ ದುಷ್ಯಂತನಿಗಾದರೂ ಪುನಸ್ಸಮಾಗಮ ತಿಳಿಸಬಹುದಿತ್ತಲ್ಲ; ಹಾಗೂ ಅವನಿಗಾದ ವಿಯೋಗ ಶಿಕ್ಷೆಯನ್ನಾದರೂ ಮಾಫಿಮಾಡಬಹುದಿತ್ತಲ್ಲ ? ಅದಾವುದೂ ಸಾಧ್ಯವಿಲ್ಲ; ಅದೆಲ್ಲ ನಮ್ಮ ಲೋಕಕ್ಷೇತ್ರದ ಸಾಧ್ಯತೆಗಳಷ್ಟೆ. ಕಾಳಿದಾಸನ ಆದರ್ಶಲೋಕ ರಾಜನನ್ನೂ-ತಿಳಿಸದಂತೆ-ಅಗ್ನಿಶೋಧನಕ್ಕೊಡ್ಡುತ್ತದೆ, ಯಾವುದೆ ರಿಯಾಯಿತಿಯೂ ತೋರದೆ. ಮರೆಯಬಾರದು, ಈ ಎಲ್ಲಾ ಒತ್ತಡ ಪರೀಕ್ಷೆಗಳೂ ಮುಕ್ಕಾಲು ಮೂರುವೀಸಪಾಲು ದುಷ್ಯಂತನಿಗಾಗಿಯೆ ಬಂದುವೆಂಬುದನ್ನು. ಶಕುಂತಲೆ ನೋವಿಗೀಡಾದವಳಾದರೂ ಅವಳಿಗೆ ಈ ಅಗ್ನಿ ಸ್ನಾನವಿಲ್ಲ, ಬಿಸಿನೀರು ಜಳಕವಲ್ಲದೆ. ಅವಳಿದ್ದದ್ದಾದರೂ ಅತಿಮಾನವ ಮಾತೆ ಮೇನಕೆಯ ಆರೈಕೆ ಹಾರೈಕೆಯಲ್ಲಿ; ಮಾರೀಚ ಋಷಿದಂಪತಿಗಳ ತಪೋವನದಲ್ಲಿ. ಅವರಾರೂ ಬಾಯಿಬಿಟ್ಟು ಸಂತೈಸದಿರಬಹುದೆಂದು ಕವಿ ಸಾನುಮತಿಯನ್ನು ಕಲ್ಪಿಸಿದ್ದಾನೆ. ಶಕುಂತಲೆಗೆ ಇವಳು ದುಷ್ಯಂತನ ಪಾಡನ್ನು ತಿಳಿಸಿ ಅವಳನ್ನು ಮುಳುಗದ ಹಾಗೆ ಇಟ್ಟಿರುತ್ತಾಳೆ. ಹೀಗಾಗಿ, ಅವಳಿಗೆ ಪುನಸ್ಸಮಾಗಮ ಖಚಿತವಾಗಿತ್ತು. ದುಷ್ಯಂತಿಗಾದರೊ ಈ ಯಾವ ಲಘಿಮಾಯೋಗಗಳೂ ಒದಗಿ ಬರಲಿಲ್ಲ, ವಿದೂಷಕನಂತಹ ದಡ್ಡನ ಬೆಂಡು ಸಂತೈಕೆ ಹೊರತು. ಅಂತಃಪುರದ ಆವರಣವಾದರೂ ಮಾಲವಿಕಾಗ್ನಿಮಿತ್ರ, ವಿಕ್ರಮೋರ್ವಶಿಯಗಳ ಅಂತಃಪುರ

ಗಳ ಆವರಣಕ್ಕಿಂತ ಉತ್ತಮವಾಗಿದ್ದರೂ–ಹೇಗೂ ಅವನ ವಿಷಾದಯೋಗಕ್ಕೆ ಯಾವ ಆಧ್ಯಾತ್ಮಿಕ ಆಯಾಮವನ್ನೂ ನೀಡುವಂತಹದಲ್ಲ. ಹಂಸಪದಿಕೆಯರ ಭಗ್ನಮನೋರಥಗೀತಗಳು ಎಂತಹ ಶಾಮಕಗಳಾದಾವು? ಆದ್ದರಿಂದ ಕಾಳಿದಾಸ ನೇರವಾದ ಶೋಧನಕ್ಕೆ ಒಳಪಡಿಸಿರುವುದು ದುಷ್ಯಂತನನ್ನು; ಪ್ರಥಮ ಪರೋಕ್ಷವಾಗಿ ಶಕುಂತಲೆಯನ್ನು. ಶೋಧನಯಂತ್ರವಾಗಿ ಶಾಪ ಬರುತ್ತದೆ ಅಷ್ಟೆ. ಆ ಶಾಪ ಅಗಲಿಸಿತು. ಒಂದು ವೇಳೆ ಸತ್ತ್ವಶೋಧನದ ಅಗತ್ಯವೆ ಇಲ್ಲ ದಿದ್ದರೆ ಶಾಪದ ಅಗತ್ಯವಾದರೂ ಎಲ್ಲಿತ್ತು? ಅದು ಅಪ್ರಾಕೃತಿಕವಾದುದು, ಆದಕ್ಕೆ ಅರ್ಥಹೇಳಬರುವುದಿಲ್ಲ ಎಂದು ಹಾರಿಕೆಯ ಮಾತಾಡುವುದುಂಟು. ಆದರೆ ಶಾಪವನ್ನು ಕಲ್ಪಿಸಿದವ ಕವಿ ತಾನೆ ? ಅವನ ಆ ಕಲ್ಪನೆಗೆ ಉದ್ದೇಶ ವೇನು ? ಎಷ್ಟೇ ಅಘಟಿತವಾದ ವಿಪತ್ತಿ ಬಂದರೂ ದುಷ್ಯಂತ ಶಕುಂತಲೆಯರ ಪ್ರೀತಿ ದೃಢವಾಗಿತ್ತು ಎಂದು ಸೂಚಿಸುವುದಷ್ಟೆ ಅದರ ಉದ್ದೇಶವೇನು ? ನಾವಿಲ್ಲಿ ವ್ಯಾಸರೊಡ್ಡಿರುವ ಸಮಸ್ಯೆಯನ್ನು ಮರೆಯಬಾರದು. ರಹಸ್ಯವಾಗಿ ಪ್ರೀತಿಸಿ ಗಾಂಧರ್ವ ವಿವಾಹ ಮಾಡಿಕೊಂಡೂ ಬಹಿರಂಗವಾಗಿ ಸ್ವೀಕರಿಸಿ ಕೊಳ್ಳುವುದು ರಾಜನಾದರೂ ಎಷ್ಟು ಕಷ್ಟವಾಗಬಹುದು ; ಹಾಗೆ ನಿರಾಕರಿಸು ವುದು ಎಷ್ಟೆಲ್ಲ ಸಾಮಾನ್ಯವಾಗಬಹುದು ; ಅದಕ್ಕೆ ಪರಿಹಾರ ಏನು–ಎಂಬ ಸಮಸ್ಯೆಯನ್ನವರು ಮುಂದಿಟ್ಟಿದ್ದಾರೆ. ಕಾಳಿದಾಸ ಅದನ್ನು ನಿರ್ಲಕ್ಷಿಸಿದ್ದರೆ ಈ ನಾಟಕ ಇಷ್ಟುದ್ದ ಬೆಳೆಯಬೇಕಾಗಿಯೂ ಇರಲಿಲ್ಲ. ಹಾಗೂ ಒಂದು ವೇಳೆ ಅದನ್ನವನು ಗಮನಿಸಿಲ್ಲದಿದ್ದರೆ ಮೂಲಸಮಸ್ಯೆ ಬಗೆಹರಿಯದೆ ಉಳಿದೆ ಕೊಳ್ಳುತ್ತಿದ್ದೆ, ಮತ್ತೊಬ್ಬ ಸಮರ್ಥಕವಿಗಾಗಿ ಕಾಯುತ್ತ. ಆದರೆ ವಸ್ತು ಸಂಗತಿ ಬೇರೆ. ವ್ಯಾಸ ಕಥೆಯನ್ನು ಕಾಳಿದಾಸ ಅತ್ಯಂತ ಸಮರ್ಥವಾಗಿ ಬಳಸಿಕೊಳ್ಳು ತ್ತಾನೆ; ಅವರ ಪ್ರಶ್ನೆಗೆ ಉತ್ತರವನ್ನೂ ಕಂಡುಕೊಳ್ಳುತ್ತಾನೆ.

ಕಡೆಯದಾಗಿ ಒಂದು ಅಂಶವನ್ನಿಲ್ಲಿ ಗಮನಕ್ಕೆ ತಂದುಕೊಳ್ಳಬಹುದು. ನಾಟಕದ ಕಡೆಯಲ್ಲಿ ಬರುವ ಭರತವಾಕ್ಯ ಸಾಮಾನ್ಯವಾಗಿ ನಾಂದೀ ಶ್ಲೋಕ ಗಳಂತೆಯೆ ಸಾಂಪ್ರದಾಯಿಕ ಆಚರಣೆಗಳಾದರೂ ಶಾಕುಂತಲದಲ್ಲಿ ಬರುವ ಭರತವಾಕ್ಯ ಅದರ ನಾಂದಿಯಂತೆಯೆ ಅರ್ಥಗರ್ಭಿತವಾಗಿದೆ ಎಂಬುದನ್ನು ಮರೆಯಬಾರದು. ಇಲ್ಲಿನ ಭರತವಾಕ್ಯವನ್ನು ಹೇಳುವವನು ದುಷ್ಯಂತ ; ಮಾರೀಚರ ಮುಂದೆ, ಸತಿಸುತರನ್ನು ಕೂಡಿರುವಾಗ. ಅದಾದರು ಏನು ?

ಪ್ರವರ್ತತಾಂ ಪ್ರಕೃತಿಹಿತಾಯ ಪಾರ್ಥಿವಃ
ಸರಸ್ವತೀ ಶ್ರುತಮಹತಾಂ ಮಹೀಯತಾಂ ।
ಮಮಾಪಿ ಚ ಕ್ಷಪಯತು ನೀಲಲೋಹಿತಃ
ಪುನರ್ಭವಂ ಪರಿಗತಶಕ್ತಿರಾತ್ಮಭೂಃ ॥

ಪಾರ್ಥಿವ ಪ್ರಕೃತಿಹಿತಕ್ಕಾಗಿ ಪ್ರವರ್ತಿಸಲಿ; ಸರಸ್ವತಿ ಶ್ರುತಿಮಹಿಮರ ಮನ್ನಣೆ ಪಡೆಯಲಿ; ನನ್ನ ಮರುಹುಟ್ಟನ್ನು ಶಕ್ತಿಯೊಡಗೂಡಿದ ಆತ್ಮಭೂ ಆದ ನೀಲಲೋಹಿತನು ಕಳೆಯಲಿ!

ಈ ಪ್ರಾರ್ಥನೆಯೆಲ್ಲ ಕವಿಯದೆ ಆದರೂ ದುಷ್ಯಂತನದೂ ಏಕಾಗಿರಬಾರದು. ಮೇಲಣ ಮೂರು ಆಶಯಗಳಲ್ಲಿ ಕಡೆಯದಂತೂ ದುಷ್ಯಂತನಿಗೂ ಹೆಚ್ಚು ಸಂಬಂಧಿಸಿರುವಂತೆಯೆ ಕಾಣುತ್ತದೆ. ಅವನಿಗಿನ್ನು ಮರುಹುಟ್ಟು ಬೇಡದಾಗಿದೆ; ಅದನ್ನು ಕೈಗೂಡಿಸಬೇಕಾದವನು ನೀಲಲೋಹಿತನಾದ, ಕಪ್ಪುಕೆಂಪು ಕೂಡಿದ ಶಿವಪಾರ್ವತಿಯೋಗದ ಆತ್ಮಭೂ. ದುಷ್ಯಂತನಿಗೇಕೆ ಪುನರ್ ಭವ ಸಾಕಾಯಿತು? ಅದೂ ಹೆಂಡತಿ ಮಕ್ಕಳ ಮುಂದೆ, ಆ ಸಂತಸದ ಘಳಿಗೆಯಲ್ಲಿ ಆ ಮಾತಾಡುವುದೆ? ಅಂದರೆ ಪುನರ್ ಭವದಷ್ಟೆ ಅನುಭವ ಸಂಪನ್ನವಾದ ನವೋನವ ಪ್ರಣಯಾನುಭವಗಳು ಇನ್ನು ಅವನಿಗೆ ಸಾಕಾಗಿದೆ. ಶಕುಂತಲೆಯನ್ನು ಅಗಲಿದ್ದ ಸುಮಾರು ಆರೇಳುವರ್ಷ ಅವನು ಪಟ್ಟ ವಿಶೇಷಾನುಭವಗಳಾದರೂ ಹಿಂದಣ ಎಲ್ಲ ಪ್ರಣಯಭವಗಳ ಅನುಭವವನ್ನೂ ಹೀರಿಕೊಳ್ಳುವಂತಹವು. ಇನ್ನವನಿಗೆ ಅದೇ ಜನನಿಯ ಜಠರಪ್ರವೇಶ ನಿರ್ಗಮನ ಸಾಕು ಸಾಕಾಗಿದೆ. ಉಂಗುರ ಕಳಚುವುದು, ಇಡುವದು ಕೊಡುವುದು, ಮತ್ತೆ ಹೊಸತನ್ನು ತೊಡುವುದು—ಎಲ್ಲ ಸಾಕಾಗಿದೆ.

## ಕೆಳ ಟಿಪ್ಪಣಿ

ವ್ಯಾಸ ಭಾರತದಲ್ಲಿ ಬರುವ ದುಷ್ಯಂತಕಥೆಯ ಉಳಿದರ್ಧವನ್ನು ಗಮನಿಸಬಹುದು: "ರಾಜ ಅತ್ತ ತೆರಳಿದ ಮುಹೂರ್ತದ ನಂತರ ಕಣ್ವರು ಆಶ್ರಮಕ್ಕೆ ಮರಳಿದರು. ಶಕುಂತಲೆ ನಾಚಿಕೆಯಿಂದ ತಂದೆಯನ್ನು ಎದುರುಗೊಳ್ಳಲಿಲ್ಲ. ಮಹಾತಪರಾದ ಕಣ್ವರು ದಿವ್ಯಜ್ಞಾನದಿಂದ ಎಲ್ಲವನ್ನೂ ತಿಳಿದು ಪ್ರೀತರಾದರು, "ಭದ್ರೆ ನೀನು ನನ್ನನ್ನು ಕಾಯದೆ ಗುಟ್ಟನಿಂದ ಮಾಡಿದ ಸಮಾಯೋಗ ಧರ್ಮಘಾತುಕವಾದದ್ದೇನೂ ಅಲ್ಲ. ಕ್ಷತ್ರಿಯರಿಗೆ ಗಾಂಧರ್ವವಿವಾಹ-

ಸಕಾಮರು ಸಕಾಮರನ್ನು ನಿರ್ಯಂತ್ರವಾಗಿ ರಹಸ್ಯದಲ್ಲಿ ಮದುವೆಯಾಗುವುದು ಶ್ರೇಷ್ಠವೆಂದು ಹೇಳುತ್ತಾರೆ. ದುಷ್ಯಂತನಾದರೂ ಧರ್ಮಾತ್ಮ ಮಹಾತ ಪುರೋಷೋತ್ತಮ, ಅವನನ್ನ ಪತಿಯಾಗಿ ಒಪ್ಪಿರುವೆ. ನೀನು ಪಡೆಯುವ ಮಗ ಮಹಾತ್ಮ ಮಹಾಬಲ. ಸಾಗರಾಪಾಂಗಿಯಾದ ಮೇದಿನಿಯನ್ನು ಆಳುತ್ತಾನೆ." ಎಂದರು. ಆಮೇಲೆ ಶಕುಂತಲೆ ತಂದೆಗೆ ಪಾದ್ಯವಿತ್ತು ಆಯಾಸ ಕಳೆದಳು. ಹೊತ್ತ ಫಲಭಾರವನ್ನು ಇಳುಕಿಕೊಂಡು ಜೋಡಿಸಿಟ್ಟಳು. "ನನ್ನ ಪತಿಯಾದ ಪುರುಷೋತ್ತಮ ದುಷ್ಯಂತನನ್ನು ಅವನ ಮಂತ್ರಿಗಳನ್ನು ದಯಮಾಡಿ ಹರಸು, ತಂದೆ" ಎಂದಳು. "ಪ್ರಸನ್ನನಾಗಿರುವೆ ನಿನಗಾಗಿ ಅವನಿಗೆ, ಶುಭ್ರೆ. ನಿನ್ನ ಬಯಕೆಯ ವರಗಳನ್ನೂ ತೆಗೆದುಕೊ", ಎಂದು ಕಣ್ವರು ತಿಳಿಸಲು, ದುಷ್ಯಂತ ಹಿತಕಾಮಳಾದ ಶಕುಂತಲೆ 'ಪೌರವರು ಧರ್ಮಿಷ್ಠರಾಗಿದ್ದು ರಾಜ್ಯವು ಅವರಿಂದ ಜಾರದಿರಲೆಂದು' ವರಗಳನ್ನು ಕೇಳಿಕೊಂಡಳು. ಶಕುಂತಲೆ ಅಮಿತೌಜಸನಾದ ಮಗನಿಗೆ ತಾಯಾಗುತ್ತಾಳೆ. ಮೂರು ವರ್ಷವಾಯಿತು. ಆ ಮಗು ಉರಿಬೆಂಕಿಯಂತೆ ಹೊಳೆಯುತ್ತಿದ್ದ. ಕಣ್ವರೆ ಅವನಿಗೆ ಜಾತಕರ್ಮ ಗಳನ್ನು ವಿಧಿವತ್ತಾಗಿ ಮಾಡುತ್ತಾರೆ. ಸಕಲಚಕ್ರವರ್ತಿ ಚಿಹ್ನೆಗಳನ್ನೂ ಅಂಗೈ ಯಲ್ಲಿ ಪಡೆದು ಆರುವರ್ಷದವನಾದ ಆ ಹುಡುಗ ಸಿಂಹ ಗಜಗಳನ್ನೆಲ್ಲ ಆಶ್ರಮದ ಮರಕ್ಕೆ ಬಿಗಿದು ಕಟ್ಟುತ್ತಿದ್ದ; ಕೆಲವನ್ನೇರಿ ಸವಾರಿಮಾಡಿದ. ಇದನ್ನು ಕಂಡು ಆಶ್ರಮವಾಸಿಗಳು ಅವನನ್ನು ಸರ್ವದಮನನೆಂದು ಕರೆದರು. ಬೆಳೆದ ಆ ಮಗುವನ್ನು ಕಂಡ ಕಣ್ವರು ಇನ್ನವನು ಯುವರಾಜನಾಗುವ ಮುಹೂರ್ತ ಬಂತೆಂದು ತಿಳಿದು ಶಕುಂತಲೆಯನ್ನೂ ಅವನನ್ನೂ ದುಷ್ಯಂತನಲ್ಲಿಗೆ ಬೇಗ ಕರೆದೊಯ್ಯಲೆಂದು ಶಿಷ್ಯಋಷಿಗಳನ್ನು ನೇಮಿಸುತ್ತಾರೆ. ಹೆಣ್ಣು ನಂಟರ ಮನೆಯಲ್ಲಿ ಚಿರವಾಸಮಾಡುವುದು ರುಚಿಸದು. ಕೀರ್ತಿಚಾರಿತ್ರ್ಯ ಧರ್ಮಗಳೆಲ್ಲ ನಷ್ಟವಾಗುತ್ತವೆ, ಎಂದವರು ಭಾವಿಸಿದರು. ತಾನು ದುಷ್ಯಂತನನ್ನು ಮೊದಲು ತಿಳಿದ ಕಾಡನ್ನು ಬಿಟ್ಟು ಮಗುವಿನೊಡನೆ ಶಕುಂತಲೆ ಆತನ ಪಟ್ಟಣ ಸೇರು ತ್ತಾಳೆ. ಬಾಲಾರ್ಕತೇಜಸನಾದ ಪುತ್ರನೊಡನೆ ಆಸ್ಥಾನವನ್ನೂ ಪ್ರವೇಶಿಸು ತ್ತಾಳೆ. ರಾಜನಿಗೆ ತಿಳಿಸಿ ಶಿಷ್ಯರು ಆಶ್ರಮಕ್ಕೆ ತೆರಳುತ್ತಾರೆ. ಶಕುಂತಲೆ ಗೌರವ ಸಲ್ಲಿಸಿ ರಾಜನನ್ನು ಸಂಬೋಧಿಸುತ್ತಾಳೆ: "ಇವನು ನಿನ್ನ ಮಗ, ರಾಜನ್, ಯುವರಾಜ್ಯಾಭಿಷೇಕಗೊಳ್ಳಲಿ. ನೀನೇ ಒಪ್ಪಿದ ಸಮಯವನ್ನು, ಕಣ್ವಾಶ್ರಮ

ದಲ್ಲಿ ನನ್ನ ಸಂಗಮಾಡುವ ಮೊದಲು ಮಾಡಿದ ಸಮಯವನ್ನು, ಈಗ ನೆನೆ ದುಕೊ." ಇದನ್ನು ಕೇಳಿದ ರಾಜನಿಗೆ ಅದರ ನೆನಪಾಯಿತು. ಆದರೆ ಹೀಗೆ ಹೇಳಿದ : "ನನಗೆ ನೆನಪಾಗದು, ದುಷ್ಟತಾಪಸಿ, ನಿನ್ನೊಡನೆ ಧರ್ಮಕಾಮಾರ್ಥ ಸಂಬಂಧವಾವುದೂ ನೆನಪಿಲ್ಲ. ಹೋಗು, ಇಲ್ಲವೆ ಕುಳಿತುಕೊ ; ಹೇಗೆನ್ನಿಸುತ್ತೊ ಹಾಗೆ ಮಾಡು." ಇದನ್ನು ಕೇಳಿದ ಆ ತಪಸ್ವಿನಿ ನಾಚಿದಳು ; ನಿಟ್ಟುಸಿರಿಡುತ್ತಾ ಮರದಂತೆ ನಿಂತಳು. ಅವಳ ಕಣ್ಣು ಕೆಂಪಾಯಿತು, ತುಟಿ ನಡುಗಿತು. ಕಟಾಕ್ಷ ದಿಂದಲೆ ಸುಟ್ಟುಬಿಡುವಂತೆ ನೋಡಿದಳು. ತನ್ನ ತಪಸ್ತೇಜದಿಂದ ಅವಳು ತಾಳಿಕೊಳ್ಳಲು ಶಕ್ತಳಾದಳು. ಒಂದು ಮುಹೂರ್ತ ಧ್ಯಾನಿಸಿ ಅವನನ್ನು ದುಃಖಾಮರ್ಷಪೂರ್ಣದೃಷ್ಟಿಯಿಂದ ದಿಟ್ಟಿಸಿ ಹೀಗೆಂದಳು : "ತಿಳಿದು ತಿಳಿದು ಹೇಗೆ ತಾನೆ ನೀನು ಪ್ರಾಕೃತಜನರಂತೆ ತಿಳಿದಿಲ್ಲವೆಂದು ಹೇಳುವೆ ? ನಿನ್ನ ಹೃದಯವೆ ತಿಳಿದಿದೆ ಸತ್ಯಾಸತ್ಯವನ್ನೆಲ್ಲ. ಆದರಿಂದ ಕಲ್ಯಾಣವನ್ನು ನುಡಿ ; ಆತ್ಮವನ್ನು ಅವಮಾನಿಸಬೇಡ. ನೀನೇನೊ ಭಾವಿಸಿರಬಹುದು, ನೀ ಮಾಡಿದುದು ನಿನಗೊಬ್ಬನಿಗೆ ತಿಳಿದಿರುವುದೆಂದು. ಆದರೆ ನಿನ್ನ ಹೃತ್‌ಶಯನನಾದ ಅಂತರಾತ್ಮ ತಿಳಿದೆ ಇದಾನೆ. ನೀನವನ ಸಾಕ್ಷಿಯಲ್ಲಿ ಪಾಪವೆಸಗುತ್ತಿರುವೆ. ಆಕಾಶ ಆದಿತ್ಯ ಚಂದ್ರ ಅನಿಲ ಅನಲ ಭೂಮಿ ನೀರು ಯಮ, ಹಗಲುರಾತ್ರಿ, ಉಭಯಸಂಧ್ಯೆ, ಧರ್ಮ—ಎಲ್ಲರೂ ನಮ್ಮೆಲ್ಲ ನಡೆಯನ್ನು ನೋಡುತ್ತಿದ್ದಾರೆ. ನಮ್ಮ ಹೃದಯ ಸ್ಥಿತನಾದ; ಕರ್ಮಸಾಕ್ಷಿ—ಕ್ಷೇತ್ರಜ್ಞ ಯಮನು ಎಲ್ಲ ತಿಳಿದಿದ್ದಾನೆ, ಯಾರು ಯಾರಿಗೆ ಏನೇನು ಮಾಡಬೇಕೆಂದು..ಆತ್ಮವನ್ನು ಅವಮಾನಗೊಳಿಸುವನಿಗೆ ಯಾವ ದೇವರೂ ಶ್ರೇಯಸ್ಸು ಮಾಡರು ; ತನ್ನ ಆತ್ಮವೂ ತನ್ನನ್ನು ಹರಸದು. ....ನಾನಾಗಿಯೆ ಬಂದಿರುವೆ ; ಪತಿವ್ರತೆ ನಾನು, ನಿನ್ನ ಸತಿ ; ಅಗೌರವಿಸ ಬೇಡ. ಪ್ರಾಕೃತರನ್ನು ಕಾಣುವಂತೆ ನನ್ನನ್ನು ಈ ಎಲ್ಲರ ಮುಂದೆ ನಡೆಸಿ ಕೊಳ್ಳುತ್ತಿರುವೆ. ನಾನೇನು ಬಯಲಿನಲ್ಲಿ ಮೊರೆಯಿಡುತ್ತಿಲ್ಲ, ಕೇಳಿಸದೆ ನಿನಗೆ. ನಾ ಬೇಡಿದುದನ್ನು ನಡೆಸದಿದ್ದರೆ ಈಗಲೆ ನಿನ್ನತಲೆ ನೂರು ಹೋಳಾಗಿ ಸಿಡಿ ಯುತ್ತದೆ, ದುಷ್ಯಂತ. ತಿಳಿದವರು ಹೇಳುತ್ತಾರೆ : ಪತಿಯೆ ಸತಿಯಲ್ಲಿ ಮರು ಹುಟ್ಟುತ್ತಾನೆ, ಎಂದು. ಅದರಿಂದಲೆ ಅವಳನ್ನು ಜಾಯಾ ಎನ್ನುತ್ತಾರೆ. ಹುಟ್ಟಿದ ಮಗ ಸಂತತಿಯನ್ನೆಲ್ಲ ದಾಟಿಸಿಬಿಡುತ್ತಾನೆ. ಅದರಿಂದಲೆ ಅವನನ್ನು ಪುತ್ರ ಎನ್ನುತ್ತಾರೆ. ಸತಿಯಾದರೂ ಪುರುಷನ ಅರ್ಧ ; ಶ್ರೇಷ್ಠತಮ ಸಖಿ, ತ್ರಿವರ್ಗಕ್ಕೆ

ಮೂಲ ; ಅವಳು ಗಂಡನ ಒಂಟಿತನದ ಗೆಳತಿ, ಧರ್ಮಕಾರ್ಯಗಳಲ್ಲಿ ತಂದೆ, ಕ್ಲೇಶಗಳಲ್ಲಿ ತಾಯಿ, ಕಾಡಿನಲ್ಲೂ ಅವಳೆ ಗಂಡನ ವಿಶ್ರಾಮ. ಅವಳಲ್ಲೆ ಪತಿ ಮಗನಾಗಿ ಮರುಹುಟ್ಟುವುದರಿಂದ ಅವಳೆ ಅವನ ತಾಯಿ. ಹೆಂಡತಿಯಲ್ಲಿ ಹುಟ್ಟಿದ ಮಗನಲ್ಲಿ ತನ್ನನ್ನೆ ಕಾಣುತ್ತ ಸ್ವರ್ಗ ಸಿಕ್ಕಷ್ಟು ಸಂತಸ ಪಡುತ್ತಾನೆ ; ಬೆವರಿಡಿದು ಬಳಲಿದವ ತಣ್ಣೀರಿನಲ್ಲಿ ಮೈ ತೊಳೆದಂತೆ ನಲವುಗೊಳ್ಳುತ್ತಾನೆ. ಅದರಿಂದ ಕೋಪದ ಘಳಿಗೆಯಲ್ಲೂ ಮಡದಿಗೆ ಅಪ್ರಿಯವನ್ನಾಡಬಾರದು. ಸತಿಯೆ ಪತಿಯ ಆತ್ಮಜನನದ ಪುಣ್ಯಕ್ಷೇತ್ರ. ಋಷಿಗಳಾದರೂ ಹೆಣ್ಣಿಲ್ಲದೆ ಸೃಷ್ಟಿಸಲಾರರು.. ಓಡಿಬಂದ ಮಗು ತನ್ನ ದೂಳಿಡಿದ ಮೈಯಿಂದ ಅಪ್ಪಿಕೊಂಡು ತರುವ ಸುಖಕ್ಕಿಂತ ಮತ್ತಾವುದಿದೆ ತಂದೆಗೆ ? ನಿನ್ನನ್ನೆ ಓರೆಗಣ್ಣಿಂದ ನೋಡು ತ್ತಿರುವ ಈ ಮಗನನ್ನು ಏಕೆ ತಾನೆ ಹೀಗೆ ನಡೆಸಿಕೊಳ್ಳುತ್ತಿರುವೆ ? ಇರುವೆಗಳೂ ಮರಿಯನ್ನು ಸಾಕುತ್ತವೆ, ಮೊಟ್ಟೆ ಒಡೆಯುವು. ನೀನಾದರೂ, ಧರ್ಮಾತ್ಮ, ನಿನ್ನ ಆತ್ಮಜನನ್ನು ಕಂದನನ್ನು ಏಕೆ ಕಾಪಾಡೆ ? ಚಂದನ ಸ್ಪರ್ಶವಾಗಲಿ ರಮಣೀಸ್ಪರ್ಶವಾಗಲಿ ಮಕ್ಕಳ ಅಪ್ಪುಗೆಯ ಸುಖ ತಾರವು. ದ್ವಿಪಾದಿಗಳಲ್ಲಿ ಬ್ರಾಹ್ಮಣ, ಚತುಷ್ಪಾದಿಗಳಲ್ಲಿ ಗೋವು, ದೊಡ್ಡವರಲ್ಲೆಲ್ಲ ಗುರು, ಸ್ಪರ್ಶಗಳಲ್ಲೆಲ್ಲ ಪುತ್ರ ಶ್ರೇಷ್ಠ. ಆಲಂಗಿಸಿ ನಿನ್ನನ್ನು ಈ ಪ್ರಿಯದರ್ಶನನಾದ ಮಗು ಸ್ಪರ್ಶಿಸಲಿ. ಪುತ್ರಸ್ಪರ್ಶಕ್ಕೆ ಸುಖಕರವಾದ ಸ್ಪರ್ಶ ಲೋಕಕ್ಕೆ ತಿಳಿದಿಲ್ಲ....ದೂರದೂರಿಗೆ ಹೋದ ಜನ ಇತರರ ಮಕ್ಕಳನ್ನು ಸ್ನೇಹದಿಂದ ತೊಡೆಯ ಮೇಲೇರಿಸಿಕೊಂಡು ಆನಂದಿಸುತ್ತಾರೆ. ಜಾತಕರ್ಮದಲ್ಲಿ ದ್ವಿಜರು ಹೇಳುವ ಮಂತ್ರವನ್ನು ಕೇಳು : 'ನನ್ನಂಗದಿಂದ ಸಂಭವಿಸಿರುವೆ, ನನ್ನ ಹೃದಯದಿಂದ ಜನಿಸಿರುವೆ; ಪುತ್ರನಾಮ ದಲ್ಲಿ ನಾನೆ ಆಗಿರುವೆ. ನೂರು ವರ್ಷ ಬಾಳು! ನನ್ನ ಬಾಳು ನಿನ್ನಧೀನ, ನನ್ನ ಸಂತಾನವೂ ನಿನ್ನಿಂದಲೆ ಅಕ್ಷಯ! ಆದರಿಂದ ನನ್ನ ಕಂದ ನೂರುವರ್ಷ ಸುಸುಖವಾಗಿ ಬಾಳು' ಇವನು ನಿನ್ನಂಗದಿಂದ ಹುಟ್ಟಿದವ ; ನಿನ್ನ ಅಪರ ರೂಪ. ಸರಸಿಯಲ್ಲಿ ಕಂಡುಕೊಳ್ಳುವ ತನ್ನ ರೂಪದಂತೆ ಇವನಲ್ಲಿ ನಿನ್ನನ್ನು ಕಾಣು. ಮನೆಬೆಂಕಿಯಿಂದ ಹೋಮಾಗ್ನಿ ಹಚ್ಚಿಕೊಳ್ಳುವಂತೆ ನಿನ್ನಿಂದ ಇವನು ಹುಟ್ಟಿಕೊಂಡಿದ್ದಾನೆ ; ಒಬ್ಬನೆ ನೀನು ಮಗನಾಗಿ ಎರಡಾಗಿರುವೆ. ರಾಜನ್, ಬೇಟೆಗೆಂದು ಬಂದಾಗ ನೀನು ತಂದೆಯ ಆಶ್ರಮದಲ್ಲಿ ಕುಮಾರಿ ಯಾದ ನನ್ನನ್ನು ಕಂಡೆ. ಊರ್ವಶೀ ಮೊದಲಾದ ಅಪ್ಸರೆಯರಲ್ಲಿ ಮೇನಕೆಯೆ

ಶ್ರೇಷ್ಠ. ಹಿಮವಂತನ ತಪ್ಪಲಲ್ಲಿ ವಿಶ್ವಾಮಿತ್ರನ ಮಗಳಾಗಿ ಹುಟ್ಟಿದೆ. ಏನು ಅಶುಭಕರ್ಮ ಮಾಡಿದ್ದೆ ಹಿಂದಿನ ಜನ್ಮದಲ್ಲಿ, ಬಾಲ್ಯದಲ್ಲಿ ಬಾಂಧವರಿಂದ ಈಗ ನಿನ್ನಿಂದ ನಾನು ತ್ಯಕ್ತಳಾಗುವುದಕ್ಕೆ? ನಿನ್ನಿಂದ ತ್ಯಕ್ತಳಾದ ನಾನು ನನ್ನ ಆಶ್ರಮಕ್ಕೆ ಹಿಂತಿರುಗುವೆ. ಆದರೆ ಈ ಬಾಲನನ್ನು, ನಿನ್ನ ಆತ್ಮಜನನ್ನು ತ್ಯಜಿಸಬೇಡ." ಇದನ್ನೆಲ್ಲ ಕೇಳಿ ದುಷ್ಯಂತ ಹೀಗೆಂದ : "ನಿನ್ನಲ್ಲಿ ಈ ಮಗು ಪಡೆದೆನೆಂದು ನನಗೆ ಗೊತ್ತೆ ಇಲ್ಲ, ಶಕುಂತಲೆ. ಹೆಂಗಸರ ಮಾತು ಸುಳ್ಳು; ಯಾರು ತಾನೆ ನಿನ್ನ ಮಾತು ನಂಬಿಯಾರು. ನಿನ್ನ ತಾಯಿ ಮೇನಕೆ ಮರುಕ ವಿಲ್ಲದ ಚೆಲ್ಲು; ಅವಳು ನಿರ್ಮಾಲ್ಯವನ್ನೊಗೆಯುವಂತೆ ನಿನ್ನನ್ನು ಹಿಮವಂತನ ತಪ್ಪಲಲ್ಲಿ ಒಗೆದಳು. ಅವಳೂ ಮರುಕಗೆಟ್ಟವಳು; ತಂದೆಯೂ, ಆ ಕ್ಷತ್ರಯೋನಿ ವಿಶ್ವಾಮಿತ್ರನೂ ಬ್ರಾಹ್ಮಣತ್ವಲುಬ್ಧ! ಕಾಮಶರಕ್ಕೆ ಹತ! ಮೇನಕೆಯೇನೊ ಅಪ್ಸರೆಯರಲ್ಲಿ ಶ್ರೇಷ್ಠೆ, ತಂದೆಯೂ ಮಹರ್ಷಿ. ಅವರ ಮಗಳು ನೀನು ಪುಂಶ್ಚಲಿ ಯಂತೇಕೆ ಮಾತಾಡುವೆ? ನಿನ್ನ ಮಾತಿಗೇನೂ ಬೆಲೆಕೊಡಬೇಕಾಗಿಲ್ಲ. ಲಜ್ಜೆಗೆಟ್ಟು ನೀನು, ಅದೂ ನನ್ನ ಮುಂದೆ ನುಡಿಯುತ್ತಿರುವೆಯಲ್ಲ; ಹೊರ ಡಾಚೆ ದುಷ್ಟತಾಪಸಿ! ಎಲ್ಲಿ ಆ ಮಹರ್ಷಿ, ಎಲ್ಲಿ ಆ ಮೇನಕೆ, ಕೃಪಣೆ ನೀನೆಲ್ಲಿ? ತಾಪಸೀ ವೇಷಧರಿಸಿದವಳು ನೀನು. ನಿನ್ನ ಮಗ ತುಂಬ ವ್ಯೆತುಂಬಿ ಕೊಂಡಿದಾನೆ, ಅತಿ ಬಲಶಾಲಿಯಾಗಿದಾನೆ. ತುಸು ಕಾಲದಲ್ಲೆ ಶಾಲದ ಬುಡದಂತೆ ಬೆಳೆದಿದಾನೆ–ಹೇಗೆ? ನೀನೂ ನಿಕೃಷ್ಟಯೋನಿ. ಚೆಲ್ಲು ಹಾಗೆ ಮಾತಾಡುತ್ತಿರುವೆ. ನೀನಾದರೂ ಹೇಗೊ ಮೇನಕೆಯ ಕಾಮರಾಗಕ್ಕೆ ಹುಟ್ಟಿದೆ. ನೀನು ಹೇಳುವುದೇನೂ ನನಗೆ ತಿಳಿಯದು ನೆನಪಿಗೆ ಬಾರದು. ತಾಪಸಿ, ಎಲ್ಲಿಗೆ ಬೇಕೊ ಅಲ್ಲಿಗೆ ಹೊರಡು."

ಇದಕ್ಕೆ ಶಕುಂತಲೆ ಹೀಗೆಂದಳು : "ರಾಜ, ಸಾಸುವೆಯಷ್ಟು ಛಿದ್ರವನ್ನೂ ಕಾಣುತ್ತಿ; ನಿನ್ನಡೆ ಬಿಲ್ವದಷ್ಟಿರುವುದನ್ನೂ ಕಾಣಲಾರೆ! ಮೇನಕೆ ದೇವಲೋಕ ದವಳು; ಅವಳು ಆ ಲೋಕದವರಲ್ಲೆ ಮೇಲಾದವಳು. ನನ್ನ ಹುಟ್ಟು, ದುಷ್ಯಂತ, ನಿನ್ನದಕ್ಕಿಂತ ಮೇಲು. ನೆಲದಮೇಲೆ ನೀನು ನಡೆಯುವೆ, ರಾಜೇಂದ್ರ, ನಾನೊ ಅಂತರಿಕ್ಷದಲ್ಲಿ ಚರಿಸುವೆ. ನಿನಗೂ ನನಗೂ ಸಾಸಿವೆ ಮೇರುಗಳ ಅಂತರ. ಮಹೇಂದ್ರ ಕುಬೇರ ಯಮ ವರುಣರ ಮನೆಗೆ ನಾ ಹೋಗಬಲ್ಲೆ, ನೋಡು, ರಾಜ. ಗಾದೆಯೊಂದಿದೆ, ಕೇಳು ಅನಘ, ಹೇಳುವೆ. ನಿದರ್ಶನಕ್ಕಾಗಿ

ಹೇಳುವೆನೆ ಹೊರತು ದ್ವೇಷಕ್ಕಾಗಿಯಲ್ಲ–ವಿರೂಪಿಯಾದವ ಕನ್ನಡಿ ಕಾಣುವ ತನಕ ತಾನೇ ರೂಪವಂತ, ಅಂತ ತಿಳಿದಿರುವ! ಆಮೇಲೆಯೆ ತನಗೂ ಇತರರಿಗೂ ಇರುವ ಅಂತರ ತಿಳಿಯುವುದು. ತುಂಬಾ ರೂಪವಂತ ಕೊಂಚವೂ ಹಳಿಯುವುದಿಲ್ಲ. ಮೂರ್ಖನಿಗೆ ಇತರರಾಡುವ ಮಾತಿನ ಶುಭಾಶುಭದಲ್ಲೆಲ್ಲ ಕಾಣುವುದು ಅಶುಭವೆ–ಹೂತೋಟದಲ್ಲೂ ಅಮೇಧ್ಯವನ್ನೆ ಅರಸುತ್ತದೆ ಹಂದಿ! ಪ್ರಜ್ಞಾವಂತನಿಗೆ ಗುಣವೇ ಕಾಣುತ್ತದೆ, ಹಂಸಕ್ಕೆ ನೀರುಹಾಲಿನಲ್ಲೂ ಹಾಲೆ ಕಾಣುತ್ತದೆ. ಕಹಿಮಾತಾಡುವುದಕ್ಕೆ ಸಾಧುಗಳು ಸಂಕಟಪಡುತ್ತಾರೆ; ದುರ್ಜನರು ಅದರಲ್ಲೆ ತುಷ್ಟಿಪಡುತ್ತಾರೆ. ದುರ್ಜನರೆ ಸಜ್ಜನರನ್ನು ದುರ್ಜನರೆಂದು ಕರೆಯುವುದಕ್ಕಿಂತ ಹಾಸ್ಯತರವಾದುದೇನಿದೆ ಲೋಕದಲ್ಲಿ? ಸತ್ಯಧರ್ಮಚ್ಯುತರನ್ನು ಕಂಡರೆ ಅನಾಸ್ತಿಕರೂ ಕೆರಳಿದ ವಿಷಸರ್ಪ ಕಂಡಂತೆ ಹೆದರುತ್ತಾರೆ; ಇನ್ನು ಆಸ್ತಿಕರು ಏನಾಗಬೇಕು....ಧರ್ಮದ ತೆಪ್ಪವಾದ ಮಗನನ್ನು ತಿರಸ್ಕರಿಸಬೇಡ. ನೂರು ಬಾವಿಗಳಿಗಿಂತ ಒಂದು ಕೆರೆ ಶ್ರೇಷ್ಠ; ನೂರು ಕೆರೆಗಳಿಗಿಂತ ಒಂದು ಕ್ರತು, ಕ್ರತುವಿಗಿಂತ ಪುತ್ರ ಶ್ರೇಷ್ಠ. ಸತ್ಯ ನೂರು ಮಕ್ಕಳಿಗಿಂತಲೂ ಶ್ರೇಷ್ಠ. ನೂರು ಅಶ್ವಮೇಧಕ್ಕಿಂತ ಸತ್ಯ ಹೆಚ್ಚು ತೂಕ. ಎಲ್ಲ ವೇದಗಳ ತಿಳುವಳಿಕೆಗೆ ಎಲ್ಲ ತೀರ್ಥಗಳ ಮೀಹಕ್ಕೆ ಸತ್ಯ ಸಮ. ಸತ್ಯವೆ ಪರ, ಸತ್ಯವೆ ಬ್ರಹ್ಮ. ಆದರಿಂದ ನೀನು ಅದನ್ನು ಬಿಡಬೇಡ, ಎಡಬಿಡದೆ ಅದನ್ನೆ ಕೂಡಿರು. ನೀನೇನಾದರೂ ಸಟೆಗೆ ಗಂಟುಬಿದ್ದರೆ ನಾನಿದೊ ಹೊರಟೆ. ನಿನ್ನ ಸಂಗ ನನಗಿನ್ನಿಲ್ಲ. ನೀ ಗತಿಸಿದ ಮೇಲೆ, ದುಷ್ಯಂತ, ನನ್ನ ಮಗ ಶೈಲರಾಜಾವತಂಸವಾದ ಈ ಭೂಮಂಡಲವನ್ನು ಆಳಿಯೆ ಆಳುತ್ತಾನೆ."

ಹೀಗೆಂದು ಶಕುಂತಲೆ ಬೆನ್ನು ತಿರುಗಿಸಿ ಹೊರಡಲು ಅಂತರಿಕ್ಷವಾಣಿಯೊಂದು ದುಷ್ಯಂತನನ್ನು ಕುರಿತು ಹೇಳಿತು: "ತಾಯಿ ಮಾಂಸಕೋಶ; ತಂದೆಯೆ ಮಗ; ತಂದೆಗೆ ಜನಿಸಿದ ಮಗನೆ ತಂದೆ. ನಿನ್ನ ಮಗನನ್ನು ಭರಿಸಿಕೊ, ಶಕುಂತಲೆಯನ್ನು ಅವಮಾನಿಸಬೇಡ! ಹುಟ್ಟಿದ ಮಗ ತನ್ನನ್ನು ಯಮನಿಂದ ಪಾರುಮಾಡುತ್ತಾನೆ. ನೀನೆ ಈ ಮಗುವಿನ ಧಾತ. ಶಕುಂತಲೆಯ ಮಾತು ಸತ್ಯ. ತನ್ನ ಅಂಗವೆ ಎರಡಾಗಿ ತಾಯಿ ಬಸಿರಲ್ಲಿ ಜನಿಸುತ್ತದೆ. ಆತ್ಮಜನಾದವನನ್ನು ತ್ಯಜಿಸುವುದರಿಂದ ಅಭೂತಿಯಾಗುತ್ತದೆ ಆದ್ದರಿಂದ ಶಾಕುಂತಲನಾದ ಈ ಮಹಾತ್ಮ ದೌಷ್ಯಂತಿಯನ್ನು ಭರಿಸು, ಪೌರವ. ನಮ್ಮ

ಮಾತಿನಂತೆ ನೀನು ಇವನನ್ನು ಭರಿಸುವುದರಿಂದ ಇವನಿಗೆ ಭರತನೆಂದೆ ಹೆಸರಾಗುತ್ತದೆ." ದಿವೌಕಸರ ಈ ಮಾತನ್ನು ಕೇಳಿದ ಪೌರವನು ಸಂಪ್ರಹೃಷ್ಟನಾಗಿ ಪುರೋಹಿತ ಅಮಾತ್ಯರಿಗೆ ಹಿಗೆಂದನು: "ಕೇಳಿ, ನೀವೆಲ್ಲ ದೇವದೂತನ ಈ ಮಾತನ್ನು. ನನಗೆ ಗೊತ್ತು ಈ ಮಗು ನನ್ನ ಮಗನೆಂದು. ನಾನೇನಾದರೂ ಆಕೆಯ ಮಾತಿನಂತೆ ನನ್ನ ಮಗನೆಂದು ಗ್ರಹಿಸಿಕೊಂಡಿದ್ದರೆ ಲೋಕದ ಶಂಕೆಗೆ ಒಳಗಾಗಬೇಕಿತ್ತು; ಈತನೂ ಶುದ್ಧನೆಂದಾಗುತ್ತಿರಲಿಲ್ಲ."

ದೇವದೂತನಿಂದ ಅವನ ವಿಶುದ್ಧಿಯು ತಿಳಿದು ರಾಜನು ಹೃಷ್ಟನಾಗಿ ಪ್ರಮುದಿತನಾಗಿ, ಮಗನನ್ನು ಒಪ್ಪಿಕೊಂಡ; ತಂದೆ ಮಾಡಬೇಕಾದ ಎಲ್ಲ ಕರ್ತವ್ಯಗಳನ್ನೂ ನಡೆಸಿ ಸಸ್ನೇಹದಿಂದ ಅವನನ್ನೆತ್ತಿಕೊಂಡು ನೆತ್ತಿ ಮೂಸಿ ಅಪ್ಪಿಕೊಂಡ, ಮಗನ ಸ್ಪರ್ಶದಿಂದ ಪರಮ ಮುದವನ್ನನುಭವಿಸಿದ. ವಿಪ್ರರು ಆಶೀರ್ವಚನ ನುಡಿಯುತ್ತಾರೆ, ವಂದಿಮಾಗಧರೂ ಹಾಡುತ್ತಾರೆ. ಆಗ ಧರ್ಮಾತ್ಮನಾದ ದುಷ್ಯಂತ ತನ್ನ ಸತಿಯನ್ನು ಗೌರವಿಸಿ ಸಾಂತ್ವನ ನುಡಿಯುತ್ತಾನೆ: "ಲೋಕಪರೋಕ್ಷವಾಗಿ ನಿನ್ನ ಕೂಡೆ ಈ ಸಂಬಂಧವಾಯಿತು. ಅದರಿಂದ ನಿನ್ನ ಶುದ್ಧ್ಯರ್ಥವಾಗಿ ಇದನ್ನು ವಿಚಾರಮಾಡಿದೆ. ನನ್ನ ನಿನ್ನ ಸಂಗವನ್ನು ಲೋಕ ಸ್ತ್ರೀಭಾವದಿಂದಲೇ ತಿಳಿಯುತ್ತದೆ. ಈ ಮಗನನ್ನು ರಾಜ್ಯಕ್ಕೆ ಆರಿಸಿರುವುದರಿಂದಲೆ ನಾನು ಹೀಗೆಲ್ಲ ವಿಚಾರ ಮಾಡಿದೆ. ಪ್ರಣಯ ಮಯಿಯಾದ ನೀನು, ಪ್ರಿಯೆ, ಕೋಪದಿಂದಿದ್ದಾಗ ನುಡಿದ ತುಂಬ ಅಪ್ರಿಯವಾದದ್ದನ್ನೆಲ್ಲ, ಕ್ಷಮಿಸಿರುವೆ, ಶುಭೆ". ಹೀಗೆಂದ ರಾಜರ್ಷಿ ದುಷ್ಯಂತ ತನ್ನ ಪ್ರಿಯಮಹಿಷಿಯನ್ನು ಮುತ್ತು ರತ್ನ ಉಡುಗೆ-ಕೊಡುಗೆ ಪಾನಾದಿಗಳಿಂದ ಸತ್ಕರಿಸಿದ.

# ಹರಿಹರನ ಪುಷ್ಪರಗಳೆ

ಸೃಷ್ಟಿಯ ಪ್ರಾಚೀನ ವಿಸ್ಮಯಗಳಲ್ಲಿ ಬಹು ಸುಂದರವೂ ಸರಲ ಸಾಮಾನ್ಯವೂ ಆದ ಈ ಪುಷ್ಪಜಗತ್ತು ಏಕೋ ಏನೋ ಬಹುತೇಕ ಕವಿಗಳ ಮನಸ್ಸನ್ನು ನಿಶ್ಚಳವಾಗಿ ಪರವಶಗೊಳಿಸಿದಂತಾಗಲಿ ವಿಸ್ಮಯಗೊಳಿಸಿದಂತಾಗಲಿ ತೋರುವುದಿಲ್ಲ. ಅಲ್ಲೊಂದು ಇಲ್ಲೊಂದು ಜಾರಿ ಕಾವ್ಯಗಳಲ್ಲಿ ಅದರ ಆಶ್ಚರ್ಯ ಚರಣಚಿಹ್ನಗಳು ಮಿಂಚಿ ಹೊಳೆದಿದ್ದರೂ ಒಟ್ಟನಲ್ಲಿ ಈ ಸುಮಸೃಷ್ಟಿಯೆಲ್ಲವೂ ಕಾಮನ ಕೈಯ ಕುಸುಮಶರವಾಗುವುದರಲ್ಲೆ ತನ್ನ ಸಾರ್ಥಕ್ಯವನ್ನು ಸಾಧಿಸಿಕೊಳ್ಳಬೇಕಾಯಿತು. ಯಾವುದು ಭಗವದ್‌ಸೃಷ್ಟಿಯಲ್ಲಿ ಅತ್ಯಂತ ಸುಮಧುರವೂ ಸುಂದರವೂ ಕೋಮಲವೂ ಆಗಿದ್ದು ನಿತ್ಯವೂ, ನಾವು ನೋಡಲಿ ಬಿಡಲಿ, ಮುಡಿಯಲಿ ಬಿಡಲಿ, ಚೆಲುವಾಗಿ ಅರಳಿ ನಲವಾಗಿ ಹೊರಳಿ ಬಿತ್ತಾಗಿ ಉರುಳಿಹೋಗುತ್ತದೆಯೊ ಅಂತಹ ಈ ಸೌಂದರ್ಯ ಸೃಷ್ಟಿ ಕವಿಗಳಿಗೆಲ್ಲ ಕೇವಲ ರಸಾನುಭೂತಿಯನ್ನೆ ಕೊಟ್ಟದ್ದು ವಿರಲ. ಅದು ಹಲವರ ಭಾಗಕ್ಕೆ ನಲವಿನ ಸೆಲೆಯೂ ಅಲ್ಲ, ಚೆಲುವಿನ ನೆಲೆಯೂ ಅಲ್ಲ ; ಅಲ್ಲಿ ಯಾವ ಶಿವದ ಬೆಲೆಯೂ ಅವರ ಕಾಣ್ಕೆಗೆ ಸುಳಿಯಲಿಲ್ಲ. ಆ ಸೌಂದರ್ಯ ಹೆಚ್ಚೆಂದರೆ ಹೆಣ್ಣಿನ ಕಣ್ಣನ್ನೊ ಮುಖವನ್ನೊ ತುಟಿ ಹಲ್ಲು ಉಗುರುಗಳನ್ನೊ ವರ್ಣಿಸುವ ಭಟ್ಟಂಗಿಯಾಯಿತು ; ಅಷ್ಟರಲ್ಲೆ ಅದೂ ಕೃತಾರ್ಥವಾಯಿತು. ಈ ದುರವಸ್ಥೆ ಕಡೆ ಕಡೆಗೆ ಎಲ್ಲಿಯತನಕ ಬಂತೆಂದರೆ ಆ ಭಾವನೆಗಳೆ ಕವಿಸಮಯಗಳಾಗಿ ಶಾಶ್ವತ ಕಾವ್ಯವಿಹಾರಿಗಳಾಗುತ್ತವೆ. ಎಂಥ ಪ್ರಬಲ ಕವಿಗೂ ಆ ಹೂಸರಪಳಿಯಿಂದ ಬಿಡಿಸಿಕೊಂಡು ಬರಲು ದುಸ್ಸಾಧ್ಯವಾಗುತ್ತ ಬಂತು. ಅಲ್ಲೊಬ್ಬ ಇಲ್ಲೊಬ್ಬ ಕವಿ ಆ ಪರೀಕ್ಷೆಗಳನ್ನು ದಾಟಬಂದು ಈ ಸೌಂದರ್ಯಲೋಕದಲ್ಲಿ ಪ್ರವಾಸಿಯಾಗಿ ಕ್ಷಣಕಾಲ ವಿಹರಿಸುವುದುಂಟು. ಅಂಥವರಲ್ಲಿ ಹರಿಹರ ಅಗ್ರಪಂಕ್ತಿಯಲ್ಲಿ ಬರುತ್ತಾನೆ.

ಪ್ರಧಾನತಃ ಭಾವೋತ್ಸಾಹದ ಕವಿಯಾದ ಇವನು ಸ್ವಭಾವತಃ ಭಕ್ತನಾಗಿದ್ದುದರಿಂದ ಇವನಿಗೆ ಈ ಸೌಂದರ್ಯಜಗತ್ತು ಶೃಂಗಾರಪರಿವಾರವಾಗಿ ತೋರದೆ ಚೆಲುವಾಗಿ ನಲವಾಗಿ ಮೇಲಾಗಿ ಶಿವದ ನೆಲೆಬೆಲೆಯಾಗಿ ಅನುಭೂತ

ವಾಗುತ್ತದೆ. ಸೌಂದರ್ಯ ತನ್ನ ಬಗೆಬಗೆಯ ಹೊಳಹಿನ ನಿರಿಗೆದರಿದ್ದರೂ ಕಡೆಗೆ ಅದು ಶಿವದ ಕೈಹಿಡಿದು ಆನಂದ ತಂದಿದೆ, ಅವನ ಈ ಪುಷ್ಪರಗಳೆಯಲ್ಲಿ. ಹೂವಿನಲ್ಲಿ ಈ ಕವಿಗೆ ಅಪಾರ ಪ್ರೀತಿ ಆತ್ಮೀಯತೆಯಿರುವುದಕ್ಕೆ ಕಾರಣ ಅದು ಸುಂದರ ಸೃಷ್ಟಿಯೆಂದಷ್ಟೆ ಅಲ್ಲ, ಶಿವದ ದೃಷ್ಟಿಯೆಂದು. ಭಾವುಕ ಕವಿಯಾಗಿ ಹರಿಹರ ಅದರ ಸೌಂದರ್ಯಕ್ಕೆ ಹುಚ್ಚಾಗಿದ್ದಾನೆ, ಉಬ್ಬೆದ್ದು ಕುಣಿದಿದ್ದಾನೆ; ನಿರ್ಭರ ಭಕ್ತನಾಗಿ ಆ ಸೌಂದರ್ಯ ಶಿವಾರ್ಪಿತವಾಗುವಂತೆ ಜಾಗ್ರತನಾಗಿದ್ದಾನೆ; ಅವುಗಳ ಸಂಲಗ್ನದಿಂದ ಆನಂದೋನ್ಮುಖನಾಗಿದ್ದಾನೆ. ಸೌಂದರ್ಯದ ಬೆಲೆ ಶಿವದ ನೆಲೆಯಲ್ಲಿ; ಆ ಎರಡನ್ನೂ ಆನಂದದ ಸೆಲೆ ತುಂಬಿದೆ ಎಂಬ ದರ್ಶನವನ್ನು ಕವಿ ಈ ಪುಷ್ಪರಗಳೆಯಲ್ಲಿ, ಈ ಅಪೂರ್ವ ಭಾವಗೀತೆಯಲ್ಲಿ ಪ್ರತಿಪಾದಿಸಿದ್ದಾನೆ— ಅದ್ಭುತವಾಗಿ.

ಈ ಭಾವಗೀತೆಯ ವಸ್ತು, ಕವಿ ಹೊತ್ತುಮೂಡುವ ಮೊದಲೆ ಎದ್ದು ಹೂ ತಿರಿದು ತಂದು ಶಿವನಿಗೆ ಮುಡಿಸುವುದು, ಅಷ್ಟೆ. ಹೂವಾಡಿಗನಂತಾಗಲಿ, 'ಎಲ್ಲಿಯ ಪ್ರಾರಬ್ಧವಪ್ಪ ಇದು' ಎಂದು ಗೊಣಗುತ್ತ ದೇವರ ಪೂಜೆಗೆ ಆತುರಾತುರವಾಗಿ ಹೂ ಕೀಳುವ ಅಭ್ಯಾಸ ಭಕ್ತನಂತಾಗಲಿ, ಮುಡಿಯಲು ಪೈಪೋಟಿಯಿಂದ ತೋಟದಲ್ಲೆಲ್ಲ ನುಗ್ಗಾಡಿ ಹೂ ಸುಲಿಯುವ ಹೆಣ್ಣುಮಕ್ಕಳಂತಾಗಲಿ, ಈ ಭಕ್ತಕವಿ ಹೂದೋಟಕ್ಕೆ ಕಾಲಿಡುವುದಿಲ್ಲ. ಅವನಿಗೆ ತನ್ನ ಕಾಯಕದಲ್ಲಿ ನಿಷ್ಠೆಯಿದೆ, ಭಕ್ತಿಯಿದೆ; ಬೇಸರ ಆತುರಗಳಿಲ್ಲ, ಪ್ರೀತಿಯಿದೆ ಆತ್ಮೀಯತೆಯಿದೆ, ಉತ್ಸವ ಉತ್ಸಾಹವಿದೆ. ಅದರಿಂದ ಅವನಿಗೆ ಒಂದೊಂದು ಹೂವೂ ಒಂದೊಂದು ಸುಂದರ ಸೃಷ್ಟಿಯಾಗಿ ಕಾಣುತ್ತದೆ. ಹೊತ್ತಾರೆ ಬಹು ಮುನ್ನನೆ ಎದ್ದ ಕವಿ ತನ್ನ ದೈವಕ್ಕೆ ಸಲ್ಲಿಸಿದ ಮೊರೆಯಾದರೂ:

"ಹರುಷದಿಂ ಬೇಡುವೆಂ ನಿನ್ನನುತ್ಸವದಿಂದೆ
ಕರುಣಿಪುದು ಹಂಪೆಯ ವಿರೂಪಾಕ್ಷ ದಯೆಯಿಂದ
ಪೊಚ್ಚ ಪೊಸ ಪೂಗಳಿಂದರ್ಚಿಸುವುದಂ ದೇವ
ಅಚ್ಚರಿಯೊಳಿತ್ತು ಕರುಣಿಸುವುದೆನಗೆಲೆ ದೇವ!"

ಎಂದು. ಅವನ ಪ್ರಾರ್ಥನೆಯಾದರೂ: ಹೊಸಾ ಹೊಸ ಹೂಗಳಿಂದ ಅರ್ಚಿಸುವ ಪುಣ್ಯಕೊಡು ಎಂದು; ಆಶ್ಚರ್ಯಕರವಾದ ರೀತಿಯಲ್ಲಿ ಕರುಣಿಸು ಎಂದು. ಶಿವ ಆ ಆಶ್ಚರ್ಯವನ್ನು ದಯಪಾಲಿಸುತ್ತಾನೆ ನಿಜಕ್ಕೂ. ಆದ್ದರಿಂದಲೆ ಅವನಿಗೆ ಕಂಡ ಕಂಡ ಹೂವೆಲ್ಲ ಆಶ್ಚರ್ಯಾವಹವಾಗಿ ತೋರುತ್ತದೆ. "ಅಹ! ಎನ್ನಲು

ತೋರುವೆ ! ಉಹು ! ಎನ್ನಲು ಜಾರುವೆ !" ಎಂದು ಶ್ರೀ ಪು.ತಿ.ನ. ಚೆಲುವನ್ನು ಕುರಿತು ಹಾಡಿದುದು ನೂರಕ್ಕೆ ನೂರು ಸತ್ಯ ಎನ್ನುವುದಿಲ್ಲಿ ತಿಳಿಯುತ್ತದೆ. ಹರಿಹರನಿಗೆ ಕಂಡೆಡೆಯಲ್ಲೆಲ್ಲ 'ಅಹ !' ಎನ್ನುವ ವಿಸ್ಮಯವುಂಟಾಗುತ್ತದೆ. ಆ ವಿಸ್ಮಯಕ್ಕೆ ಮೂಲಕಾರಣ ಅಕುಟಿಲ ಮುಗ್ಧತೆ, ಆತ್ಮೀಯತೆ. ಆ ಗುಣ ಹರಿಹರನಿಗೆ ಇಲ್ಲಿ ಹೇರಳವಾಗಿರುವಂತೆ ಕಾಣುತ್ತದೆ.

ಶಿವನನ್ನು ಬೇಡಿದ ಮೇಲೆ ಶಿವಗೀತೆಯನ್ನು ಹರ್ಷದಿಂದ ಹಾಡುತ್ತ ಪುಳಕಿಸುತ್ತ, ಶಿವನವರ ಕೀರ್ತಿಯನ್ನು ಕೈವಾರಿಸುತ್ತ, ಅವರ ಮೂರ್ತಿಯನ್ನು ನೆನೆದು ಕರಗುತ್ತಾ ಬರುತ್ತಾನೆ. ಹೀಗೆ ಹೂದೋಟಕ್ಕೆ ಹೊರಡುವಾಗಲೆ ಈ ಭಕ್ತ, ಮೊದಲೆ ಹರ್ಷಭರಿತವಾದ ತನ್ನ ಮನಸ್ಸನ್ನು ಶಿವಭಾವದಿಂದ ಹಸನಾಗಿಸಿಕೊಂಡು, ಆ ದೀಪ್ತಿಯಿಂದ ತುಳುಕುತ್ತ ಸಾಗುವುದರಿಂದ ಅವನಿಗೆ ಕಾಣುವುದಾದರೂ ಸೌಂದರ್ಯವಲ್ಲದೆ ಶಿವವಲ್ಲದೆ ಬೇರೇನು ? ಪರಿಮಳದ ಸುಗ್ಗಿ ಸೌರಭದ ಸಂದಣಿ ಸುರುಚಿರಾಮೋದದ ರಸಾಂಬೋಧಿ ಎನಿಸುವ, ಸುರತರು ಸುಗಂಧದ ತವರ್ಮನೆ ಎನಿಸುವ, ಉರವಣಿಪ ಕಂಪಿನ ಪರಮಸೀಮೆ ಎನಿಸುವ ಹೂತೋಟವನ್ನು ಕಾಣುತ್ತಾನೆ. ಕಾಣುವುದೇನು, ಕಾಣುತ್ತ ಕಾಣುತ್ತಲೆ ಸೊಂಪೇರಿ ಪರಮಾನಂದದಿಂದ ಉಕ್ಕೇರಿ ನಲವೇರಿ :

"ಪುಟವೇಳುತಡ್ಡಮುಂ ತಿಗಟಮುಂ ಪರಿದಾಡಿ
ನಟನಂತಿರುಗ್ಗಡಿಸಿ ಕುಣಿಕುಣಿದು"

ಕೂಗಾಡಿ ನಲಿಯುತ್ತಾನೆ. ಈ ನಲವಿನ ಹುಚ್ಚಿಗೆ ಅಮರ್ತ್ಯಮಂದಾರಗಳಲ್ಲ ಕಾರಣ ; ಸಾಮಾನ್ಯ ತಿರಸ್ಕೃತವಾದ ಅಜ್ಞಾತವಾದ ಹೂವುಗಳು. ಕಕ್ಕೆ ಎಕ್ಕೆ ತುಂಬೆ ಕಂಚಿವಾಳ ಮುಂತಾದ ಸಾಧಾರಣತನವುವಾದ, ಸುಂದರವಾದುವೆಂದೆನಿಸಿಕೊಂಡಿಲ್ಲದ, ಮೇಲಾಗಿ 'ಮುಡಿಭಕ್ತಿ' ಗೆ 'ಪೂಜ್ಯ'ವಲ್ಲದ ಹೂವುಗಳು. ಈ ಹೂವುಗಳೆ ನಲವುಕ್ಕಿಸಬಹುದಾದರೆ, ಭಕ್ತಿಯೋಗ್ಯವಾದರೆ ಅದಕ್ಕೆ ಅವುಗಳು ಧನ್ಯವೋ ಅಥವಾ ಅವುಗಳನ್ನು ಕಂಡ ಕಣ್ಣು ಪುಣ್ಯಕರವೊ ಹೇಳಬೇಕಿಲ್ಲ. ಹಾಗೆ ನೋಡುವುದಾದರೆ ಸುಂದರವಲ್ಲದ ಹೂವೆ ಇಲ್ಲ. ಗಿಡಮರಗಳು ತಮ್ಮ ನಲವು ಒಲವನ್ನು, ಒಳಗಿನ ಉಕ್ಕನ್ನು ಬುಗ್ಗೆಯಾಗಿಸಿಕೊಳ್ಳುವುದೆ ಹೂಗಳ ಮೂಲಕ. ಈ ಬುಗ್ಗೆ ಒಂದೆ ತೆರನಲ್ಲ. ಒಂದೊಂದು ಹೂವು ಒಂದೊಂದು ವಿಶಿಷ್ಟ ಸೃಷ್ಟಿ. ಬಣ್ಣವೊಂದಕ್ಕೆ ಕಂಪೊಂದಕ್ಕೆ ಆಕಾರ ಗಾತ್ರ

ವಿನ್ಯಾಸ ಒಂದೊಂದಕ್ಕೆ ಪ್ರಧಾನವಾಗಿರುತ್ತದೆ. ನಮ್ಮ ದೃಷ್ಟಿಯಲ್ಲಿ ಸುಂದರ ವಲ್ಲದ ಎಷ್ಟೋ ಹೂಗಳ ಆಕಾರ ವಿನ್ಯಾಸ ಪ್ರಸಿದ್ಧ ಸುಮಗಳಿಗಿಂತ ಹೆಚ್ಚು ಸಂಕೀರ್ಣ. ಅವುಗಳ ಆಕಾರ ವೈಚಿತ್ರ್ಯವನ್ನು ಸಮೆಯಲು ಪ್ರಕೃತಿ ಕಡಿಮೆ ಯೇನೂ ಶ್ರಮವಹಿಸಿರಲಾರದು. ಯಾವ ಸುವರ್ಣಕಾರನಿಗೂ ಹೆಚ್ಚು ತ್ರಾಸ ಕೊಡುವ ಹೂಗಳೆ ಅವು. ಆದುದರಿಂದ ನಿಜವಾದ ಸೌಂದರ್ಯದೃಷ್ಟಿಗಾಗಲಿ ನಿಜ ವಾದ ಭಕ್ತಿದೃಷ್ಟಿಗಾಗಲಿ ಸೃಷ್ಟಿಯೆಲ್ಲವೂ ಸುಂದರ, ಎಲ್ಲವೂ ಶಿವಪ್ರಸಾದ. ಭಕ್ತಕವಿ ಹರಿಹರನಿಗೆ ಇಂಥೆಲ್ಲ ಹೂಗಳೂ ಆತ್ಮೀಯವಾಗಿ ಪೂಜ್ಯವಾಗಿ ಸುಂದರವಾಗಿ ಕಾಣುತ್ತವೆ. ಅವನಿಗೆ ಹೂಗಳಲ್ಲಿ ತಾರತಮ್ಯವಿಲ್ಲ. ಒಂದೊಂದರ ವೈಶಿಷ್ಟ್ಯವೂ ಸೂಕ್ಷ್ಮವಾಗಿ ತಿಳಿದೂ ಕೂಡ ಶಿವಭಾವ ಅವನ ಸೌಂದರ್ಯ ದೃಷ್ಟಿಯನ್ನು ವಿಶಾಲಗೊಳಿಸಿದೆ, ವಿಶದಗೊಳಿಸಿದೆ ; ಹಾಗೂ ಸಮಭಾವ ತಂದು ಕೊಟ್ಟಿದೆ. ಅದರಿಂದ ಆವನು ಅವುಗಳನ್ನು ಸಂಬೋಧಿಸಿರುವ ರೀತಿಯಾದರೂ ಎಷ್ಟು ಅವ್ಯಾಜ ಪ್ರೀತಿಯಿಂದ ತುಂಬಿದೆ !

"ಭದ್ರಮುಖಿ ಮೊದಲಾದ ನವಪತ್ರಜಾಲಮಂ
ಕಂಡು, ಪತ್ರಾಳಿಗಳ್ಗೆ ಬಿಗಿ ಶರಣೆಂದೆನುತೆ
ಕಂಡೆಂ ! ಫಲಂ ಪಿರಿದು ! ನೀವುಮಿಂತಿರಿ ! ಎನುತೆ
ಬಗೆಯ ಪೂವಂ ಕಂಡು ಮಿಗೆ ಶರಣು ! ನಿಮಗೆನುತೆ
ನಗುತಲ್ಲಿ ದೊಡ್ಡಿಪತ್ರೆಗೆ ಸೆಟಿ ನಮೋ ! ಎನುತೆ !"

ಅತ್ಯಂತ ಸಾಮಾನ್ಯದಲ್ಲಿ ಈ ವಿಶ್ವಾಸ ಶ್ರದ್ಧೆ ಆತ್ಮೀಯತೆ ಪ್ರೀತಿ ತುಂಬಿರುವ ಕವಿ ಯಾವುದನ್ನು ತಾನೆ ಸುಂದರವಾಗಿ ಶಿವವಾಗಿ ಕಾಣಲಾರ ? ಆ ಮಾತಿನ ಧಾಟಿಯಲ್ಲಿ ಸಂಬೋಧನ ಕ್ರಮದಲ್ಲಿ ಎಷ್ಟು ಸರಲತೆಯಿದೆ ! "ಎದ್ದಿರಾ ?" "ಸೌಖ್ಯ ತಾನೆ ?" ಎನ್ನುವ ಪ್ರೀತಿಯ ಧಾಟಿ !

ಮುಂದೆ ಈ ಭಕ್ತ ಸುವಾಸನೆಯ ನೆಲೆಗೆ ಕಾಲಿಡುತ್ತಾನೆ. ಅಲ್ಲಿ ಅವನು ಮತ್ತೂ ಹೆಚ್ಚು ಎಚ್ಚರದಿಂದಿರುತ್ತಾನೆ. ಕಾರಣ ಅವು ಕಂಪುಳ್ಳವು ಎಂದಲ್ಲ. ಅವುಗಳ ಕಂಪು ಚೆಲುವು ತನ್ನಲ್ಲೆ ಎಲ್ಲಿ ನಿಂತು ಮಾಸಲಳಿದುಹೋಗಿ ಶಿವಕ್ಕಲ್ಲ ದಂತಾಗುವುದೊ, ಶಿವವಂಚಿತವಾಗುವುದೊ ಎಂದು ; ಹಾಗೂ ತಾನು ಕರ್ತವ್ಯಭ್ರಷ್ಟವಾದೇನು ಎಂದು ಆತಂಕದಿಂದ ಅವನು :

"ಬರವರಲ್ ಮುಂಗುಡಿಯ ಕಂಪು ಕರದಿಂ ತೀಡೆ
ಹರಹರ ವಿರೂಪಾಕ್ಷ ನಿನಗೆನುತ್ತಂ ಕೂಡೆ

ಮನದಿಂದೆ ಕೈಕೊಳ್ವ ಮುನ್ನವೀ ಗಂಧಮಂ
ನಿನಗೆ ಬಳಿಕೀವೆನುತ್ತಮ ವೃಂದಮಂ
ಎಂದರ್ಪಿಸುತ್ತೆ ಪೂದೋಂಟಮಂ ಕೈಮಿಕ್ಕು
ಬಂದು ಪುಳಕಿಸುತೆ ಪರಮಾನಂದದಿಂ"

ಹೋಗುತ್ತಾನೆ. ನಲವುಕ್ಕಿ ಕೊನೆದಾಡಿ ಆಹಾ! ವಿರೂಪಾಕ್ಷ! ಎಂದು, ಹೂಗಳನ್ನು ನೋಡಿ ಆಹಾ! ವಿರೂಪಾಕ್ಷ! ಎಂದು, ಆ ಚಂದ ಚಂದದ ಹೂಗಳನ್ನು ಶಿವ ತನಗೆ ಕರುಣಿಸಿದನೇ ಎಂದು ಹರುಷಗೊಂಡು ಮತ್ತೂ ನಲಿಯುತ್ತಾನೆ. ಹೂಚೆಲುವು ಶಿವಕೃಪೆಯಾಗಿ ತೋರಿಬಂದು ಅತಿಶಯ ಆನಂದವಾಗುತ್ತದೆ. ಆದ್ದರಿಂದಲೆ ಅದು ಶಿವಾರ್ಪಿತವಾಗಬೇಕು. ತನ್ನಲ್ಲಿ ನಿಂದರೆ ತಾನೂ ಭ್ರಷ್ಟ ಅದೂ ಪತಿತ ಆಗುವುದುಂಟು. ಅಷ್ಟೆ ಅಲ್ಲ, ಶಿವಾರ್ಪಿತವಾಗಬೇಕಾಗಿರುವ ಆ ಶಿವಕೃಪಾ ರೂಪದ ಸೌಂದರ್ಯವನ್ನು ಏನೊಂದೂ ಎಂಜಲಿಸಬಾರದು. ಹೊರಗಿನ ಅಳಿಯಾಗಲಿ ತನ್ನೊಳಗಿನ ವಿಸುಖದ ಅಳಿಯಾಗಲಿ ಎರಗಬಾರದು. ಅದರಿಂದಲೆ "ಅಳಿಯೆಱಗದ ಅನಿಲನಲುಗದ ರವಿಕರಂ ಪುಗದ" ಶುಭ್ರಸುಮಗಳನ್ನು ಮಾತ್ರವೆ ತಿರಿಯುತ್ತಾನೆ. ಇಷ್ಟು ಮಡಿವಂತಿಕೆಯೆ ಸರಿ, ಸಿದ್ಧಿಗಾಗಿ ಬುದ್ಧಿ ತಾನು ತೋರಬೇಕಾದ ಭಾವಶುದ್ಧಿ ಇದು, ಅಷ್ಟೆ. ಸೌಂದರ್ಯಕ್ಕೊಂದು ಮಡಿಬೇಕೇನೊ ಶಿವನಲ್ಲಿಗೇರಲು? ಅಥವಾ ಶಿವಕ್ಕೇರುವ ತನಕ?

ಹೀಗೆ ಮುಂಬರುವ ಕವಿ, ಬೆಳೆದು ನಳನಳಿಸಿ ಮಘಮಘಿಸಿ ಕವಿದಿಡಿದ ಇರವಂತಿಯನ್ನು ಕಂಡು ನೋಡಲಾರದೆ: "ಪರಶಿವಂಗೋಲೈಪ ಪೂವನೀಯೌ ಎಂದು" ಕೋರಿ ನನೆಮುಗುಳು ಕೊನೆಮುಗುಳು ಬಿರಿಮುಗುಳುಗಳನ್ನೆಲ್ಲ, ತನಿಗಂಪು ತೀವಿದ ಪೊಚ್ಚ ಹೊಸ ಹೂಗಳನ್ನೆಲ್ಲ ಕೊಂಡು ಕುಕಿಲಿರಿದು ಕುಣಿಯುತ್ತ ಮುಂದೆ ಬರುತ್ತಾನೆ. ಆಗ ಕಂಡದ್ದು ಸಂಪಗೆ. ಸಂಪಗೆಯೆಂದರೆ ಅಳಿಗಳಿಗೆ ಕಟುಪಥ್ಯ. ಅಳಿಮನಸ್ಕನಲ್ಲದ ಕವಿ ಅದನ್ನು ಮಾತಾಡಿಸುವ ರೀತಿಯೆ ರೀತಿ:

"ಏನವ್ವ! ಸಂಪಗೆಯೆ! ಶಿವನ ಸಿರಿಮುಡಿಗಿಂದು
ನೀನೀವ ಪೊಸಕುಸುಮಮಂ ನೀಡು ನೀಡೆಂದು
ಅಳಿಮನದ ಪರಿಯೆಂದು ಬಗೆಯದಿರ್ ನೀನೆನುತೆ!"

"ಏನವ್ವ! ಸಂಪಗೆಯೆ!" ಎನ್ನುವ ಮೊದಲ ಮಾತೆ ಸಾಕು ನಮ್ಮನ್ನು ಅತಿಶಯದ ಆತ್ಮೀಯ ಲೋಕಕ್ಕೆ ಕೊಂಡೊಯ್ಯುತ್ತದೆ. ಹಿಂದೆ ಕಂಡ

ಹೂಗಳನ್ನು ಸ್ನೇಹಿತರನ್ನು ವಂದಿಸಿ ಮಾತಾಡಿಸುವಂತೆ ನುಡಿಸಿದರೆ, ಇಲ್ಲಿ ತಾಯನ್ನು ಕೇಳಿಕೊಳ್ಳುವಂತೆ ಕೇಳುತ್ತಾನೆ. ಈ ಪ್ರೀತಿ ಸ್ನೇಹ ಆತ್ಮೀಯತೆ ಹಾಗೂ ಮುಗ್ಧವಿಸ್ಮಯಗಳೆ ಕಾವ್ಯದ ಸೆಲೆ, ಚೆಲ್ವಿನ ಸೆಲೆ....ತಾನು ಹೂ ತಿರಿಯಲು ಬಂದಿರುವುದು ಯಾವ ಆಳಿಯಾಸೆಯಿಂದಲೂ ಅಲ್ಲ, ಹೂವಾಡಿಗ ನಂತಾಗಲಿ ನಾಡಾಡಿಗನಂತಾಗಲಿ ಅಲ್ಲ ; ಶಿವನ ಸಿರಿಮುಡಿಗೊಯ್ಯ ಬಂದಿದ್ದಾನೆ. ಹೀಗೆಂದು ಹೇಳುವಾಗ ಅವನ ಮಾತಿನಲ್ಲಿ ತಾನು ಶಿವನ ರಾಯಭಾರಿಯೆಂಬ ದಿಮಾಕಿಲ್ಲ, ಅದಿದ್ದಿದ್ದರೆ ಚೆಲುವೆ ಹಾಳಾಗುತ್ತಿತ್ತು. ಆದ್ದರಿಂದ ಅದಕ್ಕೆ ಬದಲಾಗಿ ಅವನಲ್ಲಿ ವಿನಮ್ರ ಪ್ರೀತಿಯಿದೆ. ಅದು ಮಾತು ಮಾತಿನಲ್ಲೂ ನಡೆಯಲ್ಲೂ ತುಳುಕುತ್ತ ಹೋಗುತ್ತದೆ.

ಮುಂದೆ, ಕುಂಕುಮದ ತಾರೆಗಳಂತಿರುವ ಪರಿಮಳದ ಪನ್ನೀರ ಹೂವಾದ ಸೇವಂತಿಯಲ್ಲಿಗೆ ಬರುತ್ತಾನೆ. ಕವಿಯು ಆ ವರ್ಣನೆಯಲ್ಲೆ ತಿಳಿಯುತ್ತದೆ ಅವನ್ನು ಆ ಹೂವನ್ನು ಚೆನ್ನಾಗಿ ಕಂಡಿದ್ದಾನೆ ಎಂದು. ಅವನು ಅದರ ರೂಪಚಿತ್ರವನ್ನೂ ಬಹು ಸೊಗಸಾಗಿ ನೀಡುತ್ತಾನೆ. ಹೀಗೆ ಸಾಗುತ್ತ ಕಂಪಿನ ನಿಧಿಯಾದ ಮಲ್ಲಿಗೆಯಲ್ಲಿಗೆ ಬರುತ್ತ, ಅದು ಅಷ್ಟು ಮೋಹಕವಾಗಿರುವುದರಿಂದಲೆ, ಅದನ್ನು ದೂರದಿಂದ ಕಂಡೊಡನೆಯೆ, ಇನ್ನೆಲ್ಲಿ ಅದು ತನ್ನಲ್ಲೆ ನಿಂತುಬಿಡುತ್ತದೊ ಎಂಬ ತಲ್ಲಣದಿಂದ :

"ಅದೆ ! ಮಲ್ಲಿಕಾಲತೆ ! ವಿರೂಪಾಕ್ಷ ! ನಿನಗೆ ! ಎನುತೆ
ಅದೆ ! ಮಾಧವೀಲತೆ ! ವಿರೂಪಾಕ್ಷ ! ನಿನಗೆ ! ಎನುತೆ"

ತನ್ನೊಡೆಯನಿಗರ್ಪಿಸಿ ತನ್ನ ಮನಸ್ಸಿಗೆ ನಿಸ್ಪೃಹತೆಯ ರಕ್ಷೆ ಕಟ್ಟಿಕೊಳ್ಳುತ್ತಾನೆ, ಆ ಚೆಲುವು ಮಿಾಸಲಳಿಯದಂತಿರಿಸುತ್ತಾನೆ—ತನ್ನ ಕೈಗೆ ಸಂದಾಯವಾದ ಹಣವನ್ನು, ಅದು ತನ್ನ ಕೈಯಲ್ಲಿ ಒಂದೆ ಕ್ಷಣವಿದ್ದರೂ ಎಲ್ಲಿ ತನ್ನನ್ನು ಅಂಟಿಕೊಳ್ಳುವುದೊ ಎಂದು ಹೆದರಿ, ಮೂಲನಿಧಿಗೆ ಒಪ್ಪಿಸುವ ನಿಷ್ಕಾಮಂತ ನಿಧಿಸಂಗ್ರಾಹಕನಂತೆ !

ಈ ಮಾಧವೀಲತೆ ಸಂಪ್ರದಾಯದ ಕವಿಗಳಲ್ಲಿ ಕಾಮನ ದಾಯ ಬಿಟ್ಟು ಆಚೆ ಹೋಗುವುದೆ ಇಲ್ಲ. ಹೆಚ್ಚೆಂದರೆ, ಗಂಡನ್ನು ಆಶ್ರಯಿಸುವ ಹೆಣ್ಣನ್ನು ಚೂತಸಂಗದ ಮಾಧವೀಲತೆ ವರ್ಣಿಸಬಹುದು. ಆದರೆ ಇಲ್ಲಿ ಈ ಕವಿಗೆ ಸುಂದರಕ್ಕೆ ಸುಂದರ ಅದು ; ನಲವಿಗೆ ನಲವು ; ಹಾಗೂ ಶಿವಾರ್ಪಣಯೋಗ್ಯ.

ಆ ಹೂವಿನ ಹೊರ ಚೆಲುವಿನ ವರ್ಣನೆಯೆ ಸಹಜವಾಗಿದೆ: "ಹಸುರಳಿದು ಬೆಳ್ಪುಳಿದು ನನೆಯೇಱಿ ಹೊದೆದೋಱಿ." ಈ ಮಾತಿನಲ್ಲಿ ತುಂಬು ಮಲ್ಲಿಗೆ ಮೊಗ್ಗಿನ ಅತ್ಯಂತ ಸಹಜವಾದ ಸುಂದರ ಶಬ್ದ ಚಿತ್ರವಿದೆ. ಮಲ್ಲಿಗೆಯ ಮೊಗ್ಗು ಇನ್ನೂ ಬಳ್ಳಿಯ ಹಸಿರಿನಿಂದ ಬಿಡಿಸಿಕೊಂಡು ಬಂದಿರುವುದಿಲ್ಲ. ಆದರೆ ಅರಳಿದಾಗ ಬಿಳುಪೊ ಬಿಳುಪು. ಹಸಿರೆಲ್ಲ ಅಳಿದು ಬಿಳುಪೊಂದೆ ಹೇಗೆ ಉಳಿದುಕೊಳ್ಳುತ್ತದೆ, ಎಂಬುದೆ ಬೆರಗು .ನನೆಯೇರಿ ಹೊದೆತೋರಿದಾಗ ಹಸಿರುತನ ಅಳಿಯುತ್ತದೆ ; ಅಥವಾ ಹಿಂದುಮುಂದಾಗುತ್ತದೆ ! ಹೀಗೆ ಅದನ್ನು ಅಲ್ಲಲ್ಲಿ ನಿಂತು ನೋಡುತ್ತ ನಲವೇರಿ ಕುಣಿಯುತ್ತಾನೆ. ಆದರಿದೆಲ್ಲಕ್ಕೂ ಮಿಗಿಲಾದುದೆಂದರೆ:

"ಏನವ್ವ ! ಅದಿರ್ಗಂತಿ ! ತುಂಬಿ ತುಳುಕದಮುನ್ನ
ಆನಂದನಿಧಿ ಶಿವಂಗಳ್ಕಱಿಂದಂ ನಿನ್ನ
ಸುಖದ ಮಿಾಸಲ ನವಸುಗಂಧಮಂ ನೀಡೆನುತೆ !
ಮುಖಮೈದರವಗೆ ಸಂದೊಡೆ ಬರ್ದುಂಕುವೆನೆನುತೆ !"

ಅತಿ ಮಮತೆಯಿಂದ ಕೇಳಿಕೊಳ್ಳುತ್ತಾನೆ. ಯಾವ ಬಾಳಾಗಲಿ ಯಾವ ಚೆಲುವಾಗಲಿ ನಲವಾಗಲಿ ಅದು ತುಂಬಿ ತುಳುಕದ ಮುನ್ನ ಆನಂದನಿಧಿ ಶಿವಕ್ಕೆ ಅರ್ಪಿತವಾಗದಿದ್ದರೆ ವ್ಯರ್ಥ. ಮರ್ತ್ಯ ಸೌಂದರ್ಯಗಳೆಲ್ಲಕ್ಕೂ, ತನ್ಮೂಲಕವಾದ ಆನಂದಗಳೆಲ್ಲಕ್ಕೂ ಶಿವನೆ ಆನಂದನಿಧಿ. ಆ ನಿಧಿಯೆ ಈ ಮಧುವಧುಗಳಿಗೆಲ್ಲ ವಿಧಿ. ಆ ಮೂಲನಿಧಿಗೆ ತಮ್ಮ ಜೀವಂತ ಬಾಂಧವ್ಯವಿಟ್ಟುಕೊಳ್ಳದ ಯಾವ ಚೆಲುವೂ ಅಮೃತವಲ್ಲ. ಆ ಮಹಾ ತವನಿಧಿಯ, Reserve Bank ನ ಮನ್ನಣೆಯಿರುವ ತನಕ ಈ ಎಲ್ಲ ನಾಣ್ಯಗಳಿಗೂ ಚಲಾವಣೆ. ಕಳ್ಳದಮ್ಮವಾದರೆ ತಾತ್ಕಾಲಿಕವಾಗಿ ಅತಿ ಚಲಾವಣೆ ದೊರೆತೀತಷ್ಟೆ. ಆದರದು ಸಲ್ಲದು, ಕಡೆಗೆ. ಆದ್ದರಿಂದಲೆ ಬದುಕಿನ ಸುಖದ ಮಿಾಸಲು ತಾನಳಿವುದಕ್ಕೆ ಮೊದಲೆ, ತುಂಬಿ ತುಳುಕದ ಮೊದಲೆ ಆನಂದಶಿವನಿಧಿಗೆ ಅರ್ಪಿತವಾಗಿ ಬದುಕಬೇಕು. ಇಲ್ಲದಿದ್ದರೆ ಬದುಕಿದ್ದೂ ಮೃತ. ಮತ್ತೆ ಬದುಕು: ಸತ್ತಮೇಲೆ ; ಬೆಲೆ : ಬೆಲೆಯಳಿದ ಮೇಲೇ.

ಜಾಜಿ ಹೂವುಗಳಲ್ಲೆಲ್ಲ ಮನೋಹರ. ಮಲ್ಲಿಗೆಗೂ ಬೇರಾದ ಚೆಲುವದರದು. ಅದನ್ನು ಕವಿ:

"ಜಾತಿ ! ನೀನೇ ಸಕಲ ಪುಷ್ಪಜಾತಿಗೆ ಜಾತಿ :
ಭೂತೇಶ್ವರನ ಜಡೆಯ ಮುಡಿಗೇಱಿದೊಡೆ ಜಾತಿ !"

ಎಂದು ಜಾಣ್ಮೆಯಿಂದ ಹೇಳುತ್ತಾನೆ. ಮೊದಲ ನೋಟಕ್ಕೆ ಶ್ಲೇಷೆಯ ಡೊಂಬರಾಟವಿರುವಂತೆ ಕಾಣುವ ಮಾತು ಕಡೆಗೆ ಬಹು ಮನೋಜ್ಞವಾಗಿ ತೋರೀತು. ಹಿಂದಿನ ಮಲ್ಲಿಗೆಗೆ ಹೇಳಿದ ಮಾತನ್ನೆ ಈ ಜಾಜಿಗೂ ಹೇಳುತ್ತಾನೆ, ಬೇರೆ ರೀತಿಯಲ್ಲಿ. ಜಾಜಿ ಹೂಗಳಲ್ಲೆಲ್ಲ ಜಾತಿ ; ಅದೇನೊ ಸರಿ. ಆದರೆ ಅದು ಶಿವನ ಜಡೆಗೇರಿದಾಗ–ಏರಿದಾಗ–ಮಾತ್ರ, ಶಿವಾರ್ಪಿತವಾದಾಗ ಮಾತ್ರ ನಿಜಕ್ಕೂ ಜಾತಿ. ಇಲ್ಲದಿದ್ದರೆ ಜಾಜಿಯಷ್ಟೆ ; ಜಾತಿಯ ಅಪಭ್ರಂಶ !

ಈ ಎಲ್ಲ ಹೂಗಳದೂ ಒಂದು ಪರಿಯಾದರೆ ಕೇತಕಿಯದು ಮತ್ತೊಂದು ಸೊಗಸು; ಮತ್ತೊಂದು ಮಹತ್ತು. ಪುರಾಣೋಕ್ತವಾದ ವಿಧಿಯಂತೆ ಕೇತಕೀ ಕುಸುಮವನ್ನು ಲಿಂಗಕ್ಕೆ ಅರ್ಪಿಸುವಂತಿಲ್ಲ. ಆದರೆ ಅದೆಲ್ಲ ಗೊಡ್ಡುಪುರಾಣವೆಂಬುದನ್ನು ಬಸವಣ್ಣನವರ ಭಕ್ತಿ ತೋರಿಸಿಕೊಟ್ಟಿತು. (ಹರಿಹರನ ಬಸವರಾಜ ದೇವರಗಳೆಯಲ್ಲಿ ಇದರ ಚಿತ್ರಣವಿದೆ). ಆದ್ದರಿಂದ ಈ ಭಕ್ತಕವಿಗೂ ಈ ಶೂದ್ರ ಪುಷ್ಪದಲ್ಲಿ ಮಮತೆ. ಅವನಿಗೆ ಕಾಣುವ ಚೆಲುವೂ ಕೂಡ ಗಂಭೀರವಾದುದು.

"ಆಹ ! ದೆಸೆದೆಸೆಗೆ ಬೀಱುವ ಸುಗಂಧದ ಸೂಱೆ !
ಆಹ ! ಕೇತಕಿ ನಿನ್ನ ಪರಿಮಳದ ಪರಿ ಬೇಱೆ !"

ಎಂದು ಅದರ ಹೊಸ ಪರಿಯನ್ನು ಕಂಡು ಆಶ್ಚರ್ಯಗೊಂಡು ಮುಂದೆ ಬಹು ಮನೋಜ್ಞವಾಗಿ ಅದರ ರೂಪಶಿಲ್ಪವನ್ನು ಕಂಡರಿಸುತ್ತಾನೆ:

"ಪರಿಮಳಂ ಸುಳಿಗೊಂಡು ಬೆಳೆದು ಕವಲಿಱಿಯಿತ್ತೊ
ಉರವಣಿಸಿ ಬಳೆವ ಪರಿಮಳಕೆ ಗಱಿ ಮೂಡಿತ್ತೊ !"

ಈ ವರ್ಣನೆಯಂತೂ ಉತ್ಸಾಹದಾಯಕವಾಗಿದೆ, ಚಿತ್ರವತ್ತಾಗಿದೆ. ಹರಿಹರನಂಥ ಹುಚ್ಚು ಕವಿಗೆ ಸಹಜವಾದ ವರ್ಣನೆ. ಪರಿಮಳ ಸುಳಿಗೊಳ್ಳುವುದು, ಬೆಳೆದು ಕವಲಿರಿಯುವುದು, ಗರಿಮೂಡುವುದು–ಎಲ್ಲ ಹುಚ್ಚು ಭಾವುಕತೆ. ಆದರಿದಕ್ಕೂ ಮಿಗಿಲಾದ ಅನುಭವವನ್ನು ನೀಡುತ್ತದೆ ಆ ಸೌಂದರ್ಯ :

"ಹೊಱಗೆ ಮುಳ್ಳೊಳಗೆ ಕಂಪಕ್ಕಕ್ಕು ನಿನ್ನ ಪರಿ !
ಹೆಱೆ ಸೂಡಿದನ ಗುಪ್ತಭಕ್ತಸಂತಿರ್ಪ ಪರಿ !"

ಎಂಬ ಈ ಪ್ರತಿಮೆ ಆ ಹೂವನ್ನು ಪಡಿಮೂಡಿಸುವುದರ ಜತೆಗೆ ಅದಕ್ಕೂ ಮಿಗಿಲಾಗಿ ನಮ್ಮನ್ನು ಮತ್ತೊಂದು ಗಂಭೀರಾನುಭವದತ್ತ ಒಯ್ಯುತ್ತದೆ. ಅದೆಂದರೆ ಗುಪ್ತ ಭಕ್ತರ ಲೋಕ. ಅವರ ಸಾಧನೆಯ ವಿಚಿತ್ರ ರೀತಿ, ಅವರ ಬದುಕಿನ

ಇರವಿನ ವಿಲಕ್ಷಣ ವಿಧಾನ ಅರ್ಥವಾಗದಿದ್ದರೆ ಈ ಪ್ರತಿಮೆಯಿಂದ ಯಾವ ವಿಶೇಷ ಅನುಭವವೂ ಹೊಳೆಯಲಾರದು. ಗುಪ್ತ ಭಕ್ತರ ಹೊರಬದುಕು ಎಷ್ಟು ವಿಚಿತ್ರ! ಅಸಹ್ಯವೊ ಎನಿಸುವಷ್ಟು ವಿಲಕ್ಷಣ, ವಿಕೃತ—ಈ ಮುಳ್ಳಿಡಿದ ಕೇತಕಿಯಂತೆ. ಆದರೆ ಆಂತರ್ಯ! ಪಕಳೆ ಪಕಳೆಗಳನ್ನು ಬಿಚ್ಚಿದಷ್ಟೂ ಮೃದು ಕೋಮಲ-ಸುವಾಸನಾಸ್ನಿಗ್ಧ. ಆ ನಿಧಿಯನ್ನು ಕಾಪಿಟ್ಟುಕೊಂಡಿರಲು ಆದಕ್ಕೆ ಈ ಮುಳ್ಳುವೇಷ, ಎಯ್ಯೆವೇಷ. ಅದಿಲ್ಲದಿದ್ದರೆ ಒಳಗಂಪು ಸೂರೆ ಪೋದೀತು, ಕೊಳ್ಳೆಹೋದೀತು. ಅದಕ್ಕೊ ಏನೊ ನಾಗರಗಳೂ ಕೂಡ ಆ ಗಿಡದ ಬಳಿಯಿರುತ್ತವಂತೆ. ಆ ಕಂಪಿಗೆ ಮಾರುಹೋಗಿ ಅವು ಅಲ್ಲಿರಬಹುದು. ಅದೇನಿದ್ದರೂ ಆ ಸುವಾಸನೆಗೆ ನಾಗರಕ್ಷೆ ದೊರೆತು ಅದು ಸಾಮಾನ್ಯ ದುರ್ಲಭ್ಯವಾಗುತ್ತದೆ. ಗುಪ್ತಭಕ್ತರಿಂಥವರು. ಅವರ ಸುತ್ತ ಮುಳ್ಳಿನ ನಾಗನ ಬೇಲಿಯಿರುತ್ತದೆ. ಹಿಮಾಲಯದ ಕೆಲವು ತಪಸ್ವಿಗಳು ತಮ್ಮ ತಪಸ್ಸನ್ನು ಯಾತ್ರಿಕಭಕ್ತರ ದಾಳಿಯಿಂದ ರಕ್ಷಿಸಿಕೊಳ್ಳಲು ತಮ್ಮ ಗವಿಯ ಸುತ್ತ ಮನುಷ್ಯರ ಎಲುಬನ್ನು ಹರವಿರುತ್ತಾರಂತೆ-ಅವನ್ನು ಕಂಡಾದರೂ ಯಾತ್ರಿಕರು ಅಲ್ಲಿ ಯಾವುದೊ ನರಭಕ್ಷಕ ಪಿಶಾಚವಿದೆಯೆಂದು ಭಾವಿಸಿ ಅತ್ತ ಧಾವಿಸಿ ಬರದಿರಲಿ ಎಂದು. (ಶ್ರೀ ಕುವೆಂಪು ಅವರು ಈ ಕಥೆಯನ್ನು ಸ್ವಾರಸ್ಯವಾಗಿ ಕೆಲವೊಮ್ಮೆ ಹೇಳುವುದುಂಟು. ಈ ಕಥೆಗೆ ನಾನು ಅವರಿಗೆ ಋಣಿ). ಹೀಗೆ ಆಗಮುತಿರಸ್ಕೃತವಾದ ಕೇತಕಿ ನಮ್ಮ ಕವಿಗೆ ಗುಪ್ತಭಕ್ತನಂತೆ ಕಂಡಿದೆ. (ಹರಿಹರನ ಕಾರಿಕಾಲಮ್ಮೆರಗಳೆಯಲ್ಲಿ ಇಂಥೊಬ್ಬ ಗುಪ್ತಭಕ್ತೆಯ ಅದ್ಭುತ ಚಿತ್ರವಿದೆ). ಹೂವು ಶಿವಾಂಶ ಸಂಭೂತನಾದ ಭಕ್ತನಾಗಿ ಪರಿಣಾಮಗೊಳ್ಳುತ್ತದೆ.

ಇದಾದಮೇಲೆ ತಾರೆಗಳ ಮೊಳೆಗಳಂತಿರುವ ಪಡ್ಡಳಿಗಳನ್ನು ಹಾರೈಸಿ ತಿರಿದುಕೊಂಡು, ಬಳಿಯ ಕತ್ತುರಿ ಹೇರಿಳೆಗಳನ್ನೂ ಕೂಡ, ಅವು ತಮ್ಮ ಹೂವಿಗಾಗೇನೂ ಪ್ರಸಿದ್ಧವಾಗಿಲ್ಲದಿದ್ದರೂ, 'ಪರಿಮಳಾಸಾರಮಂ ನೀನಲ್ಲಿ ಮಾರಾರಿಗೀಯೆನುತ್ತ' ಅವುಗಳ ಹೂವನ್ನು ಕೊಂಡು ಮುಂದೆ ನಡೆದು ಮೊಲ್ಲೆಯನ್ನು ಮುದ್ದಾಡಿಸಿ ಮನ್ನಿಸಿ ನುಡಿದು ವಲ್ಲಭನಿಗವು ತಕ್ಕವೆಂದು ತಿರಿದುಕೊಂಡು ತಿರುಗಿನೋಡುತ್ತಾನೆ, ಮರುಗ ಕಣ್ಣಿಗೆ ಬೀಳುತ್ತದೆ. ಅವನ ಆಶ್ಚರ್ಯವೆ ಆಶ್ಚರ್ಯ!

"ಮರುಗ! ಇತ್ತ ಬಾರ! ಎನುತಮಿರೆ
ಹರ ಮಱೆದನೇ! ಪರಿಮಳದ ಸಸಿಯ!"

ಎಂದು ಮುಗ್ಧನಾಗಿ ಉದ್ಗಾರವೆಸಗುತ್ತಾನೆ. ಇಲ್ಲಿಯೂ ತಾನು ಶಿವನ ಕಡೆಯವನೆಂಬ ಪ್ರತಿಷ್ಠೆ ಎಳ್ಳಷ್ಟೂ ಇಲ್ಲ; ತಾನಾ ಹೂಗಳನ್ನು ಉದ್ಧರಿಸಲಿಕ್ಕೆ ಬಂದಿರುವ ಪ್ರವಾದಿ ಎಂಬ ಭ್ರಾಂತಿಯೂ ಇಲ್ಲ. ಶಿವಶಿಶುವಿಗಿರುವ ದೈವೀಶಿಶು ಮುಗ್ಧಭಾವವಿದೆ. ಹೀಗೆ ದಿವ್ಯಭಾವಮುಗ್ಧವಾದ ಕವಿ ಮಡಿವಾಳದ ಬಳಿನಿಂದು ಮತ್ತೊಂದು ಬಗೆಯ ಆತ್ಮೀಯತೆಯ ಸರಸದಿಂದ ಸಲ್ಲಾಪಿಸುತ್ತಾನೆ; 'ಬೇರ ಬಲ್ಲವರ್ಗೆ ನೀನೆಲೆದೋಱಲೇಕೆ!' ಎಂದು ಮಾತಿನ ಕಚಗುಳಿಯಿತ್ತು ಆ ಪರಿಮಳದ ಬೇರುಗಳನ್ನು ಪುನವಾರ ತಿರಿಯುತ್ತಾನೆ. ದವನದ ಬಳಿಗೆ ಬಂದು ಸುಖಭಾವದಿಂದುಬ್ಬಿ ಕುಣಿದು ಕೂಗಿ ಕುಕಿಲಿರಿಯುತ್ತಾನೆ. ಅವನ ಅಕೃತಕ ಪ್ರಾಕೃತಿಕ ಹೃದಯಕ್ಕೆ ಆ ಸೌರಭಸಾರದಿಂದ ಆಗುವ ಆನಂದವೆ ಆನಂದ.

"ದವನವೇ! ಶಿವನ ಪರಿಮಳದ ಹಬ್ಬವೆ! ಬಾರಾ!
ಭುವನದೊಳ್ ನಿನಗೆ ಸರಿಯಿಲ್ಲ ಸೌರಭಸಾರ!"

ಇದರಲ್ಲಿ ಉತ್ಪ್ರೇಕ್ಷೆಯೇನೂ ಇಲ್ಲ; ಸತ್ಪ್ರೇಕ್ಷೆಯಿದೆಯಷ್ಟೆ.

ಸುರಹೊನ್ನೆ ಹೂವಗಳಲ್ಲಿ ಪರಿಮಳದರಸಿ; ಆದರೆ ಅದಕ್ಕೂ ಮೇಲಾದ ಕಾರಣದಿಂದಾಗಿ ಆ ಹೂವು ಈತನಿಗೆ ಪೂಜ್ಯವಾಗಿದೆ. ಸೌರಾಷ್ಟ್ರದ ಸೋಮಯ್ಯನನ್ನು ಪುಲಿಗೆರೆಗೆ ಕರೆಸಿದ ಸಿರಿ; ಆದಯ್ಯನಿಗೆ ಪ್ರೇರಕಶಕ್ತಿಯಾದ ಭಕ್ತೆ. ಆದ್ದರಿಂದ ಅದು ಬರಿಯ ಹೂವಲ್ಲ, ದಿವ್ಯಪ್ರಸೂನ, ಸದ್ಭಕ್ತೆ. ಕೇತಕಿ ಗುಪ್ತಭಕ್ತನಾದರೆ ಇದು ಸದ್ಭಕ್ತೆ. ಶಿವಕ್ಕೂ ಸೌಂದರ್ಯಕ್ಕೂ ಭಗವಂತ ಭಕ್ತ ಸಂಬಂಧ!

"ಏನೆನ್ನ ಹೊನ್ನೆ! ಸುರಹೊನ್ನೆ! ಪರಿಮಳದರಸಿ!
ನೀನೆನ್ನ ಸೋಮಯ್ಯನಂ ಪುಲಿಗೆಱೆಗೆ ಕರಸಿ
ಕೊಂಡೆ! ಸದ್ಭಕ್ತೆ! ಸರಿಯುಂಟೆ, ಬಾ, ನಿನಗೆನುತೆ
ಕೊಂಡಲ್ಲಿ ದಿವ್ಯಪ್ರಸೂನಮಂ ನಡೆತರುತೆ
ಆಹ ಭಾಗ್ಯವೆ! ಶಿವನನಿದಱೊಳರ್ಚಿಸೆ ಪಡೆದೆನ್!
ಆಹ ಪುಣ್ಯವೆ! ಶಿವನನಿದಱೊಳರ್ಚಿಸೆ ಪಡೆದೆನ್!"

ಇಲ್ಲಿಯೂ ಆ ಸಂಬೋಧನೆಯಲ್ಲಿ ಏನೆಂಥ ಅವ್ಯಾಜ ಆತ್ಮೀಯತೆಯಿದೆ ನೋಡಬಹುದು: 'ಏನು, ನನ್‌ಹೊನ್ನೆ! ಸುರಹೊನ್ನೆ! ಪರಿಮಳದರಸಿ!' ('ಏನ್! ನನ್‌ಚಿನ್ನ!' ಎಂಬ ಮಾತಿನ ಸರಾಗವಿದು.) ಶಿವಲಿಂಗವನ್ನಿದು ತನ್ನ ಮಹಿಮೆಯಿಂದ ತನ್ನಲ್ಲಿಗೆ ತರಿಸಿಕೊಂಡ ಕಾರಣ ಅವನಿಗದು ಪೂಜ್ಯ. ಅಂಥ ಹೂವು

ತನಗೂ ಶಿವಸಾಕ್ಷಾತ್ಕಾರ ತರಬಹುದೆಂಬ ಶ್ರದ್ಧೆ–ವಿಶ್ವಾಸ–ಪ್ರೀತಿ; ಆ ಶಿವಭಾಗ್ಯ ದೊರೆತೀತು ಎನ್ನುವ ಕೃತಾರ್ಥಭಾವ ಬೇರೆ.

ಸಂಪ್ರದಾಯ ಕವಿಗಳ ಕಾವ್ಯದ ತುಂಬವೂ ಇಡಕರಿಸಿರುವ ಕಮಲ— ಪದ್ಮ, ತಾವರೆ, ಸರೋಜ ಎಂದು ಅನಂತ ನಾಮಾಂಕಿತವಾದ ಆ ಹೂವು; ಹೆಣ್ಣಿನ ಕಣ್ಣಾಗಿ ಮುಖವಾಗಿ ಸ್ತನವಾಗಿ ಅಡಿಯಾಗಿ ಕಾವ್ಯಾದ್ಯಂತವೂ ರಾರಾಜಿಸಿರುವ ಆ ಕಮಲ—ಹರಿಹರನ ಮನಸ್ಸನ್ನೇಕೊ ಬಹಳವಾಗಿ ಪರವಶ ಗೊಳಿಸಿಲ್ಲ.

"ಕಮಲವೆ ! ಹರಿಗೆ ಚಕ್ರವನಿತ್ತ ಶಿವನ ಪದ
ಕಮಲಕ್ಕೆ ಸಾರ್ವುದುಚಿತಂ, ನಿನಗೆ, ಪರಮಪದ !"

ಎಂದು ಹಾಡುವ ಕವಿಯ ಮನಸ್ಸೆಲ್ಲ ಅದರ ಹೊರರೂಪಕ್ಕೆ ಮಾರುಹೋಗದೆ ಅದು ಶಿವಚರಣ ಕಮಲಕ್ಕೆ ಸೇರಬೇಕು, ಹಾಗೆ ಸಾರುವುದೆ ಅದಕ್ಕೆ ಉಚಿತ, ಪರಮ ಪದ ಎಂಬ ಭಾವದತ್ತ ಹರಿದಿದೆ. ಶಿವ ಸಾಯುಜ್ಯದಿಂದ ಮಾತ್ರವೆ ಸೌಂದರ್ಯಕ್ಕೆ ಪರಮಪದ ಲಾಭವಾಗುತ್ತದೆಂಬ ಅರಿವು ಕವಿಗೆ ಇಲ್ಲೆಲ್ಲ ನಿಚ್ಚಳ ವಾಗಿಯೆ ಇದೆ.

ಕಮಲದ ಜತೆಜತೆಯಲ್ಲೆ ಕೈಗೂಡಿಕೊಂಡು ಕಾವ್ಯಗಳಲ್ಲಿ ದಿಬ್ಬಣ ಹೊರ ಟಿರುವ ಹೂವೆಂದರೆ ನೆಯ್ದಿಲೆ; ಒಂದು ಹಗಲಿನ ಗೆಳೆಯ, ಮತ್ತೊಂದು ಇರುಳ ನೇಹಿಗ. ಆದರಿಲ್ಲಿ ನೆಯ್ದಿಲೆ ರಾತ್ರಿಂಚರನಾಗಲ್ಲ ಬರುವುದು, ಶಿವನಲ್ಲಿ ಗೆಯ್ದಲು. ಈ ಭಕ್ತ ಅದನ್ನವನಲ್ಲಿಗೊಯ್ಯುತ್ತಾನೆ. ಅದಕ್ಕಾಗಿ ಲಂಚ ಕೇಳು ತ್ತಾನೆ !

"ನೆಯ್ದಿಲೆಯೆ ! ಶಿವನಲ್ಲಿಗೆಯ್ದಲೇಬಗೆದಪ್ಪೆ ?
ಒಯ್ದಡೇನಂ ಲಂಚವೀವೆ ? ನೀನುಳಿದಪ್ಪೆ !"

ಸೌಂದರ್ಯ–ಶಿವದ ಮದುವೆಗೆ ಈ ಕವಿಭಕ್ತ ಆನಂದಮಾಂಗಲ್ಯವಾಗಿದ್ದಾನೆ. ಅದಕ್ಕವನು ಪಡೆದುಕೊಳ್ಳುವ ಲಂಚ ; ಆನಂದ !

ಹೀಗೆ ಎಲ್ಲ ಪರಿಚಿತ ಹೂಗಳನ್ನೂ ತಿರಿದಾಯಿತು. ಲಿಂಗದೊಲವಾದ ಜೆಂಗಣಿಗಲೆಯನ್ನೂ ಎತ್ತುಕೊಂಡಾಯಿತು. ಹೆಸರರಿಯದ ಪರಿಚಯವಿಲ್ಲದ ಹೂಗಳಿನ್ನೂ ಇವೆ ! ಪಾಪ ! ಅವುಗಳನ್ನು ಬಿಡುವುದೆಂತು ? ಅವಕ್ಕೆ ಶಿವ ಸಾನ್ನಿಧ್ಯ ತಪ್ಪಬೇಕೆ ? ಕವಿಗೆ ಅಂದು ಬರುವ ಭಾವ ಮುಗ್ಧ ದಿವ್ಯವಾಗಿದೆ :

"ಹಿಂಗದೆ ಕೊಳಂಗಳ ಜಲಂಗಳೊಳ್ ಪೋಗಿರ್ದು
ಪೊಂಗಳವೆನಿಪ್ಪ ಪೂವಂ ಕೊಂಡು, ನಿಂದಿರ್ದು,
ಎಸೆಯೆ ಪೊಱಮಟ್ಟ ಪರಿಮಳವುಳ್ಳ ಪೂಗಳಂ
ಪೆಸರಱಿಯದೆ ಏನೆಸೊ ! ಕಂಪುಳ್ಳ ಪೂಗಳಂ
ಕಂಪಱಿಯದೇವೇಸೊ ! ಪರಿಮಳಂ ಸಾಲ್ಗೆಂದು
ಕೊಂಡು ಪೊಸ ಪೂಗಳಿಂ ಶಿವನ ಸಿರಿಮುಡಿಗೆಂದು !"

ಹೂಗಳ ಹೆಸರರಿಯದು. ಆದರೇನಂತೆ ? ಕಂಪಿದೆ, ಸಾಕು ; ಅದಕ್ಕಿಂತ ಮತ್ತಾವ ಹೆಸರು ಪರಿಚಯಬೇಕು ? ಸೌಂದರ್ಯಕ್ಕೆ ಹೆಸರೇಕೆ ? ಅಷ್ಟೆಸಾಕೆ ? ಚೆಲುವಿನ ಉಸಿರಿಗೆ ಹೆಸರಂಗಿ ಬಲು ಭಾರವಾಗುತ್ತದೆ. ಅದನ್ನು ಕಳಚಿದಾಗಲೆ ನಿಜದ ಚಿತ್ತದ ಚೆಲುವಿನ ನಿಲವು ವ್ಯಕ್ತವಾದೀತು. ಗುಲಾಬಿಗೆ ಯಾವ ಹೆಸರಿದ್ದರೇನಂತೆ, ಎಂದು ಷೇಕ್ಸ್‌ಪಿಯರ್ ಕವಿ ಹೇಳಲಿಲ್ಲವೆ ?

ಹೀಗೆ, ಕವಿ ಲೋಕಪ್ರಖ್ಯಾತವಾದ ಹಾಗೂ ತಿರಸ್ಕೃತವಾದ. ಹೆಸರಿದ್ದ ಹೆಸರಿರದಿದ್ದ ಎಲ್ಲ ಹೂಗಳನ್ನೂ, ಚೆಲುವಿನ ಬೆಲೆಗಾಗಿ ಶಿವದ ನೆಲೆಗಾಗಿ ಸ್ವೀಕರಿಸಿಕೊಳ್ಳುತ್ತಾನೆ. ತನ್ನಲ್ಲಿ ಆ ಚೆಲುವು ನಿಂತು ಕೆಡದ ಹಾಗೆ ಸದಾ ಜಾಗ್ರತನಾಗಿದ್ದಾನೆ ಕವಿ—ಹೃದಯದಿಂದ ಹೊರಟು ಮೈಯೆಲ್ಲ ಹರಿದಾಡುವ ರಕ್ತವನ್ನು ಮತ್ತಲ್ಲಿಗೆ ಹರಿಸಿ ಶುದ್ಧಗೊಳಿಸಿಕೊಳ್ಳಬೇಕೆಂದು ತಿಳಿದಿರುವ ರಕ್ತನಾಳದಂತೆ ! ಚೆಲುವು ಶಿವದ ನಡುವೆ ನಲವಿನ ಒಲವಿಗಾಗಿ ನಿಂತಿದ್ದಾನೆ ಈ ಕವಿ.

೨

ಬಗೆಬಗೆಯ ಹೂಚೆಲುವನ್ನು ತಿರಿದಾಯಿತು. ಈಗ ಅವುಗಳನ್ನು ಒಂದೆ ಚೆಲುವಾಗಿ ಮಾಲೆಗಟ್ಟಬೇಕಿದೆ. ಕವಿ ಈ ಸುಂದರತಮ ಚಿತ್ರವನ್ನು ಮುಂದೆ ಕೊಡುತ್ತಾನೆ. ತಾನು ಎತ್ತಿಕೊಂಡುಹೋದ ಹೂಗಳನ್ನೆಲ್ಲ ಈ ಭಕ್ತ ಒಂದು ನಿರ್ಮಲಸ್ಥಾನಕ್ಕೆ ಬಂದು, ಕಲ್ಲೊಂದರ ಮೇಲೆ—ಚಂದ್ರಕಾಂತಶಿಲೆಯ ಮೇಲೆ (ಅವನಿಗೆ ಆ ಚಿತ್ತಸ್ಥಿತಿಯಲ್ಲಿ ಕಲ್ಲೆಲ್ಲ ಚಂದ್ರಕಾಂತಶಿಲೆಯೆ ಆಗಿದ್ದಿರಬೇಕು. ಅನುಭಾವಚಿತ್ತರದಲ್ಲಿ ಅಕ್ಕ, ಮರವೆಲ್ಲ ಕಲ್ಪತರು ಎಂದು ಹಾಡುವುದಿಲ್ಲವೆ ?) ಬಂದು ಕುಳಿತುಕೊಳ್ಳುತ್ತಾನೆ. ಮುದದಿಂದ ಎಳೆಬಾಳೆ ತಾವರೆ ಎಲೆಗಳನ್ನು ಬಾಳೆಯ ಒಳ್ದಿರುಳ ಪುಳಕಗಳನ್ನೂ, ಕೊಂಬಾಳೆಯ ಸುಳಿಯ ಸಪುರನೇತ್ರವನ್ನು, ಇಂಬರಿದು ಹಾಸಿ (ಇವೆಲ್ಲ ವಿರಹಿಗಳ ಹಾಸು ಸಂಪ್ರದಾಯ ಕವಿಗಳಿಗೆ) ಪರಿಮಳ ಭಾಜನಗಳಾದ ಕಂಪಿನ ಪಾತ್ರೆಗಳಾದ ಆ ಹೂವುಗಳನ್ನೆಲ್ಲ ಆ

ಹಾಸಿನ ಮೇಲೆ ಮೆಲ್ಲ ಮೆಲ್ಲನೆ ಸುರಿದು ಸಲ್ಲಲಿತವಾದ ಸರಸಿಜಸೂತ್ರದಿಂದ ಕಟ್ಟುತ್ತಾನೆ. ಈ ಕ್ರಿಯೆಯಂತೂ ದಿವ್ಯವಾಗಿದೆ. ಹೂವನ್ನು ಕಟ್ಟುವಾಗ ಯಾರಾದರೂ ಕೈಯಲ್ಲಿ ಮುಟ್ಟಲೆ ಬೇಕು ; ಆದರೆ ಅವು ಮಲಿನವಾಗುತ್ತವೆ. ಮುಟ್ಟಿಯೂಮುಟ್ಟದಂತೆ ಮನಮುಟ್ಟಿ ಕಟ್ಟುತ್ತಾನೆ. ಒಂದೊಂದು ಹೂವನ್ನು ಪ್ರೀತಿಹಸ್ತದಿಂದೆತ್ತಿ ಎದೆ ಮುಟ್ಟಿ ಕಟ್ಟುತ್ತಾನೆ. ಕೈಮರೆತೇನಾದರೂ ಕೆಳಕ್ಕೆ ಬಿದ್ದರೆ ಅವನ ಪ್ರಾಣ ಆ ಹೂವಿನ ಜೊತೆಯಲ್ಲಿ ಕೆಡೆದು ಸಾಯುತ್ತದೆ, ಮತ್ತೆ ಹುಟ್ಟುತ್ತದೆ. ಹೂವಿನ ಪತನ ಈತನ ಪತನ, ಭಾವಪತನ. ಹೀಗೆ ಕಟ್ಟುವಾಗ ತಾನು ಅವುಗಳನ್ನು ಅತಿ ಮೋಹದಿಂದ ದಿಟ್ಟಿಸಿ ನೋಡುವುದರಿಂದ ಎಲ್ಲಿ ಅವು ಬಾಡುತ್ತವೆಯೊ ಎಂದು ಕಣ್ಮುಚ್ಚಿಕೊಳ್ಳುತ್ತಾನೆ. ಕಣ್ಮುಚ್ಚಿದರೇನು ಮನಸ್ಸು ಮೋಹಿಸುವುದಿಲ್ಲವೆ ? ನೆನಪೆ ಹೂವಿನ ವಿಾಸಲ ತೇಜವನ್ನೂ ಪಾವಿತ್ರ್ಯವನ್ನೂ ಕುಂದಿಸೀತೆಂದು ಮನಬೆಚ್ಚುತ್ತದೆ....ಕಣ್ಣಾರ ನೋಡದಂತೆ ಮನಸಾರ ಭಾವಿಸದಂತೆ ಹೂಗಳನ್ನು ಕಟ್ಟುವುದಾದರೂ ಎಂತು ? ನೋಡಲೆಬೇಕು ; ಕಣ್ಮುಚ್ಚಿ ಫಲವಿಲ್ಲ. ಆದರಿಂದ ನೋಟವನ್ನೆ ಪವಿತ್ರೀಕರಿಸಬೇಕು. ಹಾಗಾದುದು ನೋಟವೆ ಶಿವದ ಬೇಟವಾಗುತ್ತದೆ. ಆದರೆ ಈ ಕ್ರಿಯೆ ಬಹಳ ಎಚ್ಚರದಿಂದಾಗಬೇಕು. ಮೈಮರೆತರೆ ಕೈ ಕಚ್ಚುತ್ತದೆ. ಪಾವಿತ್ರ್ಯ ಹುಳಿಯಾದೀತು. ಆದ್ದರಿಂದ ಹೂ ಚೆಲುವನ್ನು ಕಂಡೊಡನೆಯೆ ಕವಿ ಮನಸ್ಸು ಹಿರಿಹಿರಿ ಹಿಗ್ಗುತ್ತದೆ ; ತಟ್ಟನೆ ಆ ಆನಂದದಲ್ಲಿ ಮುಳುಗದೆ ಅಲ್ಲಿಂದ ಮುನ್ಸಾಗುತ್ತದೆ. ಎಲ್ಲಕ್ಕಿಂತ ಮಿಗಿಲಾಗಿ ಹೂ ಅರಳದ ಮುನ್ನ ಅವನ ಮನ ಅರಳುತ್ತದೆಯಂತೆ ! ಆ ಅರಳಿಕೆಯಲ್ಲಿ ಅವನ ಚಿತ್ತ ಬೀಗಿ ಬಿರಿಯುತ್ತದೆ ! ಅಷ್ಟೆ ಅಲ್ಲ, ಮೊಗ್ಗುಮೊಗ್ಗಿನಲ್ಲೂ ಶಿವನನ್ನು ಇರಿಸುತ್ತಾನೆ ; ಸಿಂಗರಿಸುತ್ತಾನೆ. ಚೆಲುವಿನಲ್ಲಿ ಶಿವನನ್ನು ನೆಲಿಸುವ ಸಾಧನೆಯಿದು. ಆದರಿಂದ ಇವನಿಗೆ ಆನಂದದ ಲಾಭ ; ಅದಕ್ಕೆ ಶಿವದ ಲಾಭ. ಕವಿಗಾಗುವ ಈ ಅನುಭವ ಅಲೌಕಿಕ, ಅಸಾಧಾರಣ. ಆದರೂ ಅವಾಙ್ಮಯವಲ್ಲ; ಮಾತಿನಲ್ಲಿ ಸಂಭವಿಸಿದೆ, ಮೂರ್ತೀಭವಿಸಿದೆ, ಈ ಎಲ್ಲ ಅನುಭಾವವೂ ಕೂಡ. ಕವಿಗಾಗಿರುವ ಈ ಅನುಭೂತಿ ಪ್ರಾಮಾಣಿಕ ಎಂಬುದನ್ನು ಕೈಮುಟ್ಟಿ ಬೇಕಾದರೆ ತೋರಿಸಬಹುದು, ಅನುಭವಿಸಬಹುದು. ಕವಿಯ ಮಾತಿನಲ್ಲೆ ಈ ವಿಶೇಷತರ ಅನುಭವ ವರ್ಣನೆಯನ್ನು ಕಾಣಬೇಕು.

"ಕೈಮುಟ್ಟ ಮುಟ್ಟದೆ ಮನಂಮುಟ್ಟಿ ಕಟ್ಟುತುಂ

ಕೈಮುಱಿದು ಪೂ ಬೀಳೆ ಮಿಗೆ ಸತ್ತು ಹುಟ್ಟುತಂ
ನೋಡಿದೊಡೆ ಪೂ ಬಾಡುಗೆಂದು ಕಣ್ ಮುಚ್ಚುತುಂ
ನಾಡೆ ನೆನೆದೊಡೆ ಕುಂದುಗೆಂದು ಮನ ಬೆಚ್ಚುತುಂ
ನೋಡಿದೊಡೆ ಕೊಂಡಾಡುತುಂ ತೂಗಿ ತೊನೆವುತುಂ
ನೋಡುತ್ತೆ ಸಾಗಿಸುತ್ತೋವುತ್ತೆ ಮಲೆವುತುಂ
ನನೆಗಳಲರದ ಮುನ್ನೆ ಮನವಲರ್ದು ಪೊಂಗುತುಂ
ನನೆ ಬಿರಿವುದರ್ಕೆ ಚಿತ್ತಂ ಬೇಗಿ ಬಿರಿವುತುಂ
ಮೊಗ್ಗೆಯೊಳ್ ಶಿವನನಿರಿಸಲ್ ಬೇಡಿ ಬಯಸುತಂ
ಹಿಗ್ಗಿದೆಲರ್ಗಳ ನಡುವೆ ಸಿಂಗರಿಸಲಾಡುತುಂ"

ಹೀಗೆ ಸೌಂದರ್ಯಶಿವಗಳ ಮಾಲೆಗಟ್ಟುತ್ತಿರುವಾಗ ತನ್ನ ಚಿತ್ತ ಆ ದಿವ್ಯ ಮಾಂಗಲ್ಯ ಕ್ರಿಯೆಯನ್ನು ಹೇಗೂ ಅಪವಿತ್ರಗೊಳಿಸದಂತೆ ಶಿವಜಾಗ್ರತವಾಗಿರುವ ಕವಿಯು ಮುಂದೊಂದು ಸ್ವಾರಸ್ಯಾನುಭವವನ್ನು ಪಡೆಯುತ್ತಾನೆ. ಅಳಿ ಸಮೂಹ ಬಂದೆರಗುತ್ತದೆ ಅವನ ಈ ಪವಿತ್ರಾವಸ್ಥೆಯತ್ತ. ಈ ಚಿತ್ರ ಸಾಂಕೇತಿಕವೂ ಹೌದು ಸ್ವಭಾವೋಕ್ತಿಯಾಗಿರುವಂತೆಯೆ. ನಿತ್ಯದಂತೆ ಹೂದೋಟಕ್ಕೆ ಬಂದ ಅಳಿಗಳು ಆ ದಿನ ಮಾತ್ರ ಏನೊಂದು ಹೂವನ್ನೂ ಕಾಣದೆ ಸುವಾಸನೆಯ ಬಟ್ಟೆಹಿಡಿದು ಅವನತ್ತ ಬರುತ್ತವೆ. ಅವು ಮೊರೆಯುತ್ತ ಬರುವುದನ್ನು ಆಲಿಸಿದರೆ ಏನೋ ಹಲ್ಮೊರೆದು ಬರುತ್ತಿರಬೇಕೆಂದೆನಿಸುತ್ತದೆ. ಅವುಗಳನ್ನು ಕವಿ ಸ್ವಾಗತಿಸುವ ವಿಧಾನವಿದು:

"ಬೇಡ ! ಎಲೆಲೆ ! ಹಂಪೆಯರಸನ ಕುಮಾರಂ ಸಿತಗ !
ಅಡಂಬರಂಗಳಂ ಕೊಳ್ಳ! ಅಱಿಡಿಗೆಜಿಗ !
ಅಳಿಯಾಸೆ ಬೇಡ ! ನಿಮಗಿಲ್ಲಿ ಸೋಲ್ವವರಿಲ್ಲ !
ಗಳಗಳನೆ ಬಂದಂತೆ ಮರಳಿ ಗಳಗಳನೆಲ್ಲ !

ಶಿವನ ಮಗ ಈ ಅಳಿಮೊರೆತವನ್ನು ಲೆಕ್ಕಿಸುವುದಾದರೂ ಉಂಟೆ ? ಅದರಲ್ಲೂ ಅವನು ಕರಸಿತಗ–ಸ್ವಭಾವತಃ ಒಳ್ಳೆಯವನಿರಬಹುದು. ಆದರೂ ತನ್ನ ಶಿವಾನುಭವಕ್ಕೆ ಏನಾದರೂ ಘಾತಕವಾಗಿ ಬಂದರೆ ಆಗ ಅದರ ವಿಷಯವಾಗಿ ಸಿತಗನೆ ಆಗುತ್ತಾನೆ, ಅಷ್ಟೆ! ಅಶಿವವನ್ನು ಕಂಡರೆ ಶಿವನೂ ಕರಸಿತಗನಾಗುತ್ತಾನಂತೆ. (–ಕರಸಿತಗನಯ್ಯ ನಮ್ಮ ಕೂಡಲ ಸಂಗಮದೇವಯ್ಯ.) ಈ ನಿಷ್ಠೆ, ಛಲ, ಭಕ್ತನಿಗೆ, ಶಿವಸೌಂದರ್ಯಾರಾಧಕನಿಗೆ ಅತ್ಯಗತ್ಯವೆ ಸರಿ. ಶಿವದ, ಸೌಂದರ್ಯದ ಅನುಭವದಲ್ಲಿ ನಿಮಗ್ನವಾಗಿರುವ ಮನಸ್ಸನ್ನು ಅದರೊಳಗಿನ ಅಳಿಯಾಸೆಗಳ

ಕೀಡೆಹಾಕದಿರುವಂತೆ ಸದಾ ಜಾಗ್ರತವಾಗಿದ್ದು ನೋಡಿಕೊಳ್ಳಬೇಕಾಗುತ್ತದೆ. ಆ ಅಳಿ ಆಸೆಗಳನ್ನು ಈತ ಎಂಥ ಯುಪು ಸರಸದಿಂದ ನಿವಾರಿಸುತ್ತಾನೆ ಸಂಪಗೆ ಯರಳಿಸೆದು ! ಕಲ್ಲೆಸೆಯಲಿಲ್ಲ ; ಎಸೆದದ್ದು ಹೂವನ್ನೆ. ಆದರೆ ಅಳಿಗಪಥ್ಯವಾದ ಸಂಪಿಗೆ ಹೂವನ್ನು. ಕೆಲಕೆಲವು ಜೀವಕ್ಕೆ ಕೆಲಕೆಲವು ಚೆಲುವು ಅಪಥ್ಯ. ಅಳಿಯಾಸೆಗಳಿಗೂ ಅಷ್ಟೆ. ಆ ಅಪಥ್ಯವೂಡಿ ಆ ಅಳಿಬಯಕೆಗಳನ್ನು ದೂಡಬೇಕಷ್ಟೆ —ಇದೊಂದು ಸುರಮ್ಯ ಪ್ರತೀಕವಷ್ಟೆ.

೩

ಕಡೆಯದಾಗಿ ಇನ್ನುಳಿದಿರುವ ವಿಧಿಯೆಂದರೆ ಕವಿ ತಾನು ತಿರಿದು ಮಾಲೆ ಕಟ್ಟಿದ ಹೂಚೆಲುವನ್ನೆಲ್ಲ ಶಿವನಿಗೆ ಆತ್ಯಂತಿಕವಾಗಿ ಪೂರ್ಣವಾಗಿ ಅರ್ಪಿಸುವುದು. ಆದರೆ ಈ ಸೌಂದರ್ಯಸಮರ್ಪಣಕ್ರಿಯೆಯಾದರೂ ಇದುತನಕವೂ ಜೊತೆಜೊತೆಯಲ್ಲೆ ನಿರಂತರವೂ ನಡೆಯುತ್ತ ಬಂದಿತ್ತು. ಈಗ ಅದರ ವ್ಯಕ್ತ ವಿಧಾನ ನಡೆಯಲಿದೆ. ಅದರ ಚಿತ್ರಣದಲ್ಲಿ, ಕವಿಗಾದ ದಿವ್ಯಾನುಭವದ ವಿವಿಧ ಸ್ತರಗಳನ್ನು ಅದರ ಸಾಂದ್ರತೆಯನ್ನು ಹಾಗೂ ಅಲ್ಲಿ ತೋರುವ ಪರಮ ಪ್ರಾಮಾಣಿಕತೆಯನ್ನೂ ನಿಚ್ಚಳವಾಗಿ ಕಾಣಬಹುದು.

ಭಕ್ತನೇನೊ ಹೊತ್ತಾರೆ ಬಹು ಮೊದಲೆ ಎದ್ದು ಹೂಗಳನ್ನು ತಿರಿದು ತಂದ, ಮಾಲೆ ಮಾಡಿದ. ಆದರೆ ಅವುಗಳನ್ನು ಸ್ವೀಕರಿಸಿಗೊಳ್ಳಬೇಕಾದ ಶಿವನಿನ್ನೂ ಆ ಮುಂಜಾನೆಯ ಮೊದಲಲ್ಲೆ ಎಚ್ಚರಗೊಂಡಿರಬೇಕಲ್ಲ ! ಜ್ಞಾನಿಗಳು ಕಾಣುವ ಕಂಡಿರುವ ಅವಸ್ಥಾತೀತನಾದ ಸದಾಜಾಗ್ರತ ಶಿವನೆ ಬೇರೆ, ಭಕ್ತಕವಿ ಕಾಣುವ ಮಾನುಷವ್ಯಾಪಾರ ಸಮೀಪವರ್ತಿಯಾದ ನಿದ್ರಾಜಾಗ್ರತಸ್ವಪ್ನಗಳಿರುವ ಶಿವನೆ ಬೇರೆ. ಆದ್ದರಿಂದಲೆ ಈ ಭಕ್ತ ಶಿವನರಮನೆಯ ಬಾಗಿಲಿಗೆ ಬಂದು ಹೊರನಿಂದು "ಶಿವನುಪ್ಪವಡಿಸುವನ್ನೆವರಂ ಕೆಲಕೆಸಾರ್ದು, ಏನಯ್ಯ ! ಶಿವನೆ ಉಪ್ಪವಡಿಸಿರ್ದಾ ತಂದೆ ! ಏನೆನ್ನ ತಳುವಿರ್ದೆ ಎನುತರ್ದಾ ತಂದೆ ? ಅಳಿಗಳೆಲಗದ, ಗಂಧವಹನಲುಗದ ಅಲರ್ಗಳಂ ಎಳಸಿ ತಂದೆಂ, ತಂದೆ ! ಪೊಚ್ಚಪೊಸಪೂಗಳಂ (ತಂದೆಂ, ತಂದೆ !)" ಎಂದು ಅತ್ಯಂತ ಮುಗ್ಧವಾಗಿ ಆತ್ಮೀಯವಾಗಿ ಭಯಮರಿಯದ ಸಲುಗೆಯಿಂದ ಶಿವನನ್ನು ಮಾತಾಡಿಸುತ್ತಾನೆ. ಹೂವಿನ ಚೆಲುವನ್ನು, ಸೌಂದರ್ಯಸೃಷ್ಟಿಯನ್ನು ಅನುಭವಿಸುವಾಗಲೂ ಇದೇ ಭಾವ, ಶಿವನನ್ನು ಕಾಣುವಾಗಲೂ ಇದೇ ಭಾವ ; ಎರಡೂ ಒಂದೆ ದೃಷ್ಟಿಗೆ ನಿಲುಕುವ ಅನುಭವಗಳು.

ಈ ಭಕ್ತ ಈಗ ತಾನು ತಂದ ಹೊಸ ಸೇವಂತಿಯಿಲರ ಪನಿ ನೀರಿ
ಗಂಗಾಧರನ ಮುಖಕ್ಕೆ ಮಜ್ಜನವೆರೆಯುತ್ತಾನೆ ; ಫಾಲನೇತ್ರನಿಗೆ ಹೊ
ಸರಾಗದ ವಿಭೂತಿಯ ತಿಲಕವಿಡುತ್ತಾನೆ; ಆ ವ್ಯೋಮಕೇಶನ ಶ್ರೀಮು
ಯನ್ನು ಮೆಲ್ಲನೆ ಸಡಿಲಿಸಿ ನಯದಿಂದ ಬಿಡಿಸಿ, (—ಪಾಪ ತಾಯಿತಂದೆಯಿಲ್ಲ
ಕಂದ ; ಅವನ ತಲೆ ಸಿಕ್ಕುಬಿಡಿಸಿ ಬಾಚಿ ಹೂಮುಡಿಸಿದ ತಾಯಿಯೂ ಇಲ್ಲ—)
ಎಳೆತಿಂಗಳು ನೋಯದಂತೆ ಮೆಲ್ಲನೆ ಹಿಕ್ಕಿ, ಆ ದೇವಗಂಗೆ ತುಳುಕದ
ನಯದಿಂದ ಬಾಚಿ, ಸಸಿನಿಳಿವ ಆ ಜಡೆಗಳಲ್ಲಿ ಪರಿಮಳದ ಸಣ್ಣನ್ನು ಇಟ್ಟ
ಇರವಂತಿಯನ್ನು ತಂದು ಆ ಶ್ರೀ ಕೇಶದಲ್ಲಿ ತುರುಬುತ್ತಾನೆ. ಆಮೇಲೆ ಆ ಭ
ಧಾರಿಗೆ ಮಲ್ಲಿಗೆ ಚಂದನದ ತಳ್ಕಿಟ್ಟು, ಮೊಲ್ಲೆಯ ಒಳ್ಳೊಗ್ಗೆಯನ್ನು ನಾ
ಕುಂಡಲವಾಗಿಡುತ್ತಾನೆ. ಮರುಗ ಗಜಚರ್ಮವಾಗುತ್ತದೆ, ಸಂಪಿಗೆಯ
ಹುಲಿದೊಗಲಾಗುತ್ತದೆ ; ನಾಗಕುಂಡಲವಾಗಿ ಸುರಹೊನ್ನೆಯಾಯಿತು
ಕಮಲ ಕುಮುದಗಳು ಶ್ರೀಪಾದ ಪದ್ಮದಲ್ಲೆರಗುತ್ತವೆ, ಉಳಿದೆಲ್ಲ ಹೂಗಳೂ
ದೈವಕ್ಕೆ ಹೂವಲಿಯಾಗಿ ಹರಡಿಕೊಳ್ಳುತ್ತವೆ—ಆ ವಿಷಕಂಠ ಹಣೆಗಣ್ಣ
ದೃಷ್ಟಿಯಾದೀತೆಂದು !

ಹೂವನ್ನು ತರುವಾಗ ಯಾವ ತರತಮಭೇದವನ್ನೂ ಮಾಡದೆ ಎಲ್ಲವನ್ನೂ
ಒಂದೆ ಶಿವಪ್ರೀತಿಯಿಂದ ನುಡಿಸಿ ಒಂದೇ, ಸೌಂದರ್ಯದೃಷ್ಟಿಯಿಂದ ಕಂಡ ಈ ಕ
ಆ ಅದೇ ಹೂಗಳನ್ನು ಶಿವಾರ್ಪಣಮಾಡುವಾಗ ಅದೇ ದಿವ್ಯಭಾವದಿಂ
ತುಂಬಿರುತ್ತಾನೆ. ಆಯಾ ಹೂವಿಗೆ ಆಯಾ ಪಾತ್ರವಿತ್ತು ಆಯಾ ಸ್ಥಾನದ
ಅದಮ ಕೂಡಿಕೊಂಡು ಸಮರಸವಾಗಿ ಐಕ್ಯಗೊಳ್ಳುವಂತೆ ಮಾಡಿದ್ದಾ
ಹೂವಲ್ಲದ, ಆದರೂ ಸುಗಂಧಮಯವಾದ ದವನ ಮಡಿವಾಳಗಳನ್ನು
ಚಾಮರವಾಗಿ ಮಾಡಿಕೊಂಡು ಆ ಶಶಿಶೇಖರನಿಗೆ ಚಮರಿಯಿಕ್ಕುತ್ತಾನೆ. ಹೀ
ಯಾವ ಹಿಡಿಬಿಡುಗಳೂ ಇರದೆ ಸರ್ವ ಸೌಂದರ್ಯ ಪಾತ್ರವನ್ನೂ ಶಿವನಿಗೆ ಅರ್ಪಿಸ
ವಾಗ ಕವಿ ಆನಂದದಿಂದ ಸೊಕ್ಕೇರುತ್ತಾನೆ, ಆದರೆ ಸೊಕ್ಕುವ ತನ್ನ ಇಂದ್ರಿಯ
ಗಳನ್ನು ಸವರಿ ತಹಬಂಧಿಗೆ ತರುತ್ತಾನೆ. ('ಸೊಕ್ಕೇಱಿ ಹಾಱೈಸಿ ಕರಣಂಗಳ
ಸವಱಿ' ಎನ್ನುವ ಚಿತ್ರ ಬಹು ಚೆನ್ನಾಗಿದೆ.)

ಪುಷ್ಪಾರ್ಚನವಾದ ಮೇಲೆ ಶಿವನಿಗೆ ತಾನು ಮಾಡಿತಂದ ದಿವ್ಯಾನ್ನವನ್ನು
ಕ್ರಮದಿಂದ ಪೀಡಿ ನಲಿದು ಆರೋಗಿಸಿ ತಾಂಬೂಲ ಕೊಟ್ಟು ಹಾಗೂ ಆ ಕರು

ಪ್ರಸಾದವನ್ನು ಕೊಳ್ಳುತ್ತಾನೆ. (ಬರಿಯ ಸೌಂದರ್ಯವನ್ನೆ ನೀಡಿದರೆ ಹೊಟ್ಟೆ ತುಂಬುತ್ತದೆಯೆ! ಅದೂ ತಣಿಯಬೇಕಲ್ಲ!) ಹೀಗೆ ಮಾಡುವಾಗ ಹೊಸ ಪರಿಯ ಕಾಂತಿ ಮನದೊಳಗೆ ಬಳೆದು ಮುತ್ತುತ್ತದೆ, ತೆರಪಿಲ್ಲದ ಉಗ್ಗಡದ ಶಿವಸುಖ ಅವನನ್ನು ಒಳಗೊಳ್ಳುತ್ತದೆ. ಸ್ನೇಹದಿಂದ ನೋಡುತ್ತಾನೆ, ನಲ್ಮೆಯಿಂದ ನೀಡುತ್ತಾನೆ; ಮತ್ತೆ ಮೋಹದಿಂದ ಜೇಡುತ್ತಾನೆ. ತನ್ನ ಪೂಜೆಯನ್ನೆ ಸಾಕ್ಷಿಯಾಗಿ ನೋಡುತ್ತಾನೆ; ಆನಂದದ ಸ್ಥಿತಿಗೆ ಸಹಜವಾಗಿರುವಂತೆ ತನ್ನ ಪೂಜಾಕ್ರಮವನ್ನೆ ಮಿಕ್ಕುಮೀರುತ್ತಾನೆ. ಆದರೆ ಎಚ್ಚರ ಬಂದು ಅದಕ್ಕಾಗಿ ಅಂಜುತ್ತಾನೆ, ಅಳುಕುತ್ತಾನೆ. ಹೀಗೆ ಆನಂದಸ್ಥಾಯಿಯ ನಾನಾ ಅಲೌಕಿಕ ಸಂಚಾರಿ ಭಾವಗಳಲ್ಲಿ ಈಸುತ್ತಾನೆ. ದಿವ್ಯಾನುಭವದ ಸ್ಥಿತಿಯಲ್ಲಿ ಆನಂದದ ಬಗೆಬಗೆಯ ಏರಲೆಗಳಲ್ಲಿ ಉಯ್ಯಾಲಾಡುತ್ತಾನೆ. ಆ ಅನುಭಾವದ ಹುಚ್ಚು ವರ್ಣನೆಯನ್ನು ಅವನ ಮಾತಿನಿಂದಲೆ ಕೇಳಬೇಕು.

"ನಿಂದು ನಲಿದಾಡಿ ಮಲೆದಾಡಿ ಪೈಶರ್ವಿಸುತಂ
ಪೂಜೆಯಂ ನೋಡುತ್ತೆ ಪುಟವೇಳುತಾಡುತುಂ
ಓಜೆಯಂ ಮೀಱುತ್ತೆ ಕರುಣಮಂ ತೋಱುತುಂ
ಕಂಪಿಸುತೆ ಪುಳಕಿಸುತೆ ಹಳವಿಸುತೆ ಝಳಪಿಸುತೆ
ರೋಂಪಿಸುತೆ ಜೋಲುತ್ತೆ ಅಮರುತ್ತೆ ಬೆಮರುತ್ತೆ
ಕೊನರುತ್ತೆ ಕೊರ್ಬುತ್ತೆ ಪುಳಕಿಸುತೆ ತೊನೆವುತ್ತೆ
ಮುನಿವುತ್ತೆ ತೊನೆವುತ್ತೆ ತೂಗುತ್ತೆ ಮುದ್ದಿಸುತೆ
ಗರ್ಭಿಸುತೆ ಗಳಪುತ್ತೆ ಕೆಲಬಲನನೇಡಿಸುತೆ
ಪರ್ಬಿ ಪಲ್ಲವಿಪ ಭಕ್ತಿಗೆ ಮನಮುನೆಡೆಗುಡುತೆ"

ವಿವಿಧಾನುಭಾವದ ತೀರುಯ್ಯಾಲೆಯಲ್ಲಿ ಮಿಂಚಲೆಯುತ್ತಾನೆ, ತೇಲುತ್ತಾನೆ—ಆನಂದದ ಸ್ಥಾಯಿಯಲ್ಲಿ. ಆದರೆ ಇಲ್ಲಿನ್ನೂ ತುರೀಯದ ತುದಿಯನ್ನು, ಆನಂದದ ಕೇಂದ್ರ ಬಿಂದುವನ್ನು ಮುಟ್ಟಿಲ್ಲ. ನೇಮಿ ಒಳಗಡೆ ಕೇಂದ್ರ ಸಮೀಪದಲ್ಲೆ ಅನುಭಾವದ ಸುಂಟರುಗಾಳಿ ಸುತ್ತುತ್ತಿದ್ದಾನೆ. ರಾಗಾಲಾಪಮಾಡುವ ಹಿಂದೂಸ್ಥಾನಿ ವಾದ್ಯಸಂಗೀತಗಾರ ತನ್ನ ಸರೋದ್ ಅಥವಾ ಸಿತಾರ್‌ನಲ್ಲಿ ಮೊದಲು ವಿಲಂಬಿತದಲ್ಲಿ ರಾಗವಿಸ್ತಾರ ಮಾಡಿ ನಾದದ ಚಿಕ್ಕೆಗಳನ್ನೆತ್ತುತ್ತ, ಕ್ರಮಕ್ರಮೇಣವಾಗಿ ಮಧ್ಯಗತಿಗೇರಿ ತುದಿಗೆ ದ್ರುತದ ಅತಿದ್ರುತದ ಸಂಚಾರಕ್ಕೆ ತೊಡಗಿ ನಾದಜಾಲವನ್ನೆ ಸೃಜಿಸಿ, ಅಷ್ಟೇಕೆ,

ನಾದಪ್ರಪಾತವನ್ನೇ ಕೆಡೆಸುವಂತೆ, ಈ ಕವಿ ಆನಂದದ ಬಗೆಬಗೆಯ ಸ್ತರಗಳಲ್ಲಿ ವಿಹರಿಸಿ ಕಡೆಯಲ್ಲಿ ತನಗಾದ ಘನಾನಂದದ ಅದ್ಭುತವನ್ನು ಭವ್ಯವಾಗಿ ಪ್ರತಿಮಿಸಿದ್ದಾನೆ. ಇಷ್ಟು ಹೊತ್ತೂ, ಆ ಎತ್ತರಕ್ಕೆ ತುಸು ಹಿಂದೆ ಇರುವ. ಉಪಾಂತವಾದ-ಸ್ತರದಲ್ಲಿ ವಿಹರಿಸುತ್ತಿದ್ದ. ಹೀಗೆ ಆಸನ್ನ ಆನಂದಚೇತನನಾಗಿರುವ ಕವಿಗೆ ಅಂದು ಮುಕ್ತಿಸುಖ ಸ್ವರ್ಗ ಭೋಗಗಳೆಲ್ಲ ವಿಮೋಹಗಳಾಗಿ ತೋರಿ ತಿರಸ್ಕಾರ್ಯವಾಗಿ ಪರಿಣಮಿಸುತ್ತವೆ: ಭಕ್ತಿಸುಖವೊಂದೆ ಸರಿ ಎಂಬ ದೃಢತೆ ಮೂಡುತ್ತದೆ.

"ಭಕ್ತಿ ಸುಖದಿಂದಿತರ ಸುಖವದೆಲ್ಲಿಯದೆನಿಸಿ
ಮುಕ್ತಿ ಸುಖದಿಂದಧಿಕವಿದಕೆ ಪಡಿಯಿಲ್ಲೆನಿಸಿ
ಪರುಷವಂ ಬಿಸುಡೆಂದು ಸುರಭಿಯಂ ತೆಗೆಯೆಂದು
ಸುರತರುವನೊಲ್ಲೆನೆಂದಮೃತವಂ ಚೆಲ್ಲೆಂದು
ನಿಧಿಗಳಂ ನೂಂಕು ಚಿಂತಾಮಣಿಯನಿಡುಕೆಂದು
ಮಧುಗಿಧುಗಳೆಲ್ಲಿಯವವೇತಜಿವವೇಕೆಂದು"

ದೃಢಭಕ್ತಿ ನೆಲೆಗೊಳ್ಳುತ್ತದೆ. ಹೀಗೆ ಬೇಕು ಬೇಡವೆನ್ನುವ ಸ್ಥಿತಿಯೆಂದೂ ಪರಮ ಪರಿಣಾಮದ ಅವಸ್ಥೆಯಾಗಿರದು, ಸರಿ. ಆದರೆ ಹಾಗೆ ಏಕನಿಷ್ಠೆಯಿಲ್ಲದಿದ್ದರೆ ಬೇಕು ಬೇಡಗಳಾಚೆಗಿರುವ ನೆಲೆಗೇರುವುದು ದುಸ್ಸಾಧ್ಯವಾದೀತು. ಹೀಗೆ ಈ ಸ್ಥಿತಿಯಲ್ಲಿರುವಾಗ ಈ ಭಕ್ತ ಕವಿಗೆ, ಉರವಣಿಸುವ ಭಕ್ತಿಯ –ಪರಮಭಕ್ತಿಯ ಸುಖದ ಸುಧೆ ತಲೆಗೇರುತ್ತದೆ, ಶಿವಮೂರ್ತಿ ಅವನ ಕರಣಕರಣಂಗಳಲ್ಲೂ ಕಾಲೂರುತ್ತದೆ. ತೀವಿದ ಗದ್ಗದ ಉಮ್ಮಿ ಹೊಮ್ಮಿ ಕರಗುತ್ತದೆ. ಮಾತು ಉಡುಗಿ ಕುಸಿಯುತ್ತದೆ; ಶಿವನಾಮದ ಉಚ್ಚರಣೆ ಕರಕರಗಿ ಜಾರುತ್ತದೆ; ಭವಸ್ಮೃತಿಯೆಲ್ಲವೂ ಕಳಚಿ ಅಳಿದುಹೋಗುತ್ತವೆ. ಆ ಮಹಾನುಭಾವದ ಸ್ಥಿತಿಯನ್ನೂ ಕವಿಯ ಮಾತಿನಲ್ಲಿ ಕೇಳಬೇಕು:

"ಉರವಣಿಪ ಪರಮಭಕ್ತಿಯ ಸುಖದ ಸೊಕ್ಕೇಱಿ
ಹರ! ನಿಮ್ಮ ಮೂರ್ತಿ ಕರಣಂಗಳೊಳ್ ಕಾಲೂಱಿ
ಹರಹರ ನಮಶ್ಶಿವಾಯೆಂಬ ಕಳವಳವೇಱಿ
ಪರಮಪದದಾನಂದ ಸುಖದ ಸುಧೆ ತಲೆಗೇಱಿ
ತೀವಿ ಗದ್ಗದಮುಣ್ಮಿ ಪೊಣ್ಮಿ ಕರಗುತೆ ಬರುತೆ
ವೀ ವೀ ವಿರೂರೂರುಪಾಪಾಕ್ಷಕ್ಷಯೆನುತ್ತೆ!
ಒಸೆದು ಮೊದಲನೆಯಕ್ಕರದೊಳೆ ಹರುಷಂ ಮೂಡಿ

ಮಿಸುಗುವೆರಡನೆಯಕ್ಕರದೊಳೆ ಸುಖವಕ್ಕಾಡಿ
ಮೂಱನೆಯ ವರ್ಣದೊಳ್ ಮಱೆದು ಪುಳಕಂ ನೆಗೆದು !
ಮೀಱಿ ನಾಲ್ಕನೆಯಕ್ಕರದೊಳೆ ಮುನ್ನಿನಸವಳಿದು !
ಏನೆಂಬೆನ್ ! ಅಚ್ಚ ಶಿವಭಕ್ತಿ ಪೆರ್ಚಲ್ ಕರಂ
ಆನಂದರಸದಿಂದೆ ತೋಇದು ನಾಲ್ಕಕ್ಕರಂ
ನಾಲಗೆಯ ಮೇಲೆ ಹೊರಳುತ್ತೆ ಸಡಿಲುತ್ತಮಿರೆ"

ಇದು, ಅವನ ಅಚ್ಚಭಕ್ತಿಯು ಪರಮಾನಂದಸ್ಥಿತಿಗೇರುವ ಹಾಗೂ ಏರಿದ ಸುಮುಹೂರ್ತದ ಅನುಭವದ ವರ್ಣಶಿಲ್ಪ, ವಾಗ್ಗೀತೆ. ಎಷ್ಟು ಮೂರ್ತಿವತ್ತಾಗಿದೆ! ಎಷ್ಟು ಪ್ರಾಮಾಣಿಕವಾಗಿದೆ! ಆ ಆನಂದಸ್ಥಿತಿಯ ಪದರ ಪದರಗಳ ತಟಿದ್ ವರ್ಣಚಿತ್ರಣವಿಲ್ಲಿದೆ. ಕುಡಿಮಿಂಚು ಬಳ್ಳಿಮಿಂಚು ಹೂಮಿಂಚುಗಳು ಮಿಂಚುಮಿಂಚುತ್ತ ಕಡೆಯಲ್ಲಿ ಬಾನೆಲ್ಲ ತುಂಬಿ ತುಳುಕುವಂತಹ ತುಂಬು ಮಿಂಚೊಂದು ಮಿಂಚುವಂತಿದೆ ಈ ಆನಂದಪ್ರತಿಮೆಯಿಂದಾಗುವ ಅನುಭವ. ಆನಂದದ ಬೆಳಕು ಹೇಗೆ ಹೇಗೆ ಸುಳಿದು ಹೊಳೆದು ಕಡೆಗೆ ಎದೆತುಂಬಿ ನಮ್ಮನ್ನು ಒಳಗೊಳ್ಳುತ್ತದೆ ಎಂಬುದನ್ನಿಲ್ಲಿ ಉಜ್ವಲವಾಗಿ ನಿರ್ಮಲವಾಗಿ ದೃಢವಾಗಿ ಸಾಕಾರವಾಗಿ ಕಣ್ಣೆದುರೆ ಕಾಣುತ್ತೇವೆ. ಶಿವರೂಪವು ಆನಂದದ ಏರುವೆಯಲ್ಲಿ ಕವಿಯ ಕರಣ ಕರಣಗಳನ್ನೆಲ್ಲ ಕಾಲೂರಿ ಆಕ್ರಮಿಸಿಕೊಳ್ಳುವುದು, ಪರಮಪದದ ಸುಖ ತಲೆಗೇರುವುದು, ತುರೀಯ ಆನಂದದ ಪೂರ್ವದಲ್ಲಿ ಯಾವುದು ಅಸ್ಖಲಿತ ಸ್ಮರಣಸಾಧನೆಯಾಗಿತ್ತೋ ಆ ವಿರೂಪಾಕ್ಷ ನಾಮವೂ ಅಂದು ಹೇಗೆ ತೆರೆತೆರೆಯಾಗಿ ಜಾರಿ ಸರಿದು ಪರಮಾನಂದದ ಕಡಲಿನಲ್ಲಿ ಕರಗಿ ಹೋಯಿತು ಎನ್ನುವುದು, ಆಗ ಭವಭವದ ಮುನ್ನಿನಸವೆಲ್ಲ ಹೇಗೆ ಅಳಿದು ಹೋಗುತ್ತದೆಂಬುದು—ಈ ಎಲ್ಲ ದಿವ್ಯಾನುಭವಸ್ತರಗಳೂ ಸ್ಪಷ್ಟವಾಗಿ ಅಧಿಕೃತವಾಗಿ ಪ್ರತಿಮಿತವಾಗಿದೆ. ಆ ಆನಂದಾವಸ್ಥೆಯ ಅವಾಙ್ಮಯ ಸ್ಥಿತಿಯಲ್ಲಿ ಭವ ಹೇಗೆ ತೋರುತ್ತದೆ, ಶಿವ ಹೇಗೆ ಕಾಣುತ್ತದೆ ಎಂಬ ಅದ್ಭುತ ಚಿತ್ರವೂ ಇದೆ:

"ಲೀಲೆಯಿಂದಶ್ರು ನಯನದೊಳೆ ತೆರೆ ಮಸಗುತಿರೆ
ಮುತ್ತಿ ದರಿಷಡ್ವರ್ಗವತ್ತ ಸಾರುತ್ತಮಿರೆ
ಹತ್ತಿರ್ದ ತಾಪತ್ರಯಂ ತಣ್ಣನಾಗುತಿರೆ
ಮನವು ನಿಮ್ಮಡಿಗೆಱಗಿ ಬುದ್ಧಿ ನೆಱೆ ತರ್ಕೈಸಿ
ನೆನಹು ನಿಮ್ಮೊಳ್ ಪುಗಲ್ ಚಿತ್ತವೆರಡಿಲ್ಲೆನಿಸಿ
ನಿನ್ನ ನಿಜವೆನ್ನ ಜೀವವನಿಂಬುಗೊಂಡಿರಲ್

ನಿನ್ನ ಸುತಿಯೆನ್ನ ಜಿಹ್ವೆಯನಿಂಬುಗೊಂಡಿರಲ್
ನಿನ್ನ ರೂಪೆನ್ನ ಕಂಗಳನಿಂಬುಗೊಂಡಿರಲ್
ನಿನ್ನ ಸರ್ವಾಂಗವೆನ್ನಂಗದೊಳ್ ತೀವಿರಲ್
ಇಂತು ನೀನೆನ್ನನೊಚ್ಚತವಾಗಿ ಕೈಕೊಂಡು
ಸಂತಸದೊಳಾಂ ನಿನ್ನನಗಲದೆ ಮನಂಗೊಂಡು"

ಶಿವದಲ್ಲಿ ತನ್ನೆಲ್ಲ ಮೊನ್ನೆನವೆಲ್ಲ ಕರಗಿರುವಾಗ ತಾನೆಂಬ ಅರಿವಾದರೂ ಉಳಿವುದೆಲ್ಲಿ ? ಶಿವದ ಅಂಗಾಂಗವೆಲ್ಲ ತನ್ನ ಅಂಗಾಂಗದಲ್ಲಿ ಕಾಲೂರಿ ಇಂಬುಗೊಂಡು ಒಚ್ಚತವಾಗಿ ಅದ್ವೈತವಾಗಿದೆ, ಆ ಆನಂದದ ಶೀತಲಾಗ್ನಿಜ್ವಾಲೆಯಲ್ಲಿ. ಆದರೀ ಆನಂದದ ಅದ್ವೈತಸ್ಥಿತಿ ಎಷ್ಟುಹೊತ್ತು ? ಆ ಎತ್ತರದ ಅನಿರ್ವಚನೀಯ ನಿರ್ವಾತಸ್ಥಿತಿಯಲ್ಲಿ ಯಾರಾದರು ಎಷ್ಟುಹೊತ್ತು ತಾನೇ ಇರಬಲ್ಲರು? ಗೌರೀಶಂಕರ ಶಿಖರವಿರುವುದು ಪ್ರವಾಸಕ್ಕೆ ಹೊರತು ನಿವಾಸಕ್ಕಲ್ಲ. ಆ ಎತ್ತರದ ಕುಳಿರ್ಕೈಕಿಲಲ್ಲಿ ಅರ್ಹಂತ ಗೌರೀಶಂಕರರು ಮಾತ್ರ ಸದಾ ಇರಬಲ್ಲರು ಎಂದು ಶ್ರೀ ಕವಿ ಕುವೆಂಪು ಅವರು ನುಡಿದ ಸತ್ಯವನ್ನಿಲ್ಲಿ ನೆನೆದುಕೊಳ್ಳಬಹುದು. ಆದ್ದರಿಂದ, ಈ ಕವಿಯ ಅನುಭವದಲ್ಲೂ ಆನಂದದ ಕಡಲ ತೆರೆ ಒಯ್ಯನೊಯ್ಯನೆ ಹಿಂಜರಿಯುತ್ತದೆ ; ಅಂತೆ ಭವಬಂಧ ಕ್ರಮಕ್ರಮವಾಗಿ ಅಪ್ಪತೊಡಗುತ್ತದೆ. ಹಾಗಿರುವಾಗ ಅವನ ಆನಂದ ತಿರೋಗತ ಚೇತನ ಶಿವನನ್ನು ಬೇಡಿಕೊಳ್ಳುತ್ತದೆ : ತನ್ನನ್ನು ಆ ಸ್ಥಿತಿಯೊಳೇ ಇರಿಸೆಂದು, ತನ್ನನ್ನು ಅಲ್ಲಿಂದ ಅಗಲಿಸದಿರೆಂದು, ಭವವನ್ನು ಶಿವದ ನೆಲೆಯ ಮೆಚ್ಚಿನಿಂದಾಗಿ ಮರೆದಿರುವುದನ್ನು:

"ಸಂತಸದೊಳಾಂ ನಿನ್ನನಗಲದೆ ಮನಂಗೊಂಡು
ಅರ್ಚಿಸುತ್ತಿರ್ಪುದಂ ಕರುಣಿಸುವುದೆಲೆ ದೇವ
ನಚ್ಚಿ ನಲಿದಿರ್ಪುದಂ ಕರುಣಿಸುವುದೆಲೆ ದೇವ
ಮುಚ್ಚಿ ಮರೆದಿರ್ಪುದಂ ಕರುಣಿಸುವುದೆಲೆ ದೇವ
ಹೆಚ್ಚಿ ಹಿಗ್ಗಿರ್ಪುದಂ ಕರುಣಿಸುವುದೆಲೆ ದೇವ"

ಎಂದು ಮೊರೆಯಿಡುತ್ತ ಇಡುತ್ತ ಮೆಲ್ಲನೆ ಆನಂದದ ಮೆಟ್ಟಿಲನ್ನಿಳಿಯುತ್ತಾನೆ. ಎಲ್ಲಿ ಆ ಅವರೋಹಣಕ್ರಮ ಹಠಾತ್ ಪ್ರಪಾತವಾಗುವುದೊ ಎಂದು ಬೆದರಿ ಹಾಗಾಗದಂತೆ ತಡೆಹಿಡಿಯಲು ಆ ಭಕ್ತಹೃದಯ ಮತ್ತೆ ಸ್ತೋತ್ರಪಥವಿಡಿಯುತ್ತದೆ ; ಹಾಗೆ ಯತ್ನಿಸಿ ಅದು ಆನಂದದ ಉಪಾಂತಸ್ಥಿತಿಯಲ್ಲಾದರೂ, ಅರೆ ಎತ್ತರದಲ್ಲಾದರೂ ಇರುತ್ತದೆ.

ಇದಿಷ್ಟೂ ಕವಿಗಾದ ತ್ರಿಸುಖಾನುಭವದ ವಿವರಣೆ: ಮೊದಲು ಸೌಂದರ್ಯ ವಾಗಿ ಅನುಭವಗೊಂಡು ಆಮೇಲೆ ಶಿವವಾಗಿ ಅದನ್ನು ಅರ್ಪಣಗೊಂಡು ತತ್ಫಲ ವಾಗಿ ಕಡೆಯಲ್ಲಿ ಆನಂದವಾಗಿ ಅನುಭೂತವಾಗುತ್ತದೆ, ಸಚ್ಚಿದಾನಂದ ! ಸೌಂದ ರ್ಯದಂತೆ ಲೋಕ ಪ್ರಕಾಶನಗೊಂಡಿರುವುದು ಶಿವ; ಸೌಂದರ್ಯ ಶಿವದ, ಭಕ್ತ-ಭಗವಂತನ ಸಾಯುಜ್ಯದಿಂದ ಅನುಭೂತವಾಗುವುದು ಆನಂದ. ಹಾಗೆ ನೋಡಿದಲ್ಲಿ ಶಿವದ ವ್ಯಕ್ತರೂಪವೆ ಸೌಂದರ್ಯ; ಭುಕ್ತಿರೂಪವೆಂದರೂ ಸರಿಯೆ. ಸೌಂದರ್ಯ ದೃಗ್‌ಗೋಚರ; ಶಿವ ಅಗೋಚರ ವೇದ್ಯ; ಆನಂದ ಅನುಭವ ಹೃದ್ಯ. ಇವು ಮೂರಾದರೂ ಮೂರಲ್ಲ. ವ್ಯಕ್ತದಲ್ಲಿ ಸೌಂದರ್ಯ, ಅವ್ಯಕ್ತದಲ್ಲಿ ಶಿವ, ಇವೆರಡಕ್ಕೂ ಸೇರಿದಂಥ ನೆಲೆಯಲ್ಲಿ ಆನಂದ. ಸೌಂದರ್ಯಕ್ಕೆ ಬೆಲೆಯಿರುವುದು ಶಿವದ ನೆಲೆಯಿಂದ ಆನಂದದ ಸೆಲೆಯಿಂದ; ಶಿವದ ನೆಲೆಯಿರುವುದು ಆನಂದದ ಪರಮ ಬೆಲೆಯಿಂದ. ಆದ್ದರಿಂದ, ಮೊದಲು ಸೌಂದರ್ಯ ಶಿವಾರ್ಪಿತವಾಗಿ ಆಮೇಲೆ ಈ ಪರಮಾನಂದದಲ್ಲಿ ಸೌಂದರ್ಯ ಶಿವಗಳೆರಡೂ ಕರಗಿಹೋಗುತ್ತವೆ. ಈ ದರ್ಶನ ಹಾಗೂ ದರ್ಶನಾನುಭವ ಈ ಪುಷ್ಪರಗಳೆಯಲ್ಲಿ ಪ್ರತಿಬಿಂಬಿತವಾಗಿದೆ. ಇದು ಇರಬಹುದು ಇಲ್ಲದಿರಬಹುದು; ಆದರೂ ಈ ಮಹಾ ಭಾವಗೀತೆಯಲ್ಲಿ ಚಿತ್ರಿತವಾಗಿರುವ ಅನುಭವವಂತೂ ಬುದ್ಧಿಜಾತವಾದ ಲೆಕ್ಕಾಚಾರದ ಬರವಣಿಗೆ ಯಾಗಿಲ್ಲ, ಅಥವಾ ಬರಿಯ ಬಚ್ಚಭಾವುಕತೆಯ ಹುಚ್ಚು ನೊರೆನೊರೆತ ವಾಗಿಯೂ ಇಲ್ಲ. ಅಪೂರ್ವವಾದ ಅನುಭವಸಿದ್ಧಿಯ ಬೆನ್ನೆಲುಬಿನಿಂದ ಸಡೆ ದಾಡುವ ಮಹಾ ಭಾವಗೀತವಾಗಿದೆ ಇದು.

ಕಡೆಯದಾಗಿ, ಹೀಗೆ ಹೂವಿನ ಲೋಕದಲ್ಲಿ ನಮ್ಮನ್ನು ಕೊಂಡೊಯ್ದು, ಸೌಂದರ್ಯ ರಥದಲ್ಲಿ ಶಿವಪಥದ ಮೂಲಕ ಆನಂದಸ್ಥಿತಿಗೆ ಕರೆದೊಯ್ದಿದ್ದರೂ ಈ ಕವಿ, ತನ್ನ ಅನುಭೂತಿಯ ಪುಷ್ಪಮಾಲೆಯನ್ನು ಕೋದು ಶಿವನಿಗೆ ಸೂಡಿ ದ್ದರೂ ಎಲ್ಲಿ ಶಿವ ಮೆಚ್ಚುವನೊ ಇಲ್ಲವೊ ಎಂಬ ಶಂಕೆಯಿಂದಲೆ ತನ್ನ ಕೃತಿ ಯನ್ನು ಪ್ರಾರಂಭಿಸಿದ್ದಾನೆ: "ಪೊಸ ಪೂಮಾಲೆಯ ಅವಧರಿಸು, ಅಗಜಾ ಲೋಲ:" ಎನ್ನುತ್ತ. ಇದು ಹೊಸ ಹೂಮಾಲೆಯೆಂದು ಕವಿಗೂ ಗೊತ್ತು. ಆದರೆ ಶಿವ ಮೆಚ್ಚದೆ ಹೇಗೆ, ಅಲ್ಲ, ಅಗಜಾಲೋಲ ಮೆಚ್ಚದೆ ಹೇಗೆ? ಶಿವನಿ ಗಿಂತ ಶಿವೆಗೆ ಹೂವಿನ ಪರಿಚಯ ಚೆನ್ನಾಗಿ ಆಗಿದೆ. ನಾಗಭೂಷಣನಿಗೆ, ಆ ಭಸ್ಮಲೇಪಿತ ಚರ್ಮಾಂಬರನಿಗೆ ಹೇಗದು ತಿಳಿದೀತು? ಆದ್ದರಿಂದಲೇ ಶಿವಾ

ವಲ್ಲಭ ಅದನ್ನು ಮೆಚ್ಚಿ ಸೈ ಎನ್ನಬೇಕಂತೆ. ನುಡಿದರೆ ಮುತ್ತಿನ ಹಾರದಂತೆ, ಸ್ಫಟಿಕದ ಶಲಾಕೆಯಂತೆ, ಮಾಣಿಕ್ಯದ ದೀಪ್ತಿಯಂತೆ ಇದ್ದರೆ ಸಾಲದು. ಲಿಂಗ ಮೆಚ್ಚಿ ಅಹುದು ಎನ್ನಬೇಕು ತಾನೆ? ಲಿಂಗಯ್ಯ ಈ ಹೊಸ ಹೂಮಾಲೆ ಯನ್ನು ಮೆಚ್ಚಿರಬೇಕು ; ಶಿವೆಯ ಮುಡಿಗೆ ತೊಡಿಸಿ ತನ್ನ ಜಡೆಯ ಗಂಗೆಗೂ ಸೂಡಿ ತನ್ನ ಶ್ರೀಕಂಠದಲ್ಲಿಟ್ಟುಕೊಂಡಿರಬೇಕು.*

---

*ತಮ್ಮ 'ಹರಿಹರ' ಎಂಬ ಕಿರುಹೊತ್ತಗೆಯ ಪ್ರಾರಂಭವನ್ನು ಶ್ರೀ ಡಿ. ಎಲ್. ಎಸ್. ಅವರು ಈ ಪುಷ್ಪರಗಳೆಯ ಸುರಸ ನಿರೂಪಣದಿಂದಲೆ ಮಾಡಿರುವುದನ್ನು ಇಲ್ಲಿ ಕೃತಜ್ಞತೆಯಿಂದ ನೆನೆದುಕೊಳ್ಳುತ್ತೇನೆ.

ಹೂವಿನ ಚೆಲುವನ್ನು ಕಂಡು ತಾನು ಪಡೆದ ರಮ್ಯಾನುಭವವನ್ನು ಹೇಗೆ ಪಂಪ ತನ್ನ ಕಾವ್ಯಗಳಲ್ಲಿ ಪಡಿ ಮೂಡಿಸಿದ್ದಾನೆ ಎಂಬುದನ್ನೂ, ಶ್ರೀ ಕುವೆಂಪು ಅವರ 'ಅನಿಕೇತನ' ಎಂಬ ಕವನ ಸಂಕಲನದಲ್ಲಿ ಆ ಸೌಂದರ್ಯ ಕವಿಗೆ ತಂದಿದುವ ವಿಶ್ವ ಸ್ವಾನುಭೂತಿ ಹೇಗೆ ಪ್ರತಿಬಿಂಬಿತವಾಗಿದೆ ಎಂಬುದನ್ನೂ ಇಲ್ಲಿ ನೆನೆದುಕೊಳ್ಳಬಹುದು.

# ಕುಮಾರವ್ಯಾಸನ ಅರ್ಜುನ-ಊರ್ವಶೀ ಪ್ರಸಂಗ*

ಕುಮಾರವ್ಯಾಸ ಭಾರತದ ಮಹತ್ತನ್ನು ಜ್ಯೋತಿರಕ್ಷರಗಳಲ್ಲಿ ಕೆತ್ತಿರುವ ಮಹಾ ಸನ್ನಿವೇಶಗಳಲ್ಲಿ ಈ ಅರ್ಜುನ ಊರ್ವಶೀ ಪ್ರಕರಣವೂ ಒಂದು. ಭೀಷ್ಮ ಸುಂದರವಾಗಿರುವ, ಕವಿಯ ಮಾತಿನಲ್ಲೆ ಹೇಳುವುದಾದರೆ ಸಮನೋಹರ ಭಯಂಕರವಾಗಿರುವ ಆ ಊರ್ವಶಿಯ ಮಧುಲಿಪ್ತ ಖಡ್ಗಧಾರಾ ಸೌಂದರ್ಯವಾಗಲೀ, ತಿರಸ್ಕೃತ ಪ್ರಣಯವಾಗಲಿ; ಅಂತಹ ಸುಮನೋಹರ ಅಪ್ಸರಾ ಪ್ರಣಯಾಗ್ನಿಯಲ್ಲೂ ಮೈಸುಟ್ಟುಕೊಳ್ಳದೆ ದಾಟಿಕೊಂಡು ಹೊರಬರುವ ಶಿವ ಶಿವಾ ಕೃಪಾಸ್ತ್ರಗಳನ್ನು ಬೆನ್ನೊಳಗೆ ಹೊತ್ತ ಧನಂಜಯನಾಗಲಿ ಕನ್ನಡ ಸಾಹಿತ್ಯದಲ್ಲಿ ಅನನ್ಯ ಚಿರಂಜೀವಿಗಳಾಗಿ ಉಳಿಯುತ್ತಾರೆ, ಕುಮಾರವ್ಯಾಸನ ಪ್ರತಿಭೆಯ ಧವಳದೀಪ್ತ ಸ್ತೂಪಗಳಾಗಿ ನಿಲ್ಲುತ್ತಾರೆ. ವಿಶೇಷವೇನೆಂದರೆ ಮೂಲ ವ್ಯಾಸ ಭಾರತದಲ್ಲಿ ಈ ಪ್ರಸಂಗ ಇರುವಂತೆ ತೋರುವುದಿಲ್ಲ[1]; ಪಂಪನಲ್ಲಿ ಅತ್ಯಂತ ಅಸ್ಪಷ್ಟವಾಗಿ, ಸೃಷ್ಟಿಪ್ರಾರಂಭದ ಅಸ್ಪಷ್ಟತೆಯಿಂದೊಡಗೂಡಿರುವ ಈ ಪ್ರಸಂಗ ಇಲ್ಲಿ ಮಹಾಶಕ್ತಿ ಕೇಂದ್ರವಾಗಿದೆ.

ಈ ಪ್ರಸಂಗದಲ್ಲಿ ಒಡಮೂಡಿರುವ ಭಿನ್ನಭಿನ್ನ ಅಂಶಗಳನ್ನು ಗಮನಿಸಬೇಕು; ಅಲ್ಲಿ ಕವಿ ತೋರಿಸಿರುವ ಮಾನವ ಸ್ವಭಾವದ ಅಸಾಧಾರಣ ಪ್ರಜ್ಞೆ ; ಪರಿತ್ಯಕ್ತ ಪ್ರಣಯ, ಅದರಲ್ಲೂ ಸ್ತ್ರೀ ಪ್ರಣಯ–ಭುವನಪ್ರಾರ್ಥಿತಳಾದ ಊರ್ವಶಿಯಂಥವಳ ಪ್ರಣಯ–ಏನೆಂಥ ಭಯಂಕರ ಆದರೂ ಸುಮನೋಹರ ಪಾವಕವಾಗಬಲ್ಲದೆಂಬ ಅರಿವು ; ಇಂಥೆಲ್ಲ ಅಗ್ನಿಪರೀಕ್ಷೆಯನ್ನೂ ಗೆದ್ದು ಬರಬೇಕಾದವನು

---

* ಈ ಪ್ರಕರಣದ ವಿಷಯವಾಗಿ ಮೊದಲಾಗಲೇ ಶ್ರೀ ತೀ. ನಂ ಶ್ರೀ. ಅವರು ಸುಂದರ ಸಂಕ್ಷಿಪ್ತವಾಗಿ ನಿರೂಪಿಸಿದ್ದಾರೆ. ನನಗೆ ಆ ಪ್ರಸಂಗದ ವಿಷಯವಾಗಿ ಮತ್ತೂ ಕುತೂಹಲ ತಂದದ್ದು ಶ್ರೀ ಡಿ. ಎಲ್. ನರಸಿಂಹಾಚಾರ್ಯರ ಒಂದು ಮಾತು : "ನೋಡಯ್ಯ, ಕುಮಾರವ್ಯಾಸನ ಆ ಊರ್ವಶೀ ಪ್ರಸಂಗ ಇದೆಯಲ್ಲ ಅದು White-hot spot ಕಣಯ್ಯ ಅವನ ಭಾರತದಲ್ಲಿ. ಅಬ್ಬ ! ಹಾಗೆ ಬರೀಬೇಕಯ್ಯ ಬರ್ದ್ರೆ" ಎಂದು ಒಂದು ಬಾರಿ ಸಂಭಾಷಣೆಯಲ್ಲಿ ಹೇಳಿದ ಮಾತು. ಮತ್ತೆ ಆಮೇಲೆ 'White-hot' ಎನ್ನುವ ದೃಷ್ಟಿಯಿಂದಲೇ ಓದಿದೆ. ಈಗೀಗ ಅನಿಸಿದೆ, ಎಷ್ಟು ಸತ್ಯ ಆ ಮಾತು ಎಂದು. ಆ ಅನಿಸಿಕೆಯ ಒಡಮೂಡಿಕೆ ಈ ಲೇಖನ, ಅಷ್ಟೆ. –

ಧನಂಜಯನೆ ಆದರೂ ಅವನಿಗೆ ಎಂಥೆಲ್ಲ ಪೂರ್ವಸಿದ್ಧಿ, ಪೂರ್ವಸಿದ್ಧತೆಗಳು, ವರಗಳು ಅಗ್ನಿಸ್ತಂಭನ ಮಂತ್ರಗಳಾಗಿ ನೆರವಾಗಬೇಕಾದೀತು ಎನ್ನುವ ದಿವ್ಯ ವಿವೇಕ, ಈ ಎಲ್ಲವೂ ಅವನ ಮಹಾಕವಿತ್ವದ ಧ್ವನಿಪ್ರತಿಮೆಗಳಾಗಿವೆ. ಇಂದ್ರ ನಂದನನ ಈ ಇಂದ್ರಿಯದಿಗ್ವಿಜಯ, ಅದೂ ಭೋಗ ಭೂಮಿಯಲ್ಲಿ ಪಡೆದ ಅಪೂರ್ವಜಯ ಮಹಾಭಾರತದ ಅವನ ಉಳಿದೆಲ್ಲ ವಿಜಯಗಳಿಗಿಂತಲೂ ನೂರು ಮಡಿ ಹಿರಿದಾದುದು. ಸಹಜವಿರಾಗಿಯಾದವನು, ಇಲ್ಲವೆ ಪ್ರತಿಜ್ಞಾ ಪರಿ ಪಾಲಕನಾದ ಭೀಷ್ಮನಂಥವನು, ಅಥವಾ ಸತ್ತ್ವಮೂರ್ತಿಯಾದ ಯಮಜ ನಂತಹವನು ಇಂತಹ ವಿಷಯದಲ್ಲಿ ಜಯಶಾಲಿಯಾದನೆಂದಿದ್ದರೆ ಆಶ್ಚರ್ಯವೇ ಆಗುತ್ತಿರಲಿಲ್ಲ. ಕೃಷ್ಣ ಶಿಷ್ಯನಾದ ಇವನಿಗೆ ಅವನ ಬಹು ರಮಣೀ ಪ್ರಿಯತ್ವವೂ ಕೊಂಚಮಟ್ಟಿಗೆ ಬಳುವಳಿಯಾಗಿ ಬಂದಿದ್ದಂತೆ ತೋರುತ್ತದೆ. ಸಂನ್ಯಾಸಿ ವೇಷ ಧಾರಿಯಾಗಿ ಪ್ರಾಯಶ್ಚಿತ್ತ ರೂಪದ ತೀರ್ಥಯಾತ್ರೆಯನ್ನು ಕೈಕೊಂಡಾಗಲೆ ಎಷ್ಟೋ ಜನರನ್ನು ಮದುವೆಯಾಗುವ, ಶ್ರೀಕೃಷ್ಣ ಸಹೋದರಿ ಸುಭದ್ರೆಯನ್ನೂ ಅಪಹರಿಸಿಕೊಂಡೆ ಹೋಗುವ ಈ ರಮಣ, ಭೋಗ ಭೂಮಿಯಲ್ಲಿ ಅದೂ ಅಪ್ರಾರ್ಥಿತಳಾಗಿ ಬಂದ ಅತ್ಯಭಿಮಾನಿಯಾದ ಅನ್ಯ ದುರ್ಲಭಳಾದ ದೇವ ರಮಣಿ ಊರ್ವಶಿಯನ್ನೂ, ಅವಳ ಅದಮ್ಯ ಸನ್ಮೋಹಕತೆಯನ್ನೂ, ಭಯಂಕರ ಕೋಪವನ್ನೂ ನಿವಾರಿಸುವುದೆಂದರೆ ಹೇಗೆ ತಾನೆ ಸಾಧ್ಯವಾಯಿತು? ಕುಮಾರವ್ಯಾಸ ಈ ಸನ್ನಿವೇಶಕ್ಕೆ ದಿವ್ಯವಾದ ಪ್ರೈಮಾಚಲವೇದಿಕೆಯನ್ನೆ ರಚಿಸಿ ದ್ದಾನೆ. ಸೂಚನೆಯ ಪದ್ಯಾರ್ಥದಲ್ಲಿ ಹೇಳುವುದನ್ನು ನೋಡಿ :

"ಭಯ ಭರಿತ ಭಕ್ತಿಯಲಿ ಕಾಮಾ
ರಿಯನು ಗೆಲಿದರ್ಜುನನು ಹರವೈ
ರಿಯನು ಗೆಲಿದನು ಧೈರ್ಯದಿಂದೂರ್ವಶಿಯ ಶಾಪದಲಿ."

ಹಿಂದಿನ ಸಂಧಿಗಳಲ್ಲೆ ಈ ವೇದಿಕೆಯನ್ನು ನಿರ್ಮಿಸುವ ಕೆಲಸವನ್ನೂ ಮಾಡಿ ದ್ದಾನೆ.

ದೇವಲೋಕಕ್ಕೆ ಅರ್ಜುನ ಹೋಗಿದ್ದುದು ಕೇವಲ ವಿಹಾರಾರ್ಥವಾಗಿ ಯಾಗಲಿ ಅಥವಾ ಅಲ್ಲಿಯ ಭೋಗಕ್ಕೆ ವಿಸ್ಮಿತನಾಗಿಯಾಗಲಿ ಆಗಿದ್ದಿದ್ದರೆ ಪ್ರಸಂಗವೆ ಬೇರೆಯಾಗುತ್ತಿತ್ತು. ಕಾಮಾರಿಯಾದ ಪಾರ್ವತೀಪರಮೇಶ್ವರ ನೊಡನೆ ಹೋರಾಡಿ, ಭಯಭರಿತ ಭಕ್ತಿಯಲ್ಲಿ ಅವನನ್ನು ಗೆದ್ದು ಪಾಶುಪತ

ಅಂಜನಾ ಇತ್ಯಾದಿ ಮಹಾಸ್ತ್ರಗಳನ್ನು ಗಳಿಸಿಕೊಂಡು ಅವುಗಳನ್ನು ತನ್ನ ಬೆನ್ನಲ್ಲಿ ಹೊತ್ತು, ಕೃಪಾಗ್ನಿಕವಚವನ್ನು ಧರಿಸಿ ಹೊರಟ ಧನಂಜಯನನ್ನು ಅಪ್ಸರಾ ಮೋಹಾಗ್ನಿ ಹೇಗೆ ತಾನೆ ತಾಕೀತು ? ನೆಕ್ಕಿ ಸುಡಲು ಬಂದ ಅವರ ರಕ್ತಾಗ್ನಿ ಜಿಹ್ವೆಯು ನಿಶಿತಧಾರೆಯ ಮೊಂಡಾಗಿ ಹಲ್ಲುಡಿದು ಹೋದಂತೆ ತೋರುತ್ತದೆ, ಇಲ್ಲಿ. ಅಲ್ಲಿಯ ತನಕ ತನ್ನ ಜೀವನದಲ್ಲೆಂದೂ ತಿರಸ್ಕಾರವನ್ನೆ ಕಂಡಿರದ, ಕೇವಲ ಪ್ರಾರ್ಥನೆಗಳಿಂದಲೆ ಉಬ್ಬಿ ಕೊಬ್ಬಿಹೋಗಿದ್ದ, ದೇವೇಂದ್ರನಿಂದ ಮನುಜೇಂದ್ರನ ತನಕ ಎಲ್ಲರನ್ನೂ ತೀರದ ಬಯಕೆಯಿಂದಲೆ, ಕೈಗೂಡದ ಎಟುಕದ ಮೋಹ ದಿಂದಲೆ ಕಟ್ಟಿ ಆಳುತ್ತಿದ್ದ, ಎಂದೂ ಬತ್ತದ ಉಬ್ಬು ನೆರೆಯ ಆ ಚೆಲುವೆ ಊರ್ವಶಿಗೆ ಅರ್ಜುನನ ತಿರಸ್ಕಾರ ಮೊಟ್ಟಮೊದಲ, ಬಹುಶಃ ಕಡೆಯ, ಭಿದು ರಾಘಾತವಾಗಿದ್ದಿರಬೇಕು. ಸುಕ್ಕುಗಾಣದ ಅವಳ ರೂಪಕಾಂತಿ ಗರ್ವಕ್ಕೆ ಸುಕ್ಕುತಂದಿತೇನೊ ಅದು.

ಕುಮಾರವ್ಯಾಸ ಅದಕ್ಕೋಸ್ಕರವೇ ಈ ಮಹಾ ಪ್ರಸಂಗಕ್ಕೆ ಮತ್ತೊಂದು ದಿವ್ಯತರ ಪ್ರಸಂಗವನ್ನು ತರಬೇಕಾಯಿತು. ಪ್ರತಿಭಾ ಸೃಷ್ಟಿಯಿಂದಲೂ ಆ ಹಿಂದಿನ ಪ್ರಸಂಗ ಈ ಪ್ರಸಂಗಕ್ಕೆ ಹೊಯ್‌ಕಯ್ಯಾಗಿಯೆ ಇದೆ. ಒಂದರಲ್ಲಿ ವೀರಭಕ್ತಿಯ ಗೆಲುವು, ಮತ್ತೊಂದರಲ್ಲಿ ವೀರ ವಿರಕ್ತಿಯ ದಿಗ್ವಿಜಯ. ಒಂದರ ಗೆಲವು ಸುಸ್ಪಷ್ಟ ವರಪರಂಪರೆಯಾಗಿ ವ್ಯಕ್ತವಾಗಿ ತೋರುತ್ತದೆ ; ಮತ್ತೊಂದೆಡೆ ಶಾಪ ವಾಗಿ ಅದು ತನ್ನ ಅಗ್ನಿ ಪರೀಕ್ಷಕ ಮುದ್ರೆಯನ್ನೊತ್ತಿ, ಪರೀಕ್ಷಿತನ ವಿಜಯವನ್ನು ಸಾರಿಹೋಗುತ್ತದೆ.

ಇಂದ್ರಕೀಲದಲ್ಲಿ ಅರ್ಜುನ ಗೌರೀವರನ ಕೃಪಾದರ್ಶನ ಪಡೆದನಂತರ ತಾನು ಮುಂದೇನುಮಾಡಬೇಕೆಂದು ಆ ಕೃಪಾಳುವಿನ ದಿಗ್ದರ್ಶನವನ್ನೆ ಪಡೆಯುತ್ತಾನೆ.[2]

ಸರಳ ಸಾಂಗೋಪಾಂಗವನು ನಿನಗಱುಹಿದೆನು, ನೀನಿನ್ನು ಶಕ್ರನ
ಪುರಕೆ ನಡೆ, ನಿನ್ನುತ್ತರೋತ್ತರ ಕಾರ್ಯಗತಿಗಳಿಗೆ
ಹರಿ ಸಹಾಯನು, ನಮ್ಮ ಸತ್ವದ ಪರಮರೂಪಾತನು ಕಣಾ ನೀ
ನಱುದಿರೆಂದು ಮಹೇಶ ಬೀಳ್ಕೊಟ್ಟನು ಧನಂಜಯನ-೩.೬.೧೦೮.೧೭೯

ವಿಶ್ವೇಶ್ವರನಿಗೆ ತನ್ನ ಆಜ್ಞಾಪನೆಯ ಉದ್ದೇಶ ತಿಳಿದಿಲ್ಲದೆ ಇರುವುದು ಸುಳ್ಳು. ತಾನೆ ಹೋಗೆಂದು ಹೇಳಿದ ಮೇಲೆ ಯಾವ ಅಪಾಯವನ್ನು ತಾನೆ ಬರಗೊಡು

ತ್ತಾನೆ? ಜತೆಗೆ ಬೇರೆ, ತನ್ನ ಸತ್ತ್ವದ ಪರಮರೂಪಾದ ಹರಿ ಅವನ ಎಲ್ಲಾ ಉತ್ತರೋತ್ತರ ಕಾರ್ಯಕ್ಕೂ ಸಹಾಯನಾಗಿದ್ದಾನೆ. ಹೀಗೆಂದು ಹೇಳಿ ನುರಿಯಾದ ಶಿವಶಿವೆಯರನ್ನು ನೆನೆದು ಹಂಬಲಿಸುತ್ತಾನೆ ಅರ್ಜುನ.

ಮರುಳ ದೇವಾರ್ಚನೆಯೊ, ಕನಸಿನ ಸಿರಿಯೋ, ಶಿಶುವಿನ ಕೈಯ ರತ್ನವೊ
ಹರಿಯ ಹೂಮಾಲೆಯೊ ಮದೀಯ ವಿವೇಕ ವಿಭ್ರಮವೊ
ಹರನನೀ ಚರ್ಮಾಕ್ಷಿಯಲಿ ಗೋಚರಿಸೆ ಬೇಡಿದುದಂಬು ಮರ್ತ್ಯದೊ
ಳಿರವು ಮರ್ಝು ಭಾಪೆನ್ನ ಪುಣ್ಯ! ಎನುತ್ತ ಬಿಸುಸುಯ್ದ.[3]

ದೇವರದೇವನಾದವನು, ಬೆಳಕಿಗೆ ಬೆಳಕೆರೆಯುವ ಪರಂಜ್ಯೋತಿಸ್ವರೂಪನು ಬಂದು ತನ್ನ ಚರ್ಮಾಕ್ಷಿಗೆ ಕಾಣಿಸಿಕೊಂಡರೆ ತಾ ಬೇಡಿದುದಾದರೂ ಏನು, ಬಾಣ! ಅಯ್ಯೋ ಮರ್ತ್ಯಬುದ್ಧಿಯೆ, ಎಂದು ಪರಿತಪಿಸುತ್ತಾನೆ. ಯಾವುದು ಪಾರ್ಥಿವ ದೃಷ್ಟಿಯಿಂದ ಅಸಾಧಾರಣವಾದುದೊ ಅದೂ ಅವನಿಗೆ ತುಚ್ಛವಾಯಿತು; ಮೋಕ್ಷದಾಯಿಯ ಮುಂದೆ ಹುಲು ಬಾಣವನ್ನು ಬೇಡುವಂತಾಯಿತಲ್ಲಾ ಎಂದು ಬೇಸರವಾಯಿತು. ಇಂಥ ಮಹಾದರ್ಶನ ಪರಿಪುಷ್ಟನಾದವನು ದೇವಲೋಕಕ್ಕೆ ಹೋದಾಗ ದಾರಿತಪ್ಪುವುದು ಹೇಗೆ? ಬಿಡುಗಣ್ಣರಾಗಿದ್ದೂ ಆ ದೇವತೆಗಳು ಚಿರಪರಿಚಿತವಾದ ತಮ್ಮ ಲೋಕದ ಕಾಮನ ಬಿಲ್ಲಿನ ದಾರಿಗಳಲ್ಲಿ ಜಾರಿರುವುದುಂಟು. ಆದರೆ ಈ ನಿಮೇಷ ಮರ್ತ್ಯ ಹೇಗೆ ಅಸ್ಖಲಿತಚಿತ್ತನಾಗಿ ಬರುತ್ತಾನೆ ಎಂಬುದಕ್ಕೆ ಇದೂ ಸಾಕ್ಷಿ.

ಇಂತಹವನು ತಪಸ್ಸಿಗೆ ಬರುವ ಮುನ್ನ ಅಣ್ಣ ಧರ್ಮಜ, ಸತಿ ದ್ರೌಪದಿಯಿಂದ ದೊರೆತ ಪ್ರೀತಿಯ ಹಾರೈಕೆಯ ರಕ್ಷೆಯೆಂತಹುದು ನೋಡಿ:

"ಮುಗ್ಗದಿರು ಮಾಯೆಯಲಿ! ಮದದಲಿ ನೆಗ್ಗದಿರು..."
"ಸೋಲದಿರು ಸುರಸತಿಯರಿಗೆ! ಸಮ್ಮೇಳವಾಗದಿರವರೊಡನೆ! ಕೈ
ಮೇಳವಿಸುವುದು ಕಾಮವೈರಿಯ ಚರಣಕಮಲದಲಿ."

— ಕಿ.ಳ.೨೨-೨೧. ೧೬೬

"ನೆನೆಯದಿರು ತನುಸುಖವ! ಮನದಲಿ ನೆನೆ: ವಿರೋಧಿಯ ಸಿರಿಯ, ಎನ್ನಯ
ಘನತರದ ಪರಿಭವವ; ನೆನೆ ನಿಮ್ಮಗ್ರಜರ ನುಡಿಯ;
ಮುನಿವರನ ಮಂತ್ರೋಪದೇಶವ ನೆನೆವುದು ಅಭವನ ಚರಣಕಮಲವ!
ಎನುತ ದುರುಪದಿಯೆಜಿಗಿದಳು ಪಾರ್ಥನ ಪದಾಬ್ಜದಲಿ"— ಕಿ.ಳ.೩೦.೧೬೬

ಅಣ್ಣ, ಸತಿಯರು ಎಚ್ಚರಿಸಿದ್ದಂತೆಯೆ ನಡೆದುಕೊಂಡುಬರಲು ಅರ್ಜುನ ಆಲಿಸಿದ್ದ. ಶಿವನೊಡನೆ ಕೈಮೇಳವೂ ಅಣ್ಣ ಹೇಳಿದಂತೆಯೆ ಆಯಿತು. ಆದರೆ ಯಾವ ದೇವಾಂಗನೆಯೂ ಬಂದು ಬಟ್ಟೆದಪ್ಪಿಸಲು ಇನ್ನೂ ಯತ್ನಿಸಲಿಲ್ಲ.[4] ಸಾಮಾನ್ಯವಾಗಿ ದೇವಾಪ್ಸರೆಯರು ತಪಸ್ಸನ್ನು ಸಿದ್ಧಿಪೂರ್ವದಲ್ಲಿ ಕೆಡಿಸಲು ಬರುವುದುಂಟು. ಹಾಗಾಗಬೇಕಿದ್ದುದು ಇಲ್ಲಿ ಅರ್ಜುನನ ತಪಸ್ಸಿನಲ್ಲಿ ಏಕೊ ಏನೊ ಅದಾವುದೂ ಒದಗಲಿಲ್ಲ. ಅದವನ ಅದೃಷ್ಟವೆ ಸರಿ. ಆದರೆ ಮತ್ತೊಂದು ವಿಧದ ಪರೀಕ್ಷೆ ತಪೋನಂತರದಲ್ಲಿ ಬರುತ್ತದೆ. ಅದು ಸಿದ್ಧಿ ವಿಘ್ನವಾಗಿ ಬಂತೊ, ಸಿದ್ಧಿಪರೀಕ್ಷೆಗೆ ಬಂತೊ ಬೇರೆ ಹೇಳಬೇಕಾಗಿಲ್ಲ.

ಶಿವವಿಯೋಗದಿಂದ ಹಾಗೂ ತನ್ನ ಪಾರ್ಥಿವ ಸ್ವಾರ್ಥೇಚ್ಛೆ ಮಾಡಿದ ಅಲ್ಪ ಪ್ರಾರ್ಥನೆಯಿಂದ ನೊಂದು ಮರುಗುತ್ತಿದ್ದ ಅರ್ಜುನನನ್ನು ಅಭಿನಂದಿಸುವುದಕ್ಕಾಗಿ ಇಳಿದುಬರುತ್ತಾನೆ ದೇವೇಂದ್ರ. ಅವನ ಭಕ್ತಿಯನ್ನು ಹೊಗಳಿ ತನ್ನ ದೇವಲೋಕಕ್ಕೆ ಬಂದು ತಪಸ್ಸಿನಿಂದಾದ ಘಾಸಿಯನ್ನು ನೀಗಿಕೊಳ್ಳೆಂದು ಅರ್ಜುನನಿಗೆ ಕರೆ ನೀಡುತ್ತಾನೆ.

ಕೃತತಪಸ್ಸಿಂ ಭಿನ್ನಖೇದಕ್ಷತ ಶರೀರ ವ್ಯಥೆಯನಮರಾ
ವತಿಯೊಳಗೆ ಕಳೆ, ರಥ ಸಹಿತ ಕಳುಹುವೆನು ಮಾತಲಿಯ.
'ಕ್ರತುಶತದ ಕೈಗಾಣಿಕೆಯ ದೀಕ್ಷಿತರ ಸಿರಿಯಂತರವ ಮನವಾ
ರತೆಯದೆಂತುಟೊ ಕಾಣಬೇಹುದು ಪಾರ್ಥ ನೀನೆಂದ. ೩.೭.೯.೧೮೦

ಪಾರ್ಥನಿಗೆ ತನ್ನ ದೇವಪಿತನ ಮಾತಿನ ಹೂರಣ ತಿಳಿಯಿತೊ ಇಲ್ಲವೊ. ತನಗೆ ಸಹಜವಾದ, ಮೇಲಾಗಿ ದಿವ್ಯಕೃಪಾಭರಿತನಾದ ಮಹಿಮನಿಗೆ ಸಹಜವಾದ, ವಿನಯದಿಂದ ಹೀಗೆ ಹೇಳುತ್ತಾನೆ:

"ಹೈ ! ಹಸಾದವು ! ನೂಱು ಯಜ್ಞದ ಮೇಹುನಾಡನು ಮೆಟ್ಟಲೆವಿಶ್ವಾ
ಹೊಹೆಗಳಿಗಳವಡುವದೆ ! ಒಲ್ಲೆವೆ ನಿಮ್ಮ ಕರುಣದಲಿ.
ಐಹಿಕದಲಾಮುಷ್ಮಿಕದ ಸಂನ್ನಾಹ ಸಂಭವಿಸುವುದೆ ನಿಷ್ಪ್ರ
ತ್ಯೂಹವೆಂದೆಱಗಿದನು ಫಲುಗುಣನಿಂದ್ರಸಂಪ್ರಿಯಲಿ—೩.೭.೧೧.೧೮೦,

ಜೀವಂತವಾಗಿಯೆ ಸ್ವರ್ಗಕ್ಕೆ ಹೋಗುವುದು ಅಪೂರ್ವಸಂಗತಿಯೇನಲ್ಲ. ತಂದೆ ದೇವೇಂದ್ರನ ಕರುಣೆಯಿಂದ ಅರ್ಜುನನಿಗೆ ಐಹಿಕದಲ್ಲೆ ಆಮುಷ್ಮಿಕದ ಸನ್ನಾಹ ಸಂಭವಾಗುವುದಾದರೆ, ನಿಷ್ಪ್ರತ್ಯೂಹವೆ ಸರಿ. ಆದರೆ ಹಾಗಾಗುವುದ

ರಿಂದ, ಅಂದರೆ ಭೂಮಿಯಲ್ಲಿನ್ನೂ ಜೀವಂತನಾಗಿದ್ದು ದೇವಲೋಕಕ್ಕೆ ಸದೇಹಿಯಾಗಿ ಹೋಗಿ ಬರಲು ಹೊರಟಾಗ, ಜೀವಿಗೆ ಒಮ್ಮೊಮ್ಮೆ ಕೈ ಸಿಡುವುದೂ ಉಂಟು. ಅದಕ್ಕೆ ಊರ್ವಶೀ ಶಾಪಗ್ರಸ್ತನಾದ ಅರ್ಜುನನೆ ಸಾಕ್ಷಿ. ಅದನ್ನು ಮುಂದೆ ನೋಡೋಣ. ಈಗ ದೇವೇಂದ್ರ ಸೂತ ಇಳಿದುಬರುತ್ತಾನೆ, ಅರ್ಜುನನನ್ನು ಕರೆದೊಯ್ಯಲು. ಅವನ ದೃಷ್ಟಿಯಲ್ಲಿ ಅರ್ಜುನ ಮಹಿಮನಾದರೂ ಅಮರಪುರಿಯ ವೈಭವವೆ ಅವನಿಗೆ ದೊಡ್ಡದೆಂಬಂತೆ ತೋರುತ್ತದೆ. ಅದಕ್ಕಾಗಿಯೆ ಏನೊ, "ಎಂಥ ಪುಣ್ಯಾವಯ್ಯ ನಿನ್ನದು, ಅಂಥ ಸ್ವರ್ಗಕ್ಕೆ ನೀನು ಬರೋಹಾಗಾದಲ್ಲ" ಎಂಬ ಧ್ವನಿಬರುವಂತೆ ಮಾತನಾಡುತ್ತಾನೆ. ದೇವೇಂದ್ರನಾದರೊ ತನ್ನ ನಗರದ ವೈಭವವನ್ನು ಅರ್ಜುನನ ಮನೋರಂಜನೆಗೆ ಮೀಸಲಾಗಿ ನೀಡಿರುತ್ತಾನೆ,-ಅವನು ಶಿವಕಟಾಕ್ಷಸ್ನಾತನೆಂದು, ಹಾಗೂ ತನ್ನ ವರಪುತ್ರನೆಂದು. ಸಹಜವಾಗಿಯೆ ಸೂತನ ದೃಷ್ಟಿ ಸ್ವಲ್ಪ ಭಿನ್ನ ;

> "ಏಳು ಫಲುಗುಣ ! ಹರಿ ವರೂಥದ ಮೇಲೆ ಬಿಜಯಂಗೈವ ಬಹಳ ಫ
> ಲಾಳಿಯಿದೆಲಾ ! ನಿನ್ನ ಪುಣ್ಯದ್ರುಮದ ಬೇಙಿಸೊಡೆದು !
> ಸಾಲಕುಜಿಪದಚಿಹಿಗಳ, ಕರ್ಮದ ಕೂಲಿಗರ, ಜಡ ಜಂಝು ಪೂಗರ
> ಜಾಲ ಸಿರಿಯನಿಮಿಷರ ಪುರಿ ವಶವಾಯ್ತು ನಿನಗೆ" ಎಂದ

ದೇವೇಂದ್ರ ಸಾರಥಿಗೆ ಈ ಅರ್ಜುನ ತನ್ನ ಸ್ವಾಮಿಯ ರಥವೇರುವಂತಹ ಪುಣ್ಯ ಪಡೆದನಲ್ಲಾ, ಎಂದು ಆಶ್ಚರ್ಯ. ಅವನ ದೃಷ್ಟಿಯಲ್ಲಿ ಮರ್ತ್ಯರಿಗೆ ದೇವಲೋಕದರ್ಶನ ದುರ್ಲಭ. ಅಂತಿರುವಾಗ ತನ್ನ ಸಾರಥ್ಯ ಪಡೆದು ದೇವೇಂದ್ರ ವರೂಥವನ್ನಡರುವುದಂತೂ ಅತ್ಯಪೂರ್ವವೆ. **'ಸಾಲುಕುಜ್ಜಪದಚಿಹಿಗಳು,' 'ಕರ್ಮದ ಕೂಲಿಗರು'** ಎಂದು ನಮ್ಮ ರಾಜರಾಜರನ್ನು ರಾಜಸೂಯಾಧ್ವರ್ಯುಗಳನ್ನು ಸಂಬೋಧಿಸುತ್ತಾನೆ. ಅಂದಮೇಲೆ ಸಾಧಾರಣ ಮರ್ತ್ಯರು ಅವನಿಗೆ ಅಂಥ ಗಮನಾರ್ಹರೇನೂ ಅಲ್ಲ. ಹೀಗೆ ಹೇಳಿದ ಅವನಿಗೆ ಅರ್ಜುನ ಕೊಡುವ ಉತ್ತರ ನೋಡಿ :

> "ಬಲ್ಲರಾರದನು ! ಅಶ್ವಮೇಧದ ಮಲ್ಲರನು ಕೃತರಾಜಸೂಯರು
> ಬಲ್ಲರೇ ? ಕಡೆಬೀಡ ಕೋಟೆಯ ಗುಡಿಯ ಚೊಡ್ಡಿಯರ ?
> ಎಲ್ಲಿ ಅಮರಾವತಿ ! ನರಾಧಮರೆಲ್ಲಿ ! ನಾವೀಶ್ವರನ ಕರುಣದ
> ಭುಲ್ಲವಣೆಯಲಿ ಭಾಗ್ಯ !" ಎಂದನು ನಗುತ ಕಲಿಪಾರ್ಥ

ಆವನ ನಗೆ ಅರ್ಥಪೂರ್ಣವಾಗಿಯೇ ಇದೆ. ಕೃತರಾಜಸೂಯರು ಅಶ್ವಮೇಧದ ಮಲ್ಲರನ್ನು, ಆ ದೇವಲೋಕದ ಕೋಟಿಯ ಕಡೆಬೀಡ ಗುಡಿಯ ಬೊಡ್ಡಿಯ ರನ್ನೂ ಹೇಗೆ ತಾನೆ ಕಾಣಬಲ್ಲರು. ಬಹುಶಃ ಮಾತಲಿಯ ಘೋರಣೆಗೆ ಇವನ ಮಾತು ಅರ್ಥವ್ಯಂಗ್ಯವಾಗಿರಬಹುದು. ಆದರೂ, ಹೀಗೆಂದವನೂ ಕೂಡ ದೇವ ಲೋಕದ ಮಹಾಭೋಗ ರಮಣಿಯಾದ ಆ ಊರ್ವಶಿಯನ್ನು ಹೇಗೆ ತಲೆ ಯೆತ್ತಿಯೂ ನೋಡದೆ ನಿವಾರಿಸುತ್ತಾನೆ ? ಅವನೆ ಹೇಳುತ್ತಾನೆ "ನಾವೀಶ್ವರನ ಕರುಣದ ಭುಲ್ಲವಣೆಯಲಿ ಭಾಗ್ಯ" ಎಂದು.

ಈಗ ಇನ್ನೇನು ದೇವೇಂದ್ರರಥವೇರಿ ಸ್ವರ್ಗಾಭಿಮುಖಿಯಾಗಿ ಅರ್ಜುನ ಹೊರಡಬೇಕು. ಅವನ ಹೃದಯಸ್ಪರ್ಶಿಯಾದ ಪ್ರಾರ್ಥನೆಯನ್ನು ಕೇಳಿ :

> ಎನುತ, ತೇರಿನೊಳೊಂದು ಕಾಲಿಟ್ಟನು ಧನಂಜಯ ; ಇಂದ್ರಕೀಲದ
> ವನಕೆ ಕೈಮುಗಿದೆಱಗಿದನು ಮಧುರ ವಚನದಲಿ :
> "ಮುನಿಜನವೆ । ಪರ್ವತವೆ ! ಪಂಕಜ ವನವೆ ! ತರು ಲತೆ ಗುಲ್ಮ ಖಗ ಮೃಗ
> ವನಚರವೆ ! ನಾ ಹೋಗಿ ಬಹೆನೇ ನಿಮ್ಮನುಜ್ಞೆಯಲಿ" [5]

ತನ್ನ ತಪಸ್ಸಿಗೆ ಭಂಗ ತಾರದೆ ಶಿವಸಾಕ್ಷಾತ್ಕಾರ ಕೊಡಿಸಿಕೊಟ್ಟ ಆ ಪವಿತ್ರ ಭೂಮಿಯನ್ನು ಬೀಳ್ಕೊಡುವುದು ಅವನಿಗೂ ಕಷ್ಟ. ಅಲ್ಲಿನ ವನಚರವೂ ಪ್ರಿಯ ವಾಗಿತ್ತು ; ಅವುಗಳ ಅಗಲಿಕೆಯಂತೂ ಕರ ಕಷ್ಟ. ದೇವಲೋಕಕ್ಕೆ ಹೋಗು ತ್ತಿರುವೆನಲ್ಲ ಎಂಬ ಉಬ್ಬಿನಿಂದ ಕೊಬ್ಬಿ ಮೈಮರೆತಿಲ್ಲ ಅವನು. ಶಿವದರ್ಶನ ಪಡೆದ ಕಣ್ಣಿಗೆ ದೇವಲೋಕದ ವೈಭವ ಮತ್ತನ್ನು ತಾರದಾಗಿದೆ. ಆದ್ದರಿಂದಲೆ ಅವರೆಲ್ಲರ ಅನುಜ್ಞೆಯನ್ನು ಬೇಡಿ **'ಹೋಗಿ ಬರುವಂತೆ'** ಹರಸಿರೆಂದು ಕೇಳಿ ಕೊಳ್ಳುತ್ತಾನೆ. 'ಹೋಗಿ ಬಾ' ಎಂದು ಶಿವನೆ ಅಜ್ಞಾಪಿಸಿದ್ದ ; ಈ ಪುಣ್ಯಸ್ನೇಹಿ ತರೂ ಹರಸಿದಮೇಲೆ ಇನ್ನೇನು ಭೀತಿ. ಹೀಗೆ ಎಲ್ಲರ ಹರಕೆ ಹೊತ್ತು ಪಾಶು ಪತವೆ ಮೊದಲಾದ ದಿವ್ಯಾಸ್ತ್ರಗಳನ್ನು ಪೊತ್ತು ಶಿವ ಗಿರಿಜಾ ಗಣಪರ ಕೃಪಾ ಶಕ್ತಿಯನ್ನು ಧರಿಸಿ, ಆದರೂ ಅವಾವುದರಿಂದಲೂ ತಲೆ ತಿರುಗದೆ ನಮ್ರನಾಗಿಯೆ ದೇವಲೋಕಕ್ಕೆ ಹೊರಡುತ್ತಾನೆ. ಕುಮಾರವ್ಯಾಸ ಅರ್ಜುನನ ಮತ್ತೊಂದು ಮಹಾವಿಜಯಕ್ಕೆ ಇಂಥ ಹಿನ್ನೆಲೆ ನೆಯ್ದಿದ್ದಾನೆ !

ಇದಲ್ಲದೆಯೆ ಮತ್ತೊಂದು ಧ್ವನಿಪೂರ್ವಕವಾದ ಸಿದ್ಧತೆಯನ್ನು ಮಾಡು ತ್ತಾನೆ ಕವಿ. ಅದು ಮಾತಲಿಯೊಡನೆ ಅರ್ಜುನ ಅಂತರಿಕ್ಷಯಾನ ಮಾಡುತ್ತ,

ತನಗೆ ಅವನು ತೋರಿಸುತ್ತಾ ವರ್ಣಿಸುವ ಲೋಕ ಲೋಕಾಂತರಗಳನ್ನೆಲ್ಲ ದರ್ಶಿಸಿ ಸ್ವರ್ಗಾಭಿಮುಖವಾಗಿ ಹೋಗುವ ಚಿತ್ರ. ಪಾತಾಲ ರಸಾತಲವೇ ಮೊದಲಾದ ಹದಿನಾಲ್ಕು ಲೋಕಗಳನ್ನೆಲ್ಲ, ಸಪ್ತರ್ಷಿಮಂಡಲವೆ ಮುಂತಾದ ನಕ್ಷತ್ರ ಲೋಕಗಳನ್ನೆಲ್ಲ, ದಿಕ್ಪಾಲಕರಿಂದ ಹಿಡಿದು ಕ್ಷೀರಸಾಗರಶಾಯಿಯ ತನಕ, ಸೃಷ್ಟಿಸ್ಥಿತಿ ಸಂಬಂಧ ಶಕ್ತರನ್ನೆಲ್ಲ; ಹಾಗೂ ಸ್ವಪುಣ್ಯ ಫಲವಾಗಿ, ಯಜ್ಞ ಸಂಬಂಧ ಫಲದಿಂದ, ಮೇಲಡರುತ್ತಿರುವ ಮರ್ತ್ಯಾತ್ಮರನ್ನೂ, "ಇಂದ್ರಿಯ ವಿಜಯಿ" ಗಳೆ ಮುಂತಾದ ದಿವ್ಯಚೇತಸರನ್ನೂ ಮಾತಲಿ ಅರ್ಜುನನಿಗೆ ತೋರಿಸುತ್ತಾ ಹೋಗುತ್ತಾನೆ. ಕವಿ ದೀರ್ಘವಾಗಿಯೆ ಈ ಚಿತ್ರವನ್ನು, ಬೇಸರ ತರುವಂತಾದರೂ, ಸುಮಾರು ೬೦ ಪದ್ಯಗಳಿಗೂ ಮೇಲಾಗಿ ವರ್ಣಿಸಿದ್ದಾನೆ. ಹೀಗೆ ಸವಿಸ್ಮಯನಾಗಿ ಅರ್ಜುನ ಭಿನ್ನ ಭಿನ್ನ ಲೋಕದರ್ಶನವನ್ನು, ದಿವ್ಯಜೀವಿ ಸಂದರ್ಶನವನ್ನು ಮಾಡುತ್ತ ಅಮರೇಂದ್ರನ ಭೋಗಪುರಿಗೆ ಹೋಗುತ್ತಾನೆ. ಶಿವದರ್ಶನವಾದ ಮೇಲೆ ಅವನಿಗಾಧ ದರ್ಶನವೆಂತಹುದು ನೋಡಿ. ಈ ಎಲ್ಲ ಪೂರ್ವಸಿದ್ಧತೆಯನ್ನೂ ಸಿದ್ಧಿಯನ್ನೂ ಪಡೆದ ಅರ್ಜುನ ಅಮರ್ತ್ಯಪುರಿಯಲ್ಲಿ ಕಾಲಿಡುತ್ತಾನೆ. ಇಲ್ಲದಿದ್ದರೆ ಆ ಅನಿಮೇಷಪುರಿಯಲ್ಲಿ ಈ ನಿಮೇಷನಿಗೆ ಕಾಲು ಜಾರುವುದು ಕಷ್ಟವಿರಲಿಲ್ಲ.

ಅಮರಾವತಿಯನ್ನು ಮುಟ್ಟಿದ ಅರ್ಜುನನನ್ನು ದೇವೇಂದ್ರನರಮನೆಗೆ ಕರೆದೊಯ್ಯುವುದು 'ಲಾವಣ್ಯಲಹರಿಯ ಸೊಕ್ಕುಗಳ ಸುರಸೂಳೆಗೇರಿಗಳೊಳಗೆ!' ಮಗನನ್ನು, ಪಾಶುಪತ ಶ್ರೀಮಂತನನ್ನು ಎದುರುಗೊಂಡು ಕೈಕುಲಕಿ ('ಕರದಲಿ ತುಳುಕಿ ಕರವನು') ಬಿಗಿದಪ್ಪಿಕೊಂಡು ತನ್ನ ಗದ್ದುಗೆಯ ಮೇಲಕ್ಕೊಯ್ದು ತನ್ನ ಪಕ್ಕದಲ್ಲಿ ಕೂರಿಸಿಕೊಳ್ಳುತ್ತಾನೆ ದೇವರಾಜ. ನೂರು ಯಜ್ಞದ ವಿಭವದ ಅರಸರಿಗೆ ಮಾತ್ರ ಮಾರುವ ಆ ಸಿಂಹಾಸನವನ್ನು ಇಂದು ಏನಿಲ್ಲದೆಯೆ ಅರ್ಜುನ ಗೆಲ್ಲುತ್ತಾನೆ. ದೇವತೆಗಳಿಗೆ ಅಚ್ಚರಿ: 'ಈ ನುಸಿಗಳು! ಈ ಮರ್ತ್ಯರು ಎಂಬವರು ಒಸಗೆಯ ಅಮರಾವತಿಯಲ್ಲಿ ಸನ್ಮಾನಗೊಳ್ಳುವುದೆಂದರೇನು! ಎಂತಹ ಅಪೂರ್ವ ಘಟನೆ ನಡೆದಿದೆ' ಎಂದು ಮುಂದೆ ಇನ್ನೂ ಅಪೂರ್ವವಾದುದು ನಡೆಯಲಿದೆ ಎಂಬುದಕ್ಕಿದು ಮುನ್ನುಡಿಯಾಗಿದೆ ಎಂದರಿಯದೆ ಮಸುಗಳೆಲ್ಲ ಮಹಾಶ್ಚರ್ಯದಿಂದ ನೆರೆಯುತ್ತಾರೆ. ಅಂದಿನ ವೈಭವೋತ್ಸವಕ್ಕೆ ಸಾಮಾನ್ಯ ದೇವತೆಗಳಿಗೆ ಆಹ್ವಾನವಿಲ್ಲ, ಅವಕಾಶವೂ ಇಲ್ಲ.

"ನೂಕು : ಬಾಗಿಲ ಚಾಚು ! ಜಣಗು ದಿವೌಕಸರ ನಿಲಿಸು ! ಅಲ್ಪ ಪುಣ್ಯರ
ನೇಕೆ ಹೊಗಿಸಿದೆ ? ಬಹಳ ದಾನ ತಪೋ ವಿವರ್ಜಿತರ !
ಓಕುಳಿಯ ನೆವದಿಂದ ತೆಕ್ಕೆಯ ಬಾಕುಳಿಗಳುರವಣಿಸಿತೇ, ತವ
ಗೇಕೆ ರಂಭಾದಿಗಳ ಸೋಂಕು !" ಎಂದುದು ಸುರಸ್ತೋಮ.

ರಂಭಾದಿಗಳ ಸೋಂಕು, ಅದಿರಲಿ ಬರಿ ನೋಟ, ಎಲ್ಲ ದೇವತೆಗಳಿಗೂ ಇಲ್ಲ. ಪಾಪ ಆ ಬಡದೇವತೆಗಳು ತಮ್ಮ ನೆಲದವಳೆ ಆದ ಊರ್ವಶಿಯನ್ನು ಓಕುಳಿಯ ನೆವದಿಂದಲಾದರೂ ಕಾಣುವ, ಕಣ್ಣೊಳಗೆ ಕೂಡುವ ಅಪ್ಪುವ ವ್ಯಾಕುಲ ಸುತ್ತಿಕೊಂಡವರಾಗಿದ್ದರು. ತೆಕ್ಕೆಯ ಬಾಕುಳಿಗಳು ಎಂದರೆ ಆಲಿಂಗನ ವ್ಯಾಕುಲರು ಎಂದೂ, ಸುರುಳಿಗೊಂಡಿದ್ದ ಬಯಕೆ ಉಳ್ಳವರು ಎಂದೂ ಅರ್ಥ. ಅಂಥವರೆಲ್ಲ ಹಂಬಲಿಸಿ ಕಾದಿರುವಾಗ ಅಂಥ ಸುಂದರೀ ಕದಂಬವೇ ಬಂದು ವರ್ಣರಂಜಿತ ಪರಿಮಳೋಜ್ವಲ ಸುಂದರ ಸುರನರ್ತನವನ್ನು ಪ್ರದರ್ಶಿಸುತ್ತದೆ ಅರ್ಜುನನ ಮುಂದೆ. ಅವರ ಗಾನರಸದಲ್ಲಿ ಆ ಅಮರಾಸ್ಥಾನವೇ ಮುಳುಗಿ ಹೋಯಿತಂತೆ. ಆದರೆ

ಈ ಅಮಾನುಷ ನೃತ್ಯ ವಾದ್ಯ ಸುಗೇಯ ರಸದಲಿ ಮುಳುಗಿ, ಕರಣದ
ಲಾಯ ತೊಡಕದೆ ಪಾರ್ಥನಿದ್ದನು ಧೈರ್ಯಶಿಖರದಲಿ !

ದೇವತೆಗಳು ತಮ್ಮ ನಾಡಿನ ಸೌಂದರ್ಯವನ್ನು ಕಂಡೇ ಕರಗಿ ಮುಳುಗಿ ಹೋಗುತ್ತಾರೆ. ಈ ಮರ್ತ್ಯ–ಅಂದು ಆ ಬಾಲೆ ಸುಭದ್ರೆಯನ್ನು ಸಂನ್ಯಾಸಿ ಯಾಗಿದ್ದಂದು ಕಂಡೆ ಕರಗಿಹೋದ, ಈ ಭಾರತ–ಇಲ್ಲಿ ಅಪ್ಸರೆಯರ ನೃತ್ಯ ಗಾನರಸ ಪ್ರವಾಹದಲ್ಲಿ ಮುಳುಗದೆ, ಅಲ್ಲ, ಮುಳುಗಿಯೂ ಕರಣದ ಲಾಯ ತೊಡಕದೆ ಧೈರ್ಯಶಿಖರದಲ್ಲಿ ಮಂಡಿತನಾಗಿರುತ್ತಾನೆ, ಅಡಿಯಲ್ಲಿ ಅಪ್ಪಳಿಸುವ ಯಾವ ಅಲೆಯೂ ತನ್ನನ್ನು ತಾಕದಂತೆ. ಹಾಗಿದ್ದು ರಸಾನುಭವ ವಿಸ್ಮಯ ವನ್ನು ಮಾತ್ರ ಪಡೆಯುತ್ತಾನೆ :

"ಈ ಯುವತಿ ತಾನಾವಳೋ ! ಕುಸುಮಾಯುಧನ ಖಂಡಯವಲಾ ! ಮಝು !
ಮಾಯೆ !" ಎನುತ ಊರ್ವಶಿಯನೆವೆಯಿಕ್ಕದೆ ನಿರೀಕ್ಷಿಸಿದ.

ಸುಂದರಿ ಆಕೆ ; ಶೃಂಗಾರ ಖಡ್ಗ ; ಪ್ರೇಕ್ಷಣೀಯೆ ; ಆದರೆ ಮಾಯೆ. ಅರ್ಜುನ ಸೌಂದರ್ಯಕ್ಕೆ ಕಣ್ಣುಮುಚ್ಚುವ ಮೂಢನಾಗಿರಲಿಲ್ಲ. ಅಂತೆಯೆ ಅವನ್ನು ಮುಟ್ಟಹೋದರೆ ಮಾಯೆಯಾದೀತು ; ಆದ್ದರಿಂದ ಅದನ್ನು 'ಭವ

ದೂರಸ್ಥಿತಿ'ಯಿಂದಲೆ ನೋಡಿ ನಲಿಯಬೇಕು ಎಂದೂ, ಅರಿತಿದ್ದ. ಆದರೆ ಅರ್ಜುನನ ರಸವಿಸ್ಮಯ ದೃಷ್ಟಿ ಭೋಗೀಂದ್ರ ದೇವೇಂದ್ರನಿಗೆ ಭೋಗಾಭಿಲಾಷೆ ಯಾಗಿ ತೋರಿತು. ಅದು ಸಹಜವೂ ಹೌದು. ಓಲಗ ಹರಿಯುತ್ತದೆ :

> ಸುರಪನಿತ್ತಲು ಚಿತ್ರಸೇನನ ಕರೆಸಿದನು ; ಫಲುಗುಣನ ಭಾವವ
> ನಱುಹಿದನು, 'ನಮ್ಮೂರ್ವಶಿಯ ಕಳುಹ !' ಎಂದು ನೇಮಿಸಿದ.

ಒಂದೆ ದೃಷ್ಟಿ ಅವನ ದೃಷ್ಟಿಗೆ ಹೇಗೆ ಕಾಣಿಸಿತು ! ಅವನು ಫಲುಗುಣನ ಭಾವವನ್ನು ತಿಳಿದನಂತೆ! ಆದರೆ ಅದು ತನ್ನ ಭಾವವಾಗಿತ್ತಷ್ಟೆ. ತನ್ನ ಔರಸನು ತನ್ನ ಮಾನಸನೆ ಎಂದೊ, ಭೋಗಭೂಮಿಯಲ್ಲಿ ಯಾವ ವಿಸ್ಮಯಾನುಭವವೂ ಭೋಗಾಭಿಮುಖವಾದದ್ದೆ ಎಂದುಕೊಂಡೊ ಏನೊ ಆ ಇಂದ್ರ ಹಾಗೆ ಹೇಳುತ್ತಾನೆ.

ಇನ್ನು ಮೇಲೆ ರಮ್ಯಭಯಂಕರ ದೃಶ್ಯ ಪ್ರಾರಂಭವಾಗುತ್ತದೆ. ಚಿತ್ರಸೇನನಿಗೆ ಲಜ್ಜೆ. ಊರ್ವಶಿಯ ಹತ್ತಿರವೂ ಲಜ್ಜೆ! ಆಕೆಗೆ ಗೊತ್ತು ಅಂತಹ ಲಜ್ಜೆಯ ಉದ್ದೇಶವೇನಿದ್ದೀತೆಂದು. ಆದ್ದರಿಂದಲೆ

> "ಅಣಕವಲ್ಲಿದು ? ರಾಯನಟ್ಟಿದ ಮಣಿಹವೊ, ನಿಜಕಾರ್ಯಗತಿಗಳ
> ಕುಣಿಕೆಯೋ ? ಕರ್ತವ್ಯವಾವುದು ನಿಮಗೆ ನಮ್ಮಲ್ಲಿ ?
> ಗುಣಭರಿತ, ಹೇಳು!"

ಎಂದು ತಾನೇ ಪ್ರಸ್ತಾಪಿಸುತ್ತಾಳೆ. ಆತ ನಸುನಗೆ ಕುಣಿಯೆ ಮುಖದಲಿ, ಮಾನಿನಿಗೆ ವೆಂಟಣಿಸಿ ಲಜ್ಜಾಭರದಿ ನುಡಿದ—ಅರ್ಥಗಂಭೀರವಾಗಿ, ಅರ್ಥ ತಮಗೆ ಸಹಜವಾದ ವ್ಯವಹಾರ ಭಾಷೆಯಲ್ಲಿ :

> "'ಎಮಗೆ ಮಗನರ್ಜುನನು, ನೀನೆಂಬೆಮಗೆ ಸೊಸೆಯಹುದು ! ಆತನಂತ
> ಸ್ತಿಮಿರವನು ಕಳೆ, ನಿನ್ನ ಕುಚಯುಗ ಕಾಂತಿ ಲಹರಿಯಲಿ !
> ಕಮಲಮುಖಿ ! ನೀ ಕಮಲ, ಆತನು ಭ್ರಮರ ! ನೀ ಸುರವನದ ಸಿರಿ! ಮಧು
> ಸಮಯ ಅರ್ಜುನ'—ಎಂದು ಬೆಸಸಿದನಮರಪತಿ"ಯೆಂದ.

ಇದನ್ನು ಕೇಳಿದಾಗ ಅವಳ ಹೃದಯದಲ್ಲಿ ಏನೆಲ್ಲ ಭಾವಗಳು ಮೂಡಿದವು, ಕವಿಯನ್ನೆ ಕೇಳಿ :

> ಕೇಳುತವೆ ರೋಮಾಂಚ-ಲಜ್ಜೆಯ ಜೋಳಿಯೆದ್ದುದು, ಝೋಂಪಿಸಿತು ಪುಳ
> ಕಾಳಿ, ಭಯವನು ಪಂಟಿಸಿದುದು ಅಸುರಾಗದಭಿಮಾನ ;

ಮೇಲೆ ಮೇಲಭಿಲಾಷೆ ಧೈರ್ಯವ ಚಾಳವಿಸೆ, ಪರಿತೋಷ ಪೂರಣ
ದೇಳುಮುಳುಗಾಯುತ್ತರಕೆ ನಸುಬಾಗಿದಳು ಶಿರವ.

ಮೊದಲು ರೋಮಾಂಚ, ಲಜ್ಜೆ, ಪುಳಕಾಳಿ ; ಜೊತೆಯಲ್ಲಿ ಸಹಜಭಯ; ಆ ಭಯವನ್ನು ತಲೆಕೆಳಗುಮಾಡಿದ ಅನುರಾಗದ ಅಭಿಮಾನ; ಧೈರ್ಯವನ್ನೆಲ್ಲಾ ತಲ್ಲಣಗೊಳಿಸುವ ಮೇಲುಕ್ಕುವ ಅಭಿಲಾಷೆ. ಇಂತಹ ಪರಿತೋಷಪೂರಣದ ಏಳುಮುಳುಗಿನಲ್ಲಿ ಉತ್ತರಕ್ಕೆ ನಸುಬಾಗಿದಳಂತೆ ಊರ್ವಶಿ. ಎಂತಹ ಸಂಕೀರ್ಣ ಭಾವಚಿತ್ರಣ. ಅದಿರಲಿ, ಆ ಊರ್ವಶಿಗೂ ನಾಚಿಕೆಯೇ ? ಮರ್ತ್ಯಮುಗ್ಧ ವಧೂಸಹಜವಾದ ಆ ಲಜ್ಜೆ, ಅರೋಚಿ ವಿದಗ್ಧ ದೇವಾಂಗನೆಗೆ ಬಂದುದು ಅಪೂರ್ವ ಸುಯೋಗವೆ ಸರಿ. ಸಹಜವಾಗಿದ್ದಿರಬೇಕಾದ ರೂಪ ಮದವಂದು ಲಜ್ಜೆಗೆ ಎಡೆಗೊಟ್ಟಿದೆ. ಅವಳಿಗಾದ ಅರ್ಜುನ ಮೋಹದ ದುರ್ದಮ್ಯತೆಗೆ ಇದೆ ಸಾಕ್ಷಿ.

ಅವಳ ಲಜ್ಜಾತಿಶಯವನ್ನೂ ಮಾತಿಲಿತನವನ್ನೂ ನೋಡಿ ಚಿತ್ರಸೇನ ಮತ್ತೇನನ್ನೊ ಊಹಿಸಿಕೊಳ್ಳುತ್ತಾನೆ. ಆದ್ದರಿಂದಲೆ

"ಆತನುತ್ತಮ ನಾಯಕನು ! ವಿಖ್ಯಾತೆ ನೀ ! ಸುರಲೋಕದಲಿ ಲ
ಜ್ಜಾತಿಶಯವೇಕೆ ? ಇಲ್ಲಿ ನಾವೇ ನಿಮ್ಮ ಪರಿವಾರ !
ಸೋತಡೆಯು ದಿಟ ಭಂಗವಲ್ಲ, ಪುರಾತನದ ನಳ ನಹುಷ ಭರತ ಯ
ಯಾತಿ ನೃಪರೊಳಗೀತನಗ್ಗಳನಬಲೆ, ಕೇಳು !" ಎಂದ.

'ಮರ್ತ್ಯನಾದ ಆ ಅರ್ಜುನನೊಡನೆ ತನ್ನ ಪ್ರಣಯವೆ' ಎಂದೆಲ್ಲೊ ಆಕೆ ಭಾವಿಸಿರಬೇಕೆಂದುಕೊಂಡು 'ಆತನುತ್ತಮನಾಯಕನು,' 'ಪುರಾತನದ ನಳ ನಹುಷ ಭರತ ಯಯಾತಿ ನೃಪರೊಳಗೀತನಗ್ಗಳನು,' 'ಸೋತಡೆಯು ದಿಟ ಭಂಗವಲ್ಲ' ಎಂದು ಚಿತ್ರಸೇನ ಸಮಾಧಾನಪಡಿಸಬೇಕಾಗುತ್ತದೆ. ತನ್ನ ಮನದ ಉಬ್ಬನ್ನು ಅವಳು ಹೇಳಿದೆಯೆ ಗಂಭೀರವಾಗಿಯೆ :

"ಠಾಯನಟ್ಟಿದ ನೇಮ ಗಡ ! ಕಮನೀಯವಲ್ಲಾ ನಿನ್ನ ನುಡಿ ! ರಮ
ಣೀಯತರವಿದು ನಿನ್ನ ರಚನೆ ! ಮಹಾನುಭಾವನಲೆ !
ಆಯಿತಿದು, ನೀ ಹೋಗು !"

ಎನ್ನುತ್ತಾಳೆ. 'ಹ್ಣ ! ಆಗಲಿ ; ರಾಜನ ನೇಮ,' ಎಂದು ತನ್ನ ಬಗೆ ತೋರ ದಂತೆ ಹೇಳಿದರೂ ಆ ಪ್ರಿಯವಾರ್ತೆಯನ್ನು ತಂದ ಅವನನ್ನು, ಅವನ ನುಡಿ

ಯನ್ನೂ ಆಕೆ ಮೆಚ್ಚಿಕೊಂಡು ಹೊಗಳುವುದರಿಂದಲೆ ತಿಳಿಯುತ್ತದೆ, ಅವಳಿಗೆ ಆ ನೇಮಕದಿಂದ ಮಹೋತ್ಸವವೇ ಆಗಿತ್ತು ಎಂದು. ಒಳ್ಳೆಯ ಸುದ್ದಿಯನ್ನು ಕೇಳಿದ ಯಾರೂ ಆ ಸುದ್ದಿ ತಂದವನನ್ನು ಬಾಯ್ತುಂಬ ಹೊಗಳದಿರಲಾರರಲ್ಲ. ಅವನತ್ತ ಹೋಗುತ್ತಾನೆ. ಇವಳು, ಈ 'ಅಬುಜಾಯತಾಕ್ಷಿ, ಮಹೋತ್ಸವದಿ ನಾರಾಯಣನ ಮೈದುನನ ಬರೆವಳು ಚಿತ್ತಭಿತ್ತಿಯಲಿ!' ಎಷ್ಟು ರಮ್ಯವಾಗಿದೆ ಚಿತ್ರ! ತನ್ನ ಪ್ರಣಯಿಯನ್ನು ಮೊದಲ ಬಾರಿಗೆ ಕಾಣಲಿರುವ ನವವಧು ಏನೇನೋ ಚಿತ್ರಗಳನ್ನು ಚಿತ್ರಿಸಿಕೊಳುತ್ತ ಅವನ ಚಿತ್ರವನ್ನು ಬರೆದು ಬರೆದು ತೃಪ್ತಿಗೊಳ್ಳುವಂತೆ ಈ ಮಹಾ ಪ್ರಣಯಪಟು ತನ್ನ ಚಿತ್ತಭಿತ್ತಿಯಲ್ಲಿ–ಬೇರೆಹೊರಗಿನ ಭಿತ್ತಿಯ ಮೇಲೇನಲ್ಲ–ತನ್ನ ಅಂದಿನ ಪ್ರಿಯನಾದ ನಾರಾಯಣನ ಮೈದುನನ್ನು ಬರೆದುಕೊಳ್ಳುತ್ತಾಳೆ. ಬಹು ಮನೋಹರವಾಗಿದೆ ಈ ಚಿತ್ರ. ಎಷ್ಟು ಗಾಢವಾಗಿತ್ತು ಅವಳ ಮೋಹ. ಅದು ತನಕ ಅವಳನ್ನು ಪ್ರೀತಿಸಿ ಹೋಗಿದ್ದ ಸಹಸ್ರ ಸಹಸ್ರ 'ಪುಣ್ಯಕರ್ಮ'ರು, ಅವಳು ಒಲಿದಿದ್ದ 'ಅದೃಷ್ಟವಂತ'ರು ಎಲ್ಲರೂ ಅವಳ ಹೃದಯಭಿತ್ತಿಯಲ್ಲೇನಾದರೂ ಚಿತ್ರಣಗೊಂಡಿದ್ದರೆ; ಇಲ್ಲವೆ ಅವರೆಲ್ಲ ಚಲನಚಿತ್ರದ ಛಾಯಾಚಿತ್ರಗಳಂತೆ ಬಂದು ಮರೆಯಾಗಿ ಅವಳ ಚಿತ್ರಭಿತ್ತಿಮಾತ್ರ ಆ ಚಿತ್ರಮಂದಿರದ ಬಿಳಿತೆರೆಯಂತೇ ಉಳಿದಿತ್ತೆ, ತಿಳಿಯದು.

ಮಜ್ಜನಗೊಂಡು ಅಮಲದುಕೂಲವನ್ನು ಧರಿಸಿ ವಿವಿಧ ರತ್ನಾಭರಣಗಳನ್ನು ತೊಟ್ಟು ತನ್ನ ಸಿರಿಮುಡಿಗೆ ಕುಸುಮದ ಮೊಗ್ಗೆಗಳನ್ನು ಮುಡಿಸಿಕೊಂಡು 'ಹೊಗರ ಹೊಸ ಜವ್ವನದ ಜೋಡಿಯ ಜಾಡಿ ಇಮ್ಮಡಿಸು'ತಿರಬೇಕಾದರೆ 'ಉಗಿದೊರೆಯ ಕೂರಲಗಿ'ನಂತೆ 'ಧಾರೆಯ ಮಿಗೆ ಹಿಡಿದ ಖಂಡೆಯ'ದಂತೆ 'ಕಾಮದ ಹಗಗೆ ಹುಟ್ಟಿದ ಧೂಮಕೇತುವಿನಂತೆ' ಈ 'ನಾಕ ಸುಖಕಾರ'ವಾದ ಊರ್ವಶಿ ಅರ್ಜುನನಲ್ಲಿಗೆ ಹೊರಡುತ್ತಾಳೆ. ಸುಂದರಿಯರನ್ನು ವರ್ಣಿಸುವೆಡೆಯಲ್ಲೆಲ್ಲ ಬರುವಂತೆ ಇಲ್ಲೂ ಈ ವಿಶೇಷಣಗಳು ಬಂದಿವೆಯೆಂದು ಭಾವಿಸಲಾಗದು. ಅವುಗಳ ಔಚಿತ್ಯ ಕೊನೆಯಲ್ಲಿ ತಿಳಿಯುತ್ತದೆ.

ಇಂಥ 'ಕಾಮಾರಿ ಧೂಮಕೇತು'ವನ್ನು ಸುತ್ತುಗಟ್ಟಿ ಸುರನಾರಿಯರು ಅವಳ ಮಹಾಕೀರ್ತಿಯನ್ನೂ ಅರ್ಜುನನ ಪರಮಪುಣ್ಯವನ್ನೂ ಹೊಗಳುತ್ತ ಮುನ್ನಡೆಯುತ್ತಾರೆ.

'ತುರಗ ಮೇಧದ ರಾಜಸೂಯದ ವರ ಮಹಾಕ್ರತುಕಾಟಿರೀಕೆಯ
ಚರಣದುಂಗುಟಿ ತುದಿಯ ಕಾಂಬರೆ! ಪೂತು! ಫಲುಗುಣನ
ಪರಮಪುಣ್ಯವದೇಸು! ತಾನಿದ್ದರಮನೆಗೆ ಸತಿ ಬಂದಳು! ಐಸ
ಚ್ಚರಿ!' ಎನುತ ಹೊಗಳಿದರು ಇಂದ್ರನಂದನನ

'ಧರಣಿಪತಿ, ಕೇಳವರ ತೊತ್ತಿರ ಹೊಜಿಗೆಲಸದವದಿರ ಪಸಾಯಿತೆ
ಯರಿಗೆ ಪಡಿಗವ ನೀಡಸಲ್ಲರು ಸೋಮಯಾಜಿಗಳು!
ವರುಣಸೂನು, ಜಯಂತ, ನಳಕೂಬರರು ಸಮಯವನೊಮ್ಮೆ ಕಾಣದೆ
ವರುಷವೋಲೈಸುವರು, ಸೌಧದ ದಾರವಟ್ಟದಲಿ!'

ಇಷ್ಟೆಲ್ಲ ವೈಭವೋನ್ನತ್ತಳಾದ ಚಿರನವೀನ ಸುಂದರಿಯಾದ ಊರ್ವಶಿ ತಾನೆ ಅರ್ಜುನನನ್ನು ಅರಸಿಕೊಂಡು ಹೊರಟಳು ಎಂಬುದಕ್ಕೆ ಕಾರಣ ಕೇವಲ ಇಂದ್ರಾಜ್ಞೆಯೂ ಅಲ್ಲ; ಅರ್ಜುನನ ಪುಣ್ಯವೂ ಅಲ್ಲ; ಅವಳಲ್ಲಿ ಅವನ ವಿಷಯವಾಗಿ ಉದಿಸಿದ್ದ ಮೋಹ. ಹೀಗೆ ಈ ಎಲ್ಲವೂ ಮುಪ್ಪುರಿಗೊಂಡು ಅವಳ ರಾಗಭಾವಗಳನ್ನು ಬಯಕೆಗಳನ್ನು ನಿಶಿತೋಜ್ವಲಮಾಡುತ್ತವೆ.

ಅರ್ಜುನನರಮನೆಯನ್ನು ಸಮೀಪಿಸಿದಂತೆ ಈ ಚಿತ್ರಣ ನಾಟಕೀಯವಾಗಿ ಚಲನಚಿತ್ರವಾಗಿ ಕಣ್ಣಿಗೆ ಕಟ್ಟಿದಂತೆ ನಡೆಯತೊಡಗುತ್ತದೆ. ಬಳ್ಳಿ ಮಿಂಚಿನ ಮಂದಿಯಲಿ ಮುರಿದಿಳಿವ ಮರಿಮುಗಿಲಿಂದುವಿನಂತೆ ದಂಡಿಗೆಯನ್ನಿಳಿದು, ಝಲಿರ್ಝಲಿಝಲಿರೆನ್ನುವ ಗೆಜ್ಜೆಯುಲಿಯ ಮಧ್ಯೆ 'ಶಬ್ದಬ್ರಹ್ಮ'ವನ್ನು ಸೋಲಿಸುವ ಪಾಯಮಧಾರು ಎನ್ನುವ ಸತಿಯರ ಸಂದಣಿಯ ಸಿಂಜಾರವದ ಸೊಗಸಿನಿಂದ ಅಡಿಯಿಡುತ್ತಾ ಒಳಬರುತ್ತಾಳೆ. ತಟತಟ್ಟನೆ ಅವಳನ್ನು ಹಿಂಬಾಲಿಸಿ ಬಂದಿದ್ದ ಸೋಗೆಗಣ್ಣ ಬಲೆಯರು ಬಾಗಿಲು ಬಾಗಿಲುಗಳಲ್ಲಿ ಚಾಮರವಿಕ್ಕುತ್ತಾ ಕಾವಲಾಗಿ ನಿಂತುಕೊಳ್ಳುತ್ತಾರೆ. ಅಂಥ ಮೇಳದಲ್ಲಿ ಆಕೆ ಒಳಬಂದು ನೋಡುತ್ತಾಳೆ: 'ಮಣಿಮಂಚದ'ಲ್ಲಿದ್ದ **'ಮಹಾಹಿಯ ಭೋಗತಲ್ಪದ ಹರಿಯೊಲಿಹ ಶತಯಾಗಸುತ'** ನನ್ನು ಊರ್ವಶಿಗೆ ಮಲಗಿದ್ದ ಅರ್ಜುನ ಕಾಣುವುದು ಹಾಗೆ. ಅವನು ಶತಯಾಗಸುತನಾಗಿರುವುದು ಮಾತ್ರವಲ್ಲ, ಮಹಾಹಿಯ ಭೋಗತಲ್ಪದ ಹರಿಯಾಗಿ ಅವಳಿಗಂದ ಕಾಣುತ್ತಾನೆ. ಮಹಾಭೋಗತಲ್ಪದ ಹರಿಯ ಕನಸನ್ನು ಸ್ವರ್ಗದ ಹೆಣ್ಣೊಂದು ಕಂಡಿದ್ದಳೊ, ಅಂತೂ ಆಗಂತೂ ಆ ಕಣಸು ಕಾಣುತ್ತದೆ ಅವಳಿಗೆ. ಅರ್ಜುನನ ಬಗೆಗೆ ಅವಳಿಗಿದ್ದ ಅತಿಶಯ ಭಾವನೆಯ ದ್ಯೋತಕ ಇದು.

ಅಲ್ಲಿ ಹೊಳೆಹೊಳೆಯುತ್ತಲಿದ್ದ ಮಣಿದೀಪದ ಶೀತಕಾಂತಿಯನ್ನೂ ಮುಕ್ಕಳಿಸುವಂತಹ ಅವಳ ಕಡೆಗಣ್ಣ ಕುಡಿ, ಅಲ್ಲಿನ ಇಂದೂಪಲದ ಭಿತ್ತಿಗಳ ಬೆಳಗನ್ನೂ ಅಣೆಯುವಂತಹ ಅವಳ ತನುಕಾಂತಿ ಆ ಮಂದಿರವನ್ನೆಲ್ಲ ಮತ್ತೂ ಕಾಂತಗೊಳಿಸುತ್ತದೆ. ಹಾಗಿರುವಾಗ 'ಕೆಳದಿಯರ ಕಂಠದಲಿ ಕೈಗಳನಿಳುಹಿ' ನಿಂತುಕೊಂಡು, 'ನೃಪಕುಲತಿಲಕನಂಗೋಪಾಂಗದಲಿ' ತನ್ನ 'ಕಣ್ಮನವನ್ನು ಹರಹುತ್ತಾಳೆ. ಆಕೆಯ ಚಂದ್ರಮುಖದಿಂದ ಸೂಸುವ ತಿಂಗಳಿನ ಸೌರಭಪೂರ ದಲ್ಲಿ ಅರ್ಜುನನ ನಿದ್ರೆ ತಿಳಿಯುತ್ತದೆ. ಅವನ ಕರಣಾವಳಿಗಳೆಲ್ಲ ಪರಮ ಪ್ರೀತಿಯ ರಸದಲ್ಲಿ ಮುಳುಗಿ ಭುಲ್ಲವಿಸುತ್ತವೆ. 'ಹರ ಮಹಾದೇವ ಈ ಅಘಾಟದ ಪರಿಮಳವಿದೆತ್ತಣದು' ಎನ್ನುತ್ತ **ಮೈಮುರಿಯುತ್ತ** ಎದ್ದು ಕಾಣುತ್ತಾನೆ: '**ಅಪೂರ್ವ ಪರಿಮಳ ಸಾರದಲಿ, . . . .ಕಿರಣ ಲಹರಿಯ ದಿವ್ಯರತ್ನಾಭರಣ ರುಚಿರತರ ಪ್ರಭಾಪಂಜರದೊಳಗೆ ಹೊಳೆಹೊಳೆವ ಮದನಾಲಸೆಯನೂರ್ವ ಶಿಯ.**' ಸುವಾಸನೆಯ ಹಾಗೂ ರತ್ನಾಭರಣಗಳ ಕಾಂತಿಯ ಪಂಜರದ ಒಳಗೆ ಸಿಲುಕಿದ ಹೊಳಪಾದ, ಆ ಮದನಾಲಸೆಯನ್ನವನು ಕಂಡ ಚಿತ್ರ ತುಂಬಾ ಮೂರ್ತವಾಗಿದೆ. ಅರ್ಜುನನಿಗೆ ಅವಳ ಸೌಂದರ್ಯ ಹಾಗೂ ಅವಳ ಮದನಾ ಲಸತೆ ಕಂಡುಬರುತ್ತದೆ. ಆದರದು ಅವನನ್ನು ಕರಗಿಸಲಿಲ್ಲ.

ಇಂತಹ ಮನಮೋಹಕ ಚಿತ್ತೋನ್ಮಾದಕ ಆವರಣ ದೃಶ್ಯಗಳಿರುವಾಗ ಯಾರಿಗೂ ಬಗೆ ಕದಡದಿರದು. ಆದರೆ ಅರ್ಜುನನಿಗಾದ ಅನುಭವ ಬೇರೆ: 'ಹಾ ಮಹಾ ದೇವಿಯರಲಾ ! ಸುತ್ರಾಮನೋಲಗದೊಳಗೆ, ನರ್ತನ ರಾಮಣೀಯಕ ರಚನೆಯಲಿ ರಂಜಿಸಿದಳಾ ಸಭೆಯ !' ಎಂದು. ಇವಳು ಅಷ್ಟೇ ಆಗಿದ್ದರೆ ಅಭಿನಂದನೀಯೆ ಮಾತ್ರವಾಗುತ್ತಿದ್ದಳು. ಆದರೆ "ಈ ಮಹಿಳೆ **ಅಭಿವಂದನೀಯೆ !**" ಕಾರಣ : 'ನಿರಾಮಯದ ಶಶಿವಂಶಜನನಿ' ಎನ್ನುವ ಭಾವ ಪ್ರಧಾನವಾದುದು. ಊರ್ವಶಿಯ ದುರ್ದಮ್ಯ ಸೌಂದರ್ಯವನ್ನೂ ಮದನಾಲಸ ಮೋಹಕತೆಯನ್ನೂ ತಾಳಿಕೊಳ್ಳಲು ಅರ್ಜುನ ಅವಳಲ್ಲಿ ತಾಯಿ ತನವನ್ನು ಕಾಣುತ್ತಾನೆ–ಸಕಾರಣವಾಗಿಯೆ. ಮಾಯೆಯನ್ನು ಗೆಲ್ಲುವುದಕ್ಕೆ ಅದೊಂದೆ ಸುಲಭಮಾರ್ಗ ಎಂದು ಶ್ರೀರಾಮಕೃಷ್ಣ ಪರಮಹಂಸರು ಹೇಳುತ್ತಲೆ ಇದ್ದರು. ಆದ್ದರಿಂದಲೆ ಮಣಿಮಂಚದಿಂದಿಳಿದು :

> "ಏನಿ ಬಿಜಯಂಗೈದಿರಿತ್ತಲು ? ಮಾನನಿಧಿ ! ಕುಳ್ಳಿರಿ ; ಸುರೇಂದ್ರನ
> ಮಾನಿನಿಯರಭಿವಂದನೀಯರು ! ನಾವು ಕೃತಾರ್ಥರಲ !
> ಏನಿ ಬೆಸಸೆನಗೆ ! ಏನು ಹದ ! ನಿಮಗಾನು ಮಗ! ಉಪಚಾರವೇಕೆ ? ಮ
> ನೋನುರಾಗದಲಜುಹಿ !"

ಎಂದು ಹೇಳುತ್ತಾನೆ. ತನಗನಿಸಿದುದನ್ನೆ ಆತ ಹೇಳಿದ. ಆದರೆ ಅವಳಿಗೇನಾಗಿರಲಿಕ್ಕಿಲ್ಲ ! 'ಏನಿ !' ಎನ್ನುವ ಅವನ ಮಾತಿನ ರೀತಿಯೆ ಅವಳಿಗೆ ಬರೆಯಾಗುತ್ತದೆ. ಅವಳ ಬಯಕೆಯ ಕಾಮನಬಿಲ್ಲುಗಳಿಗೆ ಆಲಿಕಲ್ ಮಳೆಸುರಿದಂತಾಯಿತಲ್ಲ ಅವನ ಶೀತಲೋಪಚಾರದಿಂದ ! ಏನು ಹೇಳವುದೀಗ ?

> 'ನುಡಿಗೆ ಬೆಬಗಾದಳು, ಮನೋಜನ ಸಡಗರಕೆ ತೆಕ್ಕಿದಳು, ಪಾರ್ಥನ
> ನಡವಳಿಗೆ ಮೆಚ್ಚಿದಳು, ಬೆಚ್ಚಿದಳಂಗಜಾಸ್ತ್ರದಲಿ.
> ಕಡುಗಿದಳು ಖಾತಿಯಲಿ, ಲಜ್ಜೆಯ ಬಿಡೆಯದಲಿ ಭಯಗೊಂಡಳು ಅಂಗನೆ
> ಮಿಡುಕಿದಳು ವಿವಿಧಾನುಭಾವದ ರಸದ ಭಂಗಿಯಲಿ"—ಆ. ೮. ೨೦. ೧೮೯.

ಅವಳಿಗಾದ ಸಂಕೀರ್ಣತಮವಾದ ಅನುಭವವನ್ನು ಇದಕ್ಕಿಂತ ವರ್ಣಿಸಬೇಕೆ ? ಕೋಪವೆ, ಲಜ್ಜೆಯೆ, ಮಿಡುಕೆ, ಸಿಡುಕೆ, ಮೆಚ್ಚಿಕೆಯೆ, ಅಭಿಮಾನಭಂಗವೆ–ಏನೇನು ಅದು ? ಒಂದು ಭಾವವನ್ನು ಮೆಟ್ಟಿಕ್ಕಿ ಮತ್ತೊಂದು ಭಾವತರಂಗ ಅಪ್ಪಳಿಸುತ್ತದೆ ಅವಳ ಚಿತ್ತ ಸೈಕತವೇಲೆಯನ್ನು, ಪಾಪ ! "ಮಿಡುಕಿದಳು ವಿವಿಧಾನುಭಾವದ ರಸದ ಭಂಗಿಯಲಿ." ಅಂತಹ ವಿದಗ್ಧ ದೇವಾಂಗನೆಗೇ ಆ ಮಿಡುಕಾಟ ಉಂಟಾಗಿರಬೇಕಾದರೆ ಅವಳಿಗಾಗುವ ಅರ್ಜುನ ಮೋಹದ ತೀವ್ರತೆಯನ್ನು ಬೇರೆ ಹೇಳಬೇಕಾಗಿಲ್ಲ. ಹಾಗೂ, ಅಂಥ ವಿಲಕ್ಷಣವಾದ ವರ್ತನ–ಉತ್ತರಗಳನ್ನವಳು ತನ್ನ ಜೀವಿತದಲ್ಲಿ ಕೇಳಿಯೇ ಇದ್ದಿರಲಾರಳು, ಅದೂ ಮರ್ತ್ಯಜ ಮನುಷ್ಯನಿಂದ. ಹಿಂದೆಯೆ ಇದನ್ನು ಕವಿ ನಿರೂಪಿಸಿದ್ದಾನೆ. ಆದ್ದರಿಂದಲೆ ಅವಳು ಮೊದಲು ಅವನ 'ನುಡಿಗೆ ಬೆಬಗಾದಳು'; ಆಮೇಲೆ ಅವನ ಅನನ್ಯ ಧೃತಿಗೆ 'ಮೆಚ್ಚಿದಳು'; ಅಷ್ಟರಮಟ್ಟಿಗೆ ಅವಳಿನ್ನ ಚಿತ್ತಸ್ವಾಸ್ಥ್ಯವುಳಿಸಿಕೊಂಡಿದ್ದಳು. ಆದರೆ ತನಗಾಗಿರುವ ಮನೋಜವಿಕಾರದ ದುರ್ದಮ್ಯತೆಯ 'ಸಡಗರಕೆ ತೆಕ್ಕಿದಳು,' 'ಭಯಗೊಂಡಳು,' 'ಮಿಡುಕಿದಳು'; ಹಾಗೂ, ಮನುಜತಿರಸ್ಕೃತೆಯಾದೆನಲ್ಲ ಎಂಬ ಪ್ರಪ್ರಥಮ ಅಭಿಮಾನ-ಭಂಗದಿಂದ 'ಕಡುಗಿದಳು ಖಾತಿಯಲಿ.' ಕೋಪವನ್ನೂ ಮೆಟ್ಟಿಕ್ಕ

ವಷ್ಟು ನಾಚಿಕೆ–ಅದು ಅವಳ ಸ್ತ್ರೀತ್ವದ ಅಭಿವ್ಯಕ್ತಿಯೂ ಹೌದು, ಪೋಷಕವೂ ಹೌದು—ಅದು ಭಯ ತರುವಷ್ಟು ಅತಿಶಯವಾಗಿದೆ.

> 'ಏಕೆ ನುಡಿದನೊ ಚಿತ್ರಸೇನ ! ಆದೇಕೆ ನಾ ಕೈಕೊಂಡೆ ! ಎತ್ತಣ
> ಕಾಕು ಮೂಳಗೆ ಕೋಳು ಹೋದೆನೊ ಕಾಮನೆಂಬವನೆ !
> ಲೋಕವರ್ತಕವಲ್ಲದಿವನನದೇಕೆ ವಿಧಿ ನಿರ್ಮಿಸಿದನೋ ! ನಾ
> ನೇಕೆ ! ನೆರನೇಕೆ !' ಎನುತ ಸುಯ್ದಳು ಬೈದು ಕಮಲಜನ

ಒಳ್ಳೆಯದಾಗಲಿ ಕೇಡಾಗಲಿ ಎಲ್ಲಕ್ಕೂ ಆ ಮಾಟಗಾರನನ್ನು ತಾನೆ ಬೈಯು ವುದು ! ಇಂಥ 'ಲೋಕವರ್ತಕವಲ್ಲದಿವನ'ನ್ನು ಏಕೆ ಆ ವಿಧಿ ಸೃಷ್ಟಿಸಿದ' ? (ಅವಳು ಅಂದಿನತನಕ ತಿಳಿದ ಲೋಕದಲ್ಲಿ ಯಾರೂ ಇವನಂತೆ ಎಂದೂ ವರ್ತಿ ಸಿರಲಿಲ್ಲವೆಂಬುದಕ್ಕೆ ಇದೂ ಸಾಕ್ಷಿ.) ಅಷ್ಟೆ ಏಕೆ. ತನ್ನಂಥ ತಿರಸ್ಕೃತೆ, ನರನಂಥ ಮೂಢ ಏಕೆ ತಾನೆ ಇರಬೇಕು ಎಂದು ನಿಡುಸುಯ್ಯುತ್ತಾಳೆ. 'ವಿಕಳ ಮತಿಯೋ ? ಷೇಣ್ ಇವ ನಪುಂಸಕನೊ ? ಜಡನೋ ? ಶ್ರೋತ್ರಿಯನೊ ? ಬಾಧಕನೊ ? ಖಳನೊ ? ಖೂಳನೊ ? ಮಾನವ ವಿಕಾರವಿದೋ ? ಎಂದು ಆ ನರನ ಬಗ್ಗೆ ಕೋಪ ಜಿಗುಪ್ಸೆ, ಹಾಗೂ ಅದರಿಂದ ತನಗಾದ ಅವಮಾನಕ್ಕೆ ಒಂದು ಬಗೆಯ ಕೃತಕ ಸಮಾಧಾನ ಉಂಟಾಗುತ್ತೆ. 'ವಿಕಟ ತಪಸಿನ ದೇವ ದೈತ್ಯರ ಮಕುಟವಾಂತುದು ವಾಮಪಾದವ ಅಕಟ ಕೆಟ್ಟೆನಲಾ !' ಎನುತ ಕರಗಿ ಮರುಗುತ್ತಾಳೆ ಆ ಹೆಣ್ಣು, ಅಪೂರ್ವ ಅಭಿಮಾನಹತಿಯಿಂದ. ಇನ್ನು ತಲೆಯೆತ್ತಿ ಬದುಕುವುದೆಂದು ? ನಿತ್ಯ ಪ್ರಾರ್ಥನೆಯಿಂದಲೆ ನೀರೆರೆಸಿಕೊಂಡು ಚಿಗುರಿಡುತ್ತಿದ್ದ ಅವಳ ಪಲ್ಲವಾಧರ ಕುಸುಮಾನನ ಎಲ್ಲವೂ ಇಂದು ಮೊದಲ ಬಾರಿಗೆ ಬಿಸಿ ತಾಕಿಸಿಕೊಂಡಂತಾಯಿತಲ್ಲ. ತನಗಾದ ಈ ಅಶನಿಘಾತವನ್ನು ದರ್ಪಕೋಪಗಳ ಮಾತಿನಿಂದ ವ್ಯಕ್ತಗೊಳಿಸುತ್ತಾಳೆ, ಹಾಗೂ ತನಗಾದ ನಷ್ಟಕ್ಕೆ ಪರಿಹಾರ ಕೊಡಿಸಿಕೊಳ್ಳುತ್ತಾಳೆ.

> ಎಲವೊ ! ರಾಯನ ಹೇಳಿಕೆಯಲಂಡಲೆದನೆನ್ನನು ಚಿತ್ರಸೇನಕ !
> ಅಲುಗಿ ನಟ್ಟವು ಕಾಮಶರವೆನ್ನಂತರಂಗದಲಿ :
> ಒಲಿದುಬಂದಬಲೆಯ ಡೆಕ್ಕರಿಗಳೆವುದೇ ವಿಟಧರ್ಮ ? ಅಕಟಾ !
> ತಿಳಿಯಲಾ ತಾನಾವಳೆಂಬುದನು ? !

ಎಂದು ಹೇಳುತ್ತಾಳೆ. ಮೊದಲೆ ತಿಳಿದಿದ್ದರೂ ಅರ್ಜುನನಿಗೆ ಆಗ ಊರ್ವಶಿಯ

ಬರವಿನ ಅರ್ಥ ಸ್ಪಷ್ಟವಾಗಿ ಆಶ್ಚರ್ಯವುಂಟುಮಾಡುತ್ತದೆ.

"ಶಿವ ಶಿವಾ ! ಈ ಮಾತೇಕೆ ? ಕಾಮನ ಬವಣೆಯಲಿ ನೀವಱಿಯದಿರೆ ವಾ
ಸವನ ಸೇವುವು, ಚಿತ್ರಸೇನನ ನುಡಿಗಳು, ಅಂತಿರಲಿ,
ಎವಗಕರ್ತವ್ಯದಲಿ ಮನ ಸಂಭವಿಸುವುದೆ ? ನೀವೆಮ್ಮ ವಂಶೋ
ದ್ಭವಕೆ ಜನನಿಯಲಾ ?" ಎನುತ ವಿನಯದಲಿ ನರ ನುಡಿದ.

ಕಾಮಾರಿಯ ಕೃಪೆಯಿಂದ ಕಾಮಭ್ರಮಿತನಾಗದೆ ಸುಭದ್ರನಾಗಿದ್ದ ಅರ್ಜುನ ಅವಳನ್ನು ಕಾಮನ ಬವಣೆಗೆ ಸಿಲುಕಿದವಳಂತಷ್ಟೆ ಕಾಣುತ್ತಾನೆ. ಆದರೆ ಭಗ್ನಕಾಮಕ್ಕಿಂತ ಭಗ್ನಅಭಿಮಾನ ಅಹಂಕಾರ ಅವಳನ್ನು ಏನಾಗಿ ಮಾಡಿತೆಂದವನಿಗಿನ್ನೂ ತಿಳಿದಿರಲಿಲ್ಲ. ತನ್ನ ಮುಂದೆ ಈ 'ನಾವೆ' ಸಂಬಂಧ ಗಳನ್ನು ಹೇಳುವ ಮೂಢನನ್ನು ಕಂಡು ಮರುಗಬೇಕೊ ಕೋಪಿಸಿಕೊಳ್ಳ ಬೇಕೊ ತಿಳಿಯದು ಅವಳಿಗೆ :

"ಪ್ರಣವದರ್ಥ ವಿಚಾರವೆತ್ತಲು ! ಗಣಿಕೆಯರಮನೆಯ ಸ್ವರಾಕ್ಷರ
ಗಣಿತ ಲಕ್ಷಣವೆತ್ತ, ರತಿಕೇಳೀವಿಧಾನದಲಿ !
ಬಣಗು ಭಾರತ ವರ್ಷದವದಿರ ಭಣಿತ ನವಿಮ್ಮ ದೇವಲೋಕಕೆ
ಸಣಬಿನಾರವೆ ಚೈತ್ರರಥದೊಳಗೆ !"

ಎಂದು ಸ್ಪಷ್ಟವಾಗಿಯೆ ಹೇಳುತ್ತಾಳೆ. ಅವಳಿಗೆ ಅರ್ಜುನನಲ್ಲಿ ಅವನ ವಿಭವ ದಿಂದಾಗಿ ಮೋಹ ಬಂದಿದ್ದೀತೆ ಹೊರತು ಭಾರತದವರ ಬಗ್ಗೆ ಯಾವೊಂದೂ ಗೌರವವಿಲ್ಲ. ಸ್ವರ್ಗನಂದನವೆಲ್ಲಿ, ಸೆಣಬಿನ ಆರವೆಯೆಲ್ಲಿ ಎಂಬ ತಿರಸ್ಕಾರ ಅವಳಿಗೆ. ಅಷ್ಟೇ ಅಲ್ಲ :

"ಅಯ್ಯನಯ್ಯನು, ನಿಮ್ಮವರ ಮುತ್ತಯ್ಯನಾತನ ಭಾವಮೈದುನ
ನಯ್ಯನಗ್ರಜರನುಜರೆಂಬೀ ಜ್ಞಾತಿಬಾಂಧವರ
ಕೈಯಲರಿಗಳ ಹೊಯ್ದು ಶಿರಸನರಿದುಯ್ಯಲಾಡಿದವರ್ಗೆ ಮೋಹ್ ಮುಖ
ದಯ್ಯಗಳಿಗಾನೊಬ್ಬಳೆಂದಳು ನಗುತ ನಳಿನಾಕ್ಷಿ".

ಅಜ್ಜ ಮುತ್ತಜ್ಜರಿಗೆಲ್ಲ, ಲೆಕ್ಕಪಕ್ಕವಿಲ್ಲದಷ್ಟು ಮಂದಿಗೆಲ್ಲ ತಾನೊಬ್ಬಳೆ ಎಂದು ಹೇಳಿಕೊಳ್ಳುವಾಗ ತನ್ನ ಘನತೆ, ಸಾಮಾನ್ಯ ಅಲಭ್ಯತೆ ಅಥವಾ ದುರ್ಲಭತೆಯನ್ನೂ ಆಕೆ ಮರೆಯುತ್ತಾಳೆ. ತನ್ನ ಸಹಜೀವಿಗಳೂ ಎಷ್ಟೊ ಜನರಿದ್ದಾರೆಂಬುದನ್ನೂ ಕಡೆಗಣಿಸುತ್ತಾಳೆ. ಆದರೂ ಅವಳ ನಗೆ ಅರ್ಥಪೂರ್ಣ ವಾದುದು. ಮತ್ತೂ ಸ್ಪಷ್ಟವಾಗಿ :

"ಮೋಜಿಕೆಯ ಮಾತಂತಿರಲಿ ! ಸಾಕದ ಮುಜಿಕೆಡು ಕಳೆ ! ಮಾನಿಸಿಯರಿಚ್ಛೆಯ
ನಜ್ರಿಯದವನು ಸುರೇಂದ್ರನಾಗಲಿ, ಚಂದ್ರನಾಗಲಿ
ಕುಜಿ ಕಣಾ । ಖೂಳ ! ನೀನೆಂತಜೂವೆ !"

ಎಂದು ಜಂಕಿಸಿ ಮಾತನಾಡಿ ನೋಡುತ್ತಾಳೆ. ಇರಬಹುದು, ಆಕೆ ದೇವಲೋಕಕ್ಕೆ ಹೋದ ಪುಣ್ಯಾತ್ಮರಿಗೆಲ್ಲಾ ಭೋಗ್ಯವಾಗಿಯೆ ಇರಬಹುದು. ಆದರೆ ಮರ್ತ್ಯ ಜೀವಿಯಾಗಿ, ಇಲ್ಲಿನ ಶರೀರವನ್ನೆ ಹೊತ್ತುಕೊಂಡು, ಇಲ್ಲಿನ ಋತಕ್ಕೆ ಇನ್ನೂ ಒಳಪಟ್ಟಿದ್ದು ದೇವಲೋಕಕ್ಕೆ ಹೋದವನು ಅಲ್ಲಿ ಹೇಗೆ ಒಪ್ಪಬಹುದು ? ಅರ್ಜುನನಿಗೆ ಬರುವ ಪ್ರಶ್ನೆ ಇದು. ಒಂದೆ ಬಾರಿ ಎರಡು ಭಿನ್ನ ಋತಗಳಲ್ಲಿ ವಿಭಿನ್ನನೀತಿಯ ನೆಲೆಗಟ್ಟನಲ್ಲಿ ಪ್ರಜೆಯಾಗಿ ಬಾಳುವುದು ಅಸಾಧ್ಯ.

ಇದು ಮನುಷ್ಯ ಶರೀರ, ತದ್ಧರ್ಮದಲಿ ತನ್ನವಸಾನ ಪರಿಯಂತ
ಇದರೊಳವ್ಯಭಿಚಾರದಲಿ ವರ್ತಿಸಿದ ಬಳಿಕಿನಲಿ,
ತ್ರಿದಶರಲ್ಲಿಗೆ ಬಂದರೆ ಆ ಮಾರ್ಗದಲಿ ನಡೆವುದು, ದೇವತಾದೇ
ಹದಲಿ ; ಬಲವತ್ತರವು ದೇಹ ವಿಶೇಷವಿಧಿಯೆಂದ !

ಮನುಷ್ಯಶರೀರ ಮನುಷ್ಯಧರ್ಮದಂತೆಯೆ ವರ್ತಿಸಬೇಕು, ಅದರ ನಡೆಯಲ್ಲಿ ವ್ಯಭಿಚಾರ ಬೇಡ. ಹಾಗೆ ಅವ್ಯಭಿಚಾರದಲ್ಲಿ ನಡೆದ ಬಳಿಕ ದೇವಲೋಕಕ್ಕೆ ಹೋದಾಗ ಆ ದಾರಿಯಲ್ಲೆ ನಡೆಯಬಹುದು ; ಕಾರಣ ಆಗ ದೇವತಾದೇಹ ವಿರುತ್ತೆ. Be a Roman in Rome ಎಂಬುದು ಸುಲಭ ಮಾರ್ಗಿಗಳ ರೀತಿ. ದೇಹದಷ್ಟೆ ನಮ್ಮ ಧರ್ಮ ಬಲವತ್ತರವೆಂಬುದನ್ನೂ ಆತ ನಂಬಿದ್ದಾನೆ. ಅಮೆರಿಕಾಗೆ ಹೋಗಿ ಅಲ್ಲಿಗೆ ಒಗ್ಗಿ ಅಲ್ಲಿಯೆ ಉಳಿದುಕೊಳ್ಳುವ ಬುದ್ಧಿ ಜೀವಿಗಳ ಧರ್ಮಕ್ಕಿಂತ ಭಿನ್ನವಿದು. ಕಾರಣ, ಈ ದೇಹ ವಿಶೇಷವಿಧಿ ಮನುಷ್ಯರಿಗೆ ಬಲವತ್ತರವಾದದ್ದು. ಕುಮಾರವ್ಯಾಸನ ದರ್ಶನ ಇಲ್ಲಿ ಬಹು ಬಂಧುರವಾಗಿ ವ್ಯಕ್ತವಾಗಿದೆ.

ಈ ತತ್ತ್ವದೃಷ್ಟಿ ಸದ್ಯೋನ್ಮತ್ತ ದೇವವಾರಾಂಗನೆಗೆ ತಿಳಿಯುವುದು ಹೇಗೆ ? ತನಗೆ ತೋರಿದ ರೀತಿಯೆ ವಾದಿಸುತ್ತಾಳೆ. ಸೂಕ್ಷ್ಮ ಧರ್ಮಗಳನ್ನು ಹೇಳುತ್ತಿರುವ ಅವನು ಹಾಗಾದರೆ ಭೂಮಿಯಲ್ಲಿ ಮಾಡುತ್ತಿರುವುದಾದರೂ ಎಂಥ ಧರ್ಮ ಎಂದೆನಿಸುತ್ತೆ ಆಕೆಗೆ. ಕಟುವ್ಯಂಗದಿಂದ :

"ಅಪುದಹುದು ! ಶ್ರೌತಪಥದಲಿ ಬಹಿರಿ ! ನೀಮೆ ಸ್ಮಾರ್ತವಿಧಿಸ
ನ್ನಿಹಿತರು !! ಎಂಬುವ ಅಱಿಯದೇ ಮೂಜಗದ ಜನವೆಲ್ಲ !"

ಎಂದೂ, ವ್ಯಕ್ತ ತಿರಸ್ಕಾರದಿಂದ :

"ಮಹಿಳೆಯೊಬ್ಬಳೊಳೈವರೊಡಗೂಡಿಹರು ನೀವೇನಲ್ಲಲೇ ?
ನಿಸ್ಪೃಹರು ನೀವ್ ನಮ್ಮಲ್ಲಿ ! ? ಹರಹರ !"

ಅವಳಿಗೆ ಅರ್ಜುನನ ಧರ್ಮ ಶ್ರವಣ ವಿಚಿತ್ರವಾಗಿ ತೋರುತ್ತದೆ. ಶ್ರುತಿಬದ್ಧ ಪಥದಲ್ಲಿ ಸ್ವರ್ಗ ಮಾರ್ಗಿಯಾಗುವ ಅವನು ಸ್ಮೃತಿ ಬದ್ಧವಾಗಿದಾನೆಯೆ ? ನೆಲದಲ್ಲಿ ಸ್ಮೃತಿದೂರವಾಗಿ ನಡೆದುಕೊಳ್ಳುತ್ತಿರುವ ಅವನು ಸ್ವರ್ಗದಲ್ಲಿ ಧರ್ಮಶ್ರವಣ ಮಾಡುವುದೆ ? ಎಂದೂ ತೋರುತ್ತದೆ.

ಈ ಆರೋಪವನ್ನು ಆಗಲೆ ಎಷ್ಟು ಜನರ ಬಾಯಿಂದ ಕೇಳಿದ್ದನೊ ಅರ್ಜುನ. ಅವಕ್ಕೆಲ್ಲ ಅವನಲ್ಲಿ ಸಿದ್ಧ ಉತ್ತರವೆ ಇತ್ತು. ಅದು ಬುದ್ಧಿಸಿದ್ಧ ಉತ್ತರವಾಗಿರಲಿಲ್ಲ. ಸ್ವಜೀವನ ಧರ್ಮವೆಂದು ಒಪ್ಪಿಕೊಂಡುದನ್ನು ಹಾಗೆಯೆ ಬದುಕುತ್ತಿದ್ದುದರಿಂದ ಬಂದಂಥ ಸಿದ್ಧ ಉತ್ತರವಾಗಿತ್ತು :

ತಾಯ ನೇಮದಲಂದು ಕಮಲದಲಾಯತಾಕ್ಷಿಯ ಕೂಟವೈವರಿ
ಗಾಯಿತು ; ಅದು ತಪ್ಪೇನು ? ಜನನಿಯ ನುಡಿಯಲಂಘ್ಯವಲೆ"

ಆದರೆ ಈಗ ತಾನು,

"ಕಾಯಸೌಖ್ಯಕ್ಕೆ, ಕಾಮಸುಖದ ವಿಡಾಯತತನುವಕೆ ವೇಡೆಗೊಂಡು ನ
ವಾಯಿಯಲಿ ದುರ್ಗತಿಗೆ ದುವ್ವಾಳಿಸುವನಲ್ಲ"

ಎನ್ನುತ್ತಾನೆ. ಕಾಮಸುಖ ತನ್ನದೇ ತರ್ಕ ತತ್ತ್ವಗಳನ್ನು ಮಾಡಿಕೊಳ್ಳುತ್ತಿ. ಅದನ್ನನುರಿಸಿ ತಾನು **'ದುರ್ಗತಿಗೆ ದುವ್ವಾಳಿಸುವನಲ್ಲ'** ಎಂದು ಅರ್ಜುನ ಸ್ಪಷ್ಟಪಡಿಸುತ್ತಾನೆ.

ಇಷ್ಟೆ ಸಾಕು ಊರ್ವಶಿಗೆ. ತಾಯ ಮಾತನ್ನು ಒಪ್ಪುವಾತ ತಂದೆಯ ಮಾತನ್ನೂ ಒಪ್ಪಬೇಕಲ್ಲ ! ಎಂಥ ತರ್ಕ !

"ತಾಯ ನೇಮದಲೈವರಿಗೆ ಕಮಲಾಯತಾಕ್ಷಿಯ ಕೂಟವೇ ! ಸುರ
ರಾಯ ನಿಮ್ಮಯ್ಯನು ! ವಿಲಂಘ್ಯವೆ ನಿನಗೆ, ಪಿತೃವಚನ ?
ರಾಯನಟ್ಟಲು ಬಂದೆ :"

ಎಂದು ಹೇಳಿ ಅವನ ಧರ್ಮಗುಣಗಳನ್ನು ಕೆದಕುತ್ತಾಳೆ. ಹಾಗೂ ವಿನಯವಾಗಿ

"ಕುಸುಮಾಯುಧನ ಕಗ್ಗೊಲೆಯ ಕೆದರುವುಪಾಯವನು ನೀ ಬಲ್ಲೆ !"

ಎನ್ನುತ್ತಾಳೆ, ತನ್ನ ಹಮ್ಮಳಿದು. ಆದರೂ ತನಗೆಂಥ ಸ್ಥಿತಿ ಬಂತು ಅಯ್ಯೊ, ಎಂದು ಮರುಗುತ್ತಾಳೆ :

"ಸರಸಿಜದ ಮಧು ಮಧುಕರನನುಕರಿಸಿದೊಡೆ, ಚಂದ್ರಿಕೆ ಚಕೋರನ
ವರಿಸಿದರೆ, ನಿಧಿಲಕ್ಷ್ಮಿ ಸುಳಿದರೆ ನಯನವೀಥಿಯಲಿ.
ಗರವೆಯರು ಮೇಲಿಕ್ಕಿ ಪುರುಷನನರಸಿದರೆ ಜಾರುವರೆ ಸುಡಲಾ
ಸರಸಿಜವನಾ ಚಂದ್ರಿಕೆಯನಾ ನಿಧಿಯನಾ ವಧುವ !"

ಅನ್ವೇಷಿತವಾಗಬೇಕಾದುದೆ ಅನ್ವೇಷಣಮಾಡ ಹೊರಟಾಗ ಅದನ್ನು ಸ್ವೀಕರಿಸದೆ ತಿರಸ್ಕರಿಸಿದರೆ ಆಗ ಅದು ಇದ್ದೂ ಫಲವೆಲ್ಲಿ ಬಂತು. ಅದರಿಂದ ತನ್ನ ಬದುಕನ್ನು ಸುಡಬೇಕು, ಸುಟ್ಟುಕೊಳ್ಳಬೇಕು ಎಂಬಷ್ಟು ಜಿಗುಪ್ಸೆ, ನೋವು, ಅಭಿಮಾನಭಂಗ ಆಗಿದೆ. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ತನ್ನ ಕಾಮಹತ ದುಃಸ್ಥಿತಿಯನ್ನು ಹೇಳಿಕೊಳ್ಳುತ್ತಾಳೆ :

"ತಿಳುಹಿದೊಡೆ ಸುರಲೋಕದವರು ಅತಿಗಳಹೆಯರಲಾ ಎಂಬೆ; ಮನ್ಮಥ
ಖಳ ಕಣಾ ! ನಿಷ್ಕರುಣಿ ನೀ, ಸೌಭಾಗ್ಯ ಗರ್ವದಲಿ !
ಬಲುಮೆ ಬಿದ್ದುದು ವಾಸಿಯಲಿ, ಕಂದೊಳಸುಗೊಂಡುದು ಕಾಮಶರ! ಮನ
ವಳುಕೆ ಕೆಡಹಿತು ವಿರಹತಾಪದಲಿ !"

ಪ್ರಣಯ ತಿರಸ್ಕಾರದಿಂದ ಒಂದು ಕಡೆ ತೀವ್ರಾಭಿಮಾನ ಭಂಗವಾದರೆ ಮತ್ತೊಂದುಕಡೆ ವಿರಹತಾಪ ದಹನವಾಗಿದೆ ಅವಳಿಗೆ. ತನ್ನ ಕಾಮದಗ್ಧ ಸ್ಥಿತಿಯನ್ನು ಕಂಡು ಅವಳಿಗೆ ದುಃಖ ; ಅದಕ್ಕಿಂತ ಹೆಚ್ಚಾಗಿ ವಿಲಿವಿಲಿಗೊಂಡಿರುವ ತನ್ನ ಮುಂದೆ 'ಸೌಭಾಗ್ಯಗರ್ವಿತ' ನಾಗಿದ್ದಾನಲ್ಲ ಅರ್ಜುನ, ನಿಷ್ಕರುಣಿಯಾಗಿದ್ದಾನಲ್ಲ, ಎಂಬ ಸಹಿಸಲಾಗದ ಭಾವ ಅವಳನ್ನು ಸುಡುತ್ತಿದೆ. ಜಾರಿದವನಿಗೆ ಜಾರದಿರುವವನನ್ನು ಕಂಡರಾಗುವ ಅಸಹನೆ ಇದು. ಅಸಳಿಗಾಗಿರುವ ಭಂಗ ಹೀಗೆ ಸಂಕೀರ್ಣ. ಅರ್ಜುನ ಅವಳ ಸ್ಥಿತಿಗೆ ಕರಗದಿದ್ದರೂ ಮನಗರಗುತ್ತಾನೆ; ಕಾಮ ಮೂಢಳಾದ ಅವಳಿಗೆ ಧೈರ್ಯಶಕ್ತಿಯನ್ನು ತುಂಬುತ್ತಾನೆ. ಲೋಕ ಅವಳ ಅಭಿಮಾನಹತಿಯನ್ನು ಆಡಿಕೊಳ್ಳಲು ಕಾರಣವಿಲ್ಲದಂತೆ ನೋಡಿಕೊಳ್ಳಬಹುದು ಎಂದೂ ಸಮಾಧಾನಪಡಿಸುತ್ತಾನೆ :

"ಕಾಡಲಾಗದು, ನಿಮ್ಮೊಡನೆ ಮುಜಿಬಾಡಲಮ್ಮೆನು, ಮನಕೆ ಧೈರ್ಯದ
ಜೋಡ ತೊಟ್ಟು ಇದಿರಾಗಿ ನಿಶೆ ನನೆಯಂಬು ನಾಟುವವೆ ?

ಬೋಡಿಯೇಕೆ ? ಅವ್ವೆ ಮಕ್ಕಳ ನೋಡ ಬಂದರೆ ಬೇರೆ ಕಪ್ಪವ
ಆಡುವರೆ ಬಲ್ಲವರು ! ಬಿಜಯಂಗೈಯಿ ನೀವು !" ಎಂದ.

ಇನ್ನಿದನ್ನು ಸಹಿಸದಾಯಿತು ಅವಳಿಗೆ. ಅವನಿಂದ ತನಗೆ ಉಪದೇಶ ದೊರೆಯುವಂತಾಯಿತೆ ? ತಿರಸ್ಕೃತ ಹೆಣ್ಣಿಗೆ ಅದಕ್ಕಿಂತ ಬೇಕೆ ಇನ್ನೊಂದು ಇವ್ವೊನೆಯ ಘಾತ !

ರೋಷವೀರೆಲೆಯಾಯ್ತು ! ಲಜ್ಜೆಯ ಮಾಸಿಲಳಿದುದು ! ಬಹು ವಿಧದ
ಬಹುವಾಸಿಗಳು ಪಲ್ಲವಿಸಿದವು ಕೆಲ್ಲವಸಿತನುತಾಪ
ಅಸೆ ಪೈಸರವ್ರೋಯ್ತು, ಕಡುರ್ಝುಳ ಸೂಸಿದುದು ಸುಯ್ಲಿನಲಿ, ಕಂಗಳು
ಕೇಸುರಿಯ ಮುಕ್ಕುಳಿಸಿದವು, ಹೆಕ್ಕಳಿಸಿ ಕಾಮಿನಿಯ.

ಸೊಂಪಡಗಿತು ಮುಖೇಂದು ತನುಲತೆ ಕಂಪಿಸಿದುದಡಿಗಡಿಗೆ, ಮೈ ತನಿ
ಗಂಪಿನಲಿ ಮಘ ಮಘಿಸಿತು ಅಮಲ ಸ್ವೇದದಲಿ.
ತಂಪಿನಲಿ ಶಿಖಿ ! ಮಧುರದಲಿ ಕಟು ! ಸುಂಪಿನಲಿ ಬಿರಿಸು ಅಮೃತದಲಿ ವಿಷ!
ಗುಂಪಿನಲಿ ನೆಲೆಯಾದವ್ರೋಲ್ ಸತಿಗಾಯ್ತು ಘನರೋಷ !

ಸುಪ್ತವಾಗಿದ್ದ ರೋಷವೀಗ ಎರಡೆಲೆ ಚಿಗುರಿದೆ ; ನಾಚಿಕೆಯೆಲ್ಲ ಎಂಜಲಾಗಿ ನಾನಾ ಪ್ರತಿಜ್ಞೆಗಳು ಮೇಲೆದ್ದು ಬೀಳುತ್ತಿರುವ ಅಹಂಗೊಮ್ಮಟವನ್ನು ಆಂತು ಕೊಳ್ಳುವ ಕಂಬಗಳಾಗುತ್ತವೆ. ಇನ್ನಾವ ಆಶೆಯೂ ಉಳಿಯಲಿಲ್ಲ, ಅವೆಲ್ಲ ತಳಮೇಲಾಯಿತು. ಆಶೆಯಿದ್ದರೆ ತಾನೆ ತಾಳಬೇಕಾದ ದೈನ್ಯ ? ಹಾಗಾಗಿ ಒಳಬೆಂಕಿ ತನ್ನುರಿಯನ್ನು ನಿಟ್ಟುಸಿರಿನಲ್ಲಿ ಹೊರಚೆಲ್ಲುತ್ತದೆ. ಅವಳ ಪ್ರಣಯ ವಿಂದು ರೋಷಾಗ್ನಿಯಾಗಿದೆ ; ಅದರಿಂದ ಅವಳ ಸೌಂದರ್ಯ ಭೈರವ ಭಯಾನಕ ವಾಗಿದೆ : ಕಡುಗಾಹಿನ ಅಮೃತದಂತೆ, ಕುಪಿತಸಿಂಹದ ಗವಿಯ ಕಸ್ತೂರಿ ಯಂತೆ, ಕಳಿತ ಹಲಾಹಲದ ಕಜ್ಜಾಯದಂತೆ, ಲೋಹಧಾರೆಯ ಮಧುವಿ ನಂತೆ, ರೌದ್ರಾಹಿಮಸ್ತಕದ ಮಣಿಯಂತೆ, ರಾಹು ತುಡುಕಿದ ಶಶಿಯಂತೆ ! ತೀವ್ರ ವಿರೋಧಗಳೆರಡು-ಕೋಮಲ, ಸೌಂದರ್ಯ ಭಯಂಕರ ಭಂಗಿಗಳು-ಕೂಡಿ ಹೇಗೆ ತೋರಬಹುದೆಂಬುದನ್ನು ಕವಿ ಪರಿಚಿತ ರೀತಿಯಲ್ಲಿ ವರ್ಣಿಸು ತ್ತಾನೆ. ಅಬಲಾಸಹಜವಾದ ಅಶ್ರುಧಾರೆ ಉಕ್ಕುತ್ತದೆ ಕಟ್ಟಕಡೆಗೆ—ತನ್ನ ಅಯಾಚಿತ–ಭಗ್ನ–ಪ್ರಣಯಕ್ಕೆ ಹಾಗೂ ಅದರಿಂದುಂಟಾದ ಅವಮಾನಕ್ಕೆ ನೊಂದಂತೆ, ಅದರಿಂದ ಅಸಹಾಯಳಾದಂತೆ, ಹಾಗೂ ಅವೆಲ್ಲಕ್ಕೂ ಕಡೆಗೆ

ತಿಲೋದಕವಿತ್ತಂತೆ! ಪ್ರಾಯಶಃ ಇದೇ ಅವಳು ಸುರಿಸಿದ ಮೊದಲ ಕಣ್ಣೀರು. ಎಷ್ಟು ಜೀವರ ಕಣ್ಣೀರಿನ ಹೊಳೆಯಲ್ಲಿ ಕಾಲಿಟ್ಟುಕೊಂಡು ಜಲಕ್ರೀಡೆಯಾಡಿ ಆಮೋದಗೊಂಡಿದ್ದಳೋ, ಎಷ್ಟು ಹತಪ್ರಣಯಿಗಳ ಹೃದಯ ಸರಸಿಯನ್ನು ಕಲಕಿಟ್ಟು ಬಗ್ಗಡಗೊಳಿಸಿದ್ದಳೊ, ಅವಳಿಂದು ಬಗೆ ಕದಡಿ ಹೋಗಿ, ಮರ್ತ್ಯನೊಬ್ಬನಿಂದ ಭಂಗಿತಳಾಗಿ ಕಣ್ಣೀರ್ಗರೆಯುತ್ತಾಳೆ. ಆದರೆ ಕಂಬನಿಯನ್ನು ಮೆಟ್ಟಿಕ್ಕಿ ಉರಿದೆದ್ದು ನಿಲ್ಲುತ್ತದೆ ಅಹಂಜ್ವಾಲೆ. ಆ ಅಶ್ರುಧಾರೆಯಲ್ಲಿ ತನ್ನ ರೋಷಧಾರೆಯನ್ನು ಮಸೆಯುತ್ತಾಳೆ! ಆದ್ದರಿಂದ ಅವಳ ಕಂಬನಿ ಅಬಲಾಶ್ರುವಾಗದೆ ಅತೃಪ್ತ ಪ್ರಣಯದ ಅಗ್ನಿ ಪರ್ವತ ಆಸ್ಫೋಟನ ಪೂರ್ವದಲ್ಲಿ ಸೂಸುವ ತಪ್ತಲಾವಾಶ್ರು ಬಿಂದುವಾಗುತ್ತದೆ. ಉಬ್ಬೇಗದ ವಿಕಾರದ ಚಿತ್ತಬುದ್ಧಿ ಮನಗಳು ಆತ್ಮವನ್ನು ಅದ್ಭುತವಾದ ಅಹಂಕಾರದ ನೊಗಕ್ಕೆ ಬಿಗಿದು ಕೆಡಹುತ್ತವೆ; ಆತ್ಮ ಆಗ ಅನಾತ್ಮವಾಗುತ್ತದೆ.

> ಕೆತ್ತಿದವು ತುಟಿ, ಕದಪಿನಲಿ ಕೈ ಹತ್ತಿಸುತ ತೂಗಿದಳು ಶಿರವನು,
> ತತ್ತ ರೋಷಾಯುಧವ ಮಸೆದಳು ಧಾರೆಗಂಗಳಲಿ!!
> ಎತ್ತಿದುಬ್ಬೇಗದ ವಿಕಾರದ ಚಿತ್ತ ಬುದ್ಧಿ ಮನಂಗಳು ಆತ್ಮನ
> ಜೊತ್ತಿಸಿದವು ಅದ್ಭುತದಹಂಕಾರದಲಿ ಕಾಮಿನಿಯ.

ಅದಮ್ಯ ಕಾಮ ತಿರಸ್ಕೃತವಾದಾಗ ಅದಮ್ಯ ರೋಷಾಗ್ನಿಯಾಗುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಶುದ್ಧಪ್ರೇಮ ಒಂದುವೇಳೆ ತಿರಸ್ಕೃತವಾದರೂ ಮಂಗಳ ಕಾರಕವೇ ಆಗುತ್ತದೆ. ಇಲ್ಲಿಯ ಊರ್ವಶಿ ಹಾಗಲ್ಲ. ಆದರೆ, ಅವಳು ಲೌಕಿಕ ನಿಯಮದೂರೆ: ಎಂದೂ ತಿರಸ್ಕಾರವರಿಯದ ಸರ್ವ ಪ್ರಾರ್ಥನಾಗರ್ವಿತೆ: ಸದಾ ಮೋದಲೋಲೆ; ನಿತ್ಯ ಉಷೆ! ಅಲ್ಲಿ ಅಂಬೆ, ಭೀಷ್ಮಧಿಃಕೃತೆಯಾದಾಗ, ಮರ್ತ್ಯಳಾಗಿದ್ದರೂ .ತಾನೊಲಿದವನನ್ನೆ ಕೊಲ್ಲಲು, ಮರುಭವದಲ್ಲಾದರೂ ತನ್ನಿನಿಯನಿಗೇ ಮೃತ್ಯುಚುಂಬನ ನೀಡಲೆಂದು ತಪಸ್ಸನ್ನು ಮಾಡುತ್ತಾಳೆ. ಮಹಾಭಾರತದ ರೌದ್ರಕ್ಕೆ ಉಚಿತವಾದ ಭಯಂಕರ ತಿರಸ್ಕೃತ ಪ್ರಣಯ ಶಕ್ತಿಗಳು ಇವು.

. ಮೇಲಿನ ಪದ್ಯದಲ್ಲಿ ಕವಿ ಆ 'ಕನ್ಯಾ ಅಗ್ನಿಪರ್ವತ'ದ ಪ್ರಪ್ರಥಮ ಭಯಂಕರಾಸ್ಫೋಟವನ್ನು ಅತ್ಯಂತ ಪರಿಣಾಮಕರವಾಗಿ ಚಿತ್ರವತ್ತಾಗಿ ಚಿತ್ರಿಸಿದ್ದಾನೆ. ಅವಳ ತುಟಿ ಕೆತ್ತುವುದು, ಕೆನ್ನೆಗೆ ಕೈಹತ್ತಿಕೊಳ್ಳುವುದು, ತಲೆಯನ್ನು ಮಹಾ

ನಾಗಿಣಿಯಂತೆ ತೂಗುವುದು, ಎಲ್ಲವೂ ಚಿತ್ರವತ್ತಾಗಿದೆ. ಮುಂದಿನ ಮಾತು: "ತತ್ತರೋಷಾಯುಧವ ಮಸೆದಳು ಧಾರೆಗಂಗಳಲಿ" ಎಂಬ ಅಗ್ನಿಸಿಲಿತ ಚಿತ್ರ ಕುಮಾರವ್ಯಾಸನ ವ್ಯಕ್ತಿಮುದ್ರೆಯನ್ನೆ ಹೊತ್ತಿದೆ. ಮತ್ತೂ ಮುಂದಿನ ಪಂಕ್ತಿಗಳು ಕವಿ ಅತ್ಯಂತ ಶ್ರೇಷ್ಠ ಮಾನಸ ಶಾಸ್ತ್ರಜ್ಞನೆಂಬುದನ್ನು ಸಾರುತ್ತಿವೆ: ಊರ್ವಶಿಯು ಆತ್ಮವನ್ನು ಉಬ್ಬೇಗದಿಂದ ವಿಕಾರಗೊಂಡ ಅವಳ ಚಿತ್ತಬುದ್ಧಿ ಮನಗಳು ಅದ್ಭುತ ಅಹಂಕಾರದಿಂದ ಜೊತ್ತಿಗೆ ಬಿಗಿಯುತ್ತವಂತೆ! ಈ ಉಕ್ತಿಯ ರೀತಿ, ಅದರ ಅರ್ಥಗೌರವ ಹಿರಿದು.

"ಎಲವೊ ! ಭಂಡರ ಭಾವ ! ಖೂಳರ ನಿಳಯ ! ಖಳರಧಿನಾಥ ! ವಂಚಕ
ತಿಲಕ ! ಗಾವಿಲರೊಡೆಯ ! ಬಂಧುವೆ ದುಷ್ಟನಾಯಕರ !"

ಬೈಗುಳದ ಸಹಸ್ರನಾಮವನ್ನೆ ಆರಂಭಿಸುತ್ತಾಳೆ ; ಆದರೂ ತೃಪ್ತಿಗೊಳ್ಳದೆ:

"ಎಲೆ ಮರುಳೆ ! ತಾನಾವಳೆಂಬುದ ತಿಳಿಯಲಾ ! ನೀನಾವನೆಂಬುದ
ಇಳೆಯುಱಿಯದೇ ಭಂಡ ! ಫಡ, ಹೋಗು" ಎಂದಳಿಂದುಮುಖಿ.
"ಒಲಿದು ಬಂದವರಾವು ! ಸೊಬಗಿನೊಳೊಲಿಸಿ ಮಱುಗಿಪ ಮಿಂಡ ನೀನು ! ಅತಿ
ಸುಲಭರಾವು ! ದುರ್ಲಭನು ನೀ ದೇವೇಂದ್ರ ಕಟಕದಲಿ !
ಎಲೆ ನಪುಂಸಕ ! ಗಂಡುವೇಷದ ಸುಳಿವು ನಿನಗೇಕೆ ?" ಎನುತ ಕಳ
ವಳಿಸಿ ಕರವೆತ್ತಿದಳು, "ಹಿಡಿ ! ಹಿಡಿ ! ಶಾಪವಿದೆ! " ಎನುತ.
ತುಳುಕಿತದ್ಭುತ ರೋಷ ! ಸುಯ್ಲಿನ ಝಳ ಹೊಡೆದು ಮೂಗುತಿಯ ಮುತ್ತಿನ
ಬೆಳಕು ಕುಂದಿತು !! ಅಮಳಚ್ಛವಿ ಮುಖಾಂಬುಜದ !
ಹೊಳೆ ಹೊಳೆವ ಕೆಂದಳದ ಸೆಳ್ಳುಗುರೊಳಮಯೂಖದ ಮಣಿಯ ಮುದ್ರಿಕೆ
ಗಳ ಮರೀಚಿಯುಲಿಸೆದುದೆತ್ತಿದ ಹಸ್ತವೂರ್ವಶಿಯ !

ಈ ಪದ್ಯವಂತೂ ಅತ್ಯಂತ ಪರಿಣಾಮಕಾರಿಯಾಗಿದೆ. ಮೂಗುತಿಯ ಮುತ್ತಿನ ಬೆಳಕು, ಹೆಣ್ಣಿನ ಕೋಮಲಕಾಂತಿ ಎಲ್ಲಾ ಆ ಸುಯ್ಲಿನ ಝಳಕ್ಕೆ ಮಸುಕಾಗಿ ಹೋಗುತ್ತದೆ, ಎನ್ನುವ ಚಿತ್ರವಂತು ಉಜ್ವಲವಾದುದು. ಅತ್ಯಸಾಧಾರಣ ಮೋಹಕ ಸೌಂದರ್ಯವತಿ ಆದ ಅವಳು, ಆ ಕೋಪದಲಿ, ಎಷ್ಟೆಲ್ಲ ಕೋಪಿಸಿ ಕೊಂಡರೂ ಕೇವಲ ಜ್ವಾಲೆ, ಕೇವಲ ಭಯಾನಕತೆ ಆಗಲಾರಳು. ಭಯಂಕರ ನಾದರೂ ಸುಮನೋಹರವಾಗಿಯೇ ತೋರುತ್ತಾಳೆ. ಕವಿಗೆ ಅತ್ತಕಡೆ ನಮ್ಮ ಗಮನಸೆಳೆಯಿಸುವ ಬಯಕೆ.

ರಾಹು ತುಡುಕಿದ ಶಶಿಯೊ? ಮೇಣ್ ರೌದ್ರಾಹಿ ಮಸ್ತಕ ಮಾಣಿಕವೊ! ಕಡು
ಗಾಹಿನಮೃತವೊ? ಕುಪಿತ ಸಿಂಹದ ಗುಹೆಯ ಮೃಗಮದವೊ?
ಲೋಹಧಾರೆಯ ಮಧುವೊ? ಕಳಿತ ಹಲಾಹಳದ ಕೆಚ್ಚಾಯವೆನಿಸಿತು
ರೂಪು ಸುಮನೋಹರ ಭಯಂಕರವಾಯ್ತು ಸುರಸತಿಯ!!
"ನರಮೃಗಾಧಮ! ನಿಮ್ಮ ಭಾರತ ವರುಷ ಭೂಮಿಯೊಳೊಂದು ವರುಷಾಂ
ತರ ನಪುಂಸಕನಾಗಿ ಚರಿಸು, ನಿರಂತರಾಯವಲಿ!
ಹರಿಯ ಮೆಱೆಯೊಗು! ಹರನ ನೀನನುಸರಿಸು! ನಿಮ್ಮಯ್ಯಂಗೆ ಹೇಳ್! ಇದು
ನಿರುತ! ತಪ್ಪದು! ಹೋಗು!" ಎನುತ ಮೊಗದಿರುಹಿದಳು ಚಪಲೆ.

ಅವಳ ಶಾಪಕ್ಕಿಂತಲೂ ಆ ಭಂಗಿಯೆ ಮರ್ಮೋದ್ಘಾಟನ ಸಾಮರ್ಥ್ಯವುಳ್ಳದಾಗಿದೆ. ಆ ಕೊನೆಯ ಭಂಗಿಯಲ್ಲಿ ಏನೆಲ್ಲ ಪ್ರತೀಕಾರ ತಿರಸ್ಕಾರ ಅಸಹ್ಯಗಳು ತುಂಬಿವೆ! ಇಷ್ಟಾದ ಮೇಲೆ, ಅವಳ ಕೋಪಜ್ವಾಲೆ ಅವನನ್ನು ಸುಟ್ಟು ಆರಿ ಹೋದ ಮೇಲೆ, ಅನನ್ಯ ಅಭಿಮಾನ ಭಂಗದ ಪರಿತಾಪಭಸ್ಮವೊಂದೆ ಉಳಿದು ನಿತ್ಯವೂ ಅವಳನ್ನು ಸುಟ್ಟಿರಬೇಕು, ಅಣುಭಸ್ಮದಂತೆ; ತನ್ನ ತಪ್ಪಿಗಾಗಿ ಮರುಗಿರಬೇಕು. ಅದಕ್ಕಾಗಿಯೂ ಏಕಾಂತದಲ್ಲಿ ಕಂಬನಿ ಮಿಡಿದಿರಬೇಕು. ಅಂತೂ ಅದನ್ನು ಕವಿ ಹೇಳಹೋಗಿಲ್ಲ. ಅವನ ಗಮನವೆಲ್ಲ ಪಾಪ, ಅರ್ಜುನನ ಕಡೆಗೆ. ಅವನ ಸ್ಥಿತಿಯೊ ಸಿಡಿಲೆರಗಿದ ಧೈರ್ಯದ್ರುಮವಾಗಿದೆ.

ಮೂಗನಾದನು, ಬಹಳ ಧೈರ್ಯದ ಬೇಗಡೆಯ ಬಿಡೆ ಬಿಗಿದ ಬೆಱಗಿನ
ಮೂಗಿನಂಗುಲಿಗಳ ಧನಂಜಯನೊಲೆದು ನಿಜ ಶಿರವ;
"ಆಗಲಿ! ಇದು ಸುರಭವನ! ವಧುಗಳು ನಾಗರಿಗರು, ಅವರೆತ್ತ ಭಾರತ
ಭೂಗತರು ತಾವೆತ್ತ? ಇದು ಘಟಿಸಿದುದು ವಿಧಿ!" ಎಂದ.

ಅರ್ಜುನನಾಗ ಮೂಗ; ಧೈರ್ಯವಿದ್ದರೂ ಅದು ಬೇಗಡೆಯ ಧೈರ್ಯ! ಬೆರಗಿದ್ದರೂ ನಾಚಿಕೆ ಬಿಗಿದಿದೆ ಅದನ್ನು. ಮತ್ತೇನು ತಲೆತೂಗದೆ! ತಾನೇನೂ ಇಂದ್ರನಿಗೆ ಹೇಳಲಿಲ್ಲ, ಆಕೆಯನ್ನು ಬಯಸಲೂ ಇಲ್ಲ. ಆದರೂ ಹೀಗೆಲ್ಲ ಆಯಿತಲ್ಲ, ಏನಿದು ವಿಚಿತ್ರ ದುರಂತ ಪರಿಹಾಸ! ಹೋಗಲಿ, ಇವರು ನಾಗರಿಕರು, ತಾನೊ ಮರ್ತ್ಯ; ಎಂದಷ್ಟೆ ವಿಷಾದ. ಸಮಾಧಾನ. ಆದರೆ ಒಂದು ವರ್ಷದ ತನಕ ನಪುಂಸಕನಾದೆನಲ್ಲ, ದೇಹಾಂತರವನ್ನು ಅಂಗೀಕರಿಸುವೆನಲ್ಲ, ಸುಡಲಿ ತನ್ನ ಬದುಕನ್ನು, ಎಂದು ನೋಯುತ್ತಾನೆ. ಊರ್ವಶಿಗೆ ತಿರಸ್ಕಾರ

ಹೇಗೆ ಏಕೈಕ ಮಾರಕಾಸ್ತ್ರವಾಗಿತ್ತೋ ಹಾಗೆಯೇ ಅರ್ಜುನನಿಗೂ ಆ ಪೌರುಷ ಭಂಗ ಆತ್ಮಹತ್ಯಾಕಾರಿಯೆ ಆಗಿದೆ. ಅವಳಿಗೆಂತೊ ಇವನಿಗೂ ಆ ಘಳಿಗೆಯಲ್ಲಿ ಅಂತಹ ಅಭಿಮಾನಭಗ್ನಗತಿಗಿಂತ ಸಾವೆ ಸೊಗವಾಗಿ ತೋರುತ್ತದೆ. ಊರ್ವಶಿಗೆ ಮೊದಲಾದ ಅನುಭವವೆ ಆಮೇಲೆ ಅರ್ಜುನನಿಗಾಯಿತು. ಊರ್ವಶಿಯೆಷ್ಟು ಅಹಂಭಾವಪುಷ್ಟಳೊ ಅರ್ಜುನನೊ ಅಷ್ಟೆ ಸೂಕ್ಷ್ಮಾಭಿಮಾನಪುಷ್ಟ. ತಾನು ತೋರಿದ ಸಾಮರ್ಥ್ಯ ತನ್ನ ಪೌರುಷದ ಧರ್ಮದ ಶಕ್ತಿದ್ಯೋತಕವೆಂದು ಬಗೆದಿದ್ದ ಅವನಿಗೆ ಇದ್ದಕ್ಕಿದ್ದಂತೆ ಭಗ್ನಸ್ಥಿತಿ ಒದಗಬೇಕೆ.

ಅದಿರಲಿ, ಇದೇನೆಂಥ ನ್ಯಾಯ ? ಯಾವ ತಪ್ಪಿಗೆ ಏನು ಶಿಕ್ಷೆ? ತಪಸ್ಸನ್ನು ಆಚರಿಸಿದುದರಿಂದ ಪಾಶುಪತ ಬಂದಿತು ; ಧರ್ಮವೆ ತಪ ಎಂದು ಅರಿತು ನಡೆದರೆ ಹೀಗೆ ಷಂಡತನವಾಯಿತಲ್ಲ. ಏನಿದು ? ಎರಡೂ ತಪವೇನೊ ಅಹುದು; ಆದರೆ ಫಲದಲ್ಲಿ ವಿಪರೀತವಾದುವಲ್ಲ? '**ಗಹನತರವೇ ವಿಪುಳಕರ್ಮಸ್ಥಿತಿ**' ಎನ್ನುತ್ತ ತಲೆ ತೂಗುತ್ತಾನೆ. ಎಲ್ಲಕ್ಕಿಂತ ಹೃದಯ ವಿದ್ರಾವಕವಾದುದೆಂದರೆ ಈ ಮುಂದಿನದು :

> "ಶಿವನ ಶರವೆನಗಾಯ್ತು ! ರಿಪುಕೌರವನ ರಕುತದ ರಾಟಳವನೆ
> ತ್ತುವೆನು ! ಕಟ್ಟಾ ! ಮಡಿಯ ! ಎಂಬೆ ದುರುಪದೀ ಸತಿಗೆ ?
> ಇವಳು ಭಂಗಿಸಿ ಭೂತುಗೆಡಹಿದ ಹವಣನಾರಿಗೆ ಹೇಳುವೆನು ? ವರ
> ಯುವತಿಗೀ ನುಡಿಯೊಸಗೆಯೇ !? ಹಾ !" ಎನುತ ಬಿಸುಸುಯ್ದ

ಈ ಸನ್ನಿವೇಶದ ಹೃದಯವಿದ್ರಾವಕತೆಯನ್ನು ಈ ಮಾತುಗಳಿಗಿಂತ ಬೇರೆ ಯೆಂತು ಹೇಳುವುದು ? ತಾನು ಊರಿಗೆ ಹಿಂತಿರುಗಿ ನಂತರ ತನ್ನ ಅಣ್ಣ ತಮ್ಮಂದಿರಿಗೆ ಅದರಲ್ಲೂ ತನ್ನನ್ನು ಪ್ರಚೋದಿಸಿ ಕಳಿಸಿದ, ತನ್ನ ಸಾಧನೆಗೆ ಮೂಲಭೂತಕಾರಣವಾದ ಆ ದ್ರೌಪದಿಗೆ ತನ್ನ ಸಾಧನಾಫಲವನ್ನು ತೋರುವ ಆಸೆಯಿತ್ತು. ಅವಳ ಬತ್ತದ ಕಂಬನಿಯನ್ನು ಒರಸುವಾಸೆಯಿತ್ತು. ತನ್ನ ಮಹಾಸ್ತ್ರಗಳನ್ನು ತೋರಿಸಿ ತಾನಿನ್ನು ಆಕೆಯ ಶತ್ರುಗಳ ರಕ್ತದ ರಾಟಳವೆತ್ತು ವುದಾಗಿ ಧೈರ್ಯಾಲಾಪಮಾಡುವ ಇನಿಬಯಕೆಯಿತ್ತು. ಆಕೆ ತಾನು ತಪಸ್ಸಿಗೆ ಬರುವಾಗ ಏನೇನನ್ನು ಏಕಾಂತದಲ್ಲಿ ಹೇಳಿದ್ದಳೊ ! ಕುಮಾರವ್ಯಾಸ ಹೇಳದೆ ಬಿಟ್ಟಿರುವ ಆ ಅವಳ ಏಕಾಂತೋಕ್ತಿಗಳನ್ನು ಭಾರವಿಯ ಮಾತಿನಲ್ಲಿ ಕೇಳಿ :

> ಭರದಿಂ ಮುನಿವಚನವ ನೀನೆಸಗುತೆ
> ಸಫಲಂಗೊಳಿಸುವಾ ಸೆಯನು ;

ಕಾರ್ಯವ ಸಾಧಿಸಿ ಮರಳಿದ ನಿನ್ನನು
ಅಪ್ಪುತೆ ನಾಂ ಮೊಲೆಯೊತ್ತುವೆನು.*

ಈಗ ಪಾಶುಪತವನ್ನು ಕಂಡೊಡನೆಯೆ ತನ್ನ ಕೃತಜ್ಞತಾ ಪ್ರೀತಿಯನ್ನು ಆ ಸತಿ ತೋರಬಂದರೆ ಏನೆಂದು ಹೇಳುವುದು? ನಿಜಸಂಗತಿಯನ್ನು ಹೇಳಿದರೆ "ಆ ನುಡಿ ಒಸಗೆಯೇ? ಹಾ!" ಊರ್ವಶಿಗಾದ ನೋವಿನನುಭವ ಅವನಿಗಾಗ ಆಗುತ್ತದೆ. ಅದೆ ಅವಳ ಉದ್ದೇಶ! ಶಾಪಕೊಡುವುದಷ್ಟೆ ಆಗಿದ್ದರೆ ಬೇರೆನಾದರೂ ಶಪಿಸಬಹುದಿತ್ತಲ್ಲ. ಆದರೆ ಅದಾವುದರಿಂದಲೂ ತಮ್ಮ ಮುರಿದ ಭಾವಗಳನ್ನು ಅಹಮ್ಮನ್ನು—ನಿಲ್ಲಿಸಿದಂತಾಗುವುದಿಲ್ಲ. ಅವನಾಗ ಗಂಡು, ಷಂಡ: ಎಂಬ ತೃಪ್ತಿ ಮುಖ್ಯ; ಅದೆ ಅರ್ಜುನಿಗೆ ಭಯಂಕರ.

ಇತ್ತ ಕಡೆ ಚಿತ್ರಸೇನನ ಮೂಲಕ ಅರ್ಜುನನಿಗಾದ ಗತಿಯನ್ನರಿಯುತ್ತಾನೆ ದೇವೇಂದ್ರ. ನೇರವಾಗಿ ಬಂದು ಮಗನನ್ನು ಸಂತೈಸಲೆಳಸುತ್ತಾನೆ; ಅವನನ್ನಪ್ಪಿಕೊಂಡು ಮುಂಡಾಡಿ ಬೇಡಿಕೊಳ್ಳುತ್ತಾನೆ: "ಮೊಗದ ತನಿ ಹಳಹಳಿಕೆ ನೇತ್ರಾಂಬುಗಳೊಳದ್ದುದು, ನಿಜ ಮನೋವೃತ್ತಿಗಳೊಳಗೆ ನುಡಿ ಮುಳುಗಿತು! ಏನಿದು ವಿಚಿತ್ರವಾಯ್ತು?" ಎಂದು ಕೇಳುತ್ತಾನೆ. ಲೋಕೈಕವೀರ ಅರ್ಜುನ, ಷಂಡನಾಗೆಂದು ಶಾಪಗೊಂಡ ಧೀರ ಧನಂಜಯ, ತನ್ನ ಸ್ಥಿತಿಗೆ ನಾಚಿ "ತಲೆವಾಗಿದನು, ಲಜ್ಜೆಯ ಝುಡಿತೆಯಲಿ ಝೊಮ್ಮೇರಿದಂತೆ ಎವೆ ಮಿಡುಕದೆ" ತಟಸ್ಥನಾದನು. ಮತ್ತೆ ಮತ್ತೆ ಅವನನ್ನು ಸಂತೈಸಿ ಇಂದ್ರ ಬೇಡಿಕೊಳ್ಳುತ್ತಾನೆ:

"ಬಿಡು ಮನೋಗ್ಲಾನಿಯನು, ಸತಿ ಕೆಡೆನುಡಿದುದೆಲ್ಲವ ಎನಗೆ ಸೈರಿಸು!
ಮಡದಿಯರಲೇನುಂಟು ಗುಣ! ಎನ್ನಾಣೆ!" ಎಂದು.

ಮೇಲಿನ ಮಾತಿನ ಸೊಗಸೆ ಸೊಗಸು. ಹಾಗೂ ಇವಳ ಶಾಪವೆ ಅವನಿಗೆ ವರವಾಯಿತು ಎಂದು ಆಶ್ವಾಸ ನೀಡುತ್ತಾನೆ. "ನಿಮ್ಮಜ್ಞಾತವಾಸದಲಿ ನೆರೆ ಜೋಡಲಾ ಜಾಣಾಯ್ತು ರಿಪುಜನ ದೃಷ್ಟಿ ಶರಹತಿಗೆ! ಕೂಡಿತಿದು ಪುಣ್ಯದಲಿ, ಸುರಸತಿ ಮಾಡಿದಪಕೃತಿ ನಿನ್ನ ಭಾಷೆಯ ಬೀಡ ಸಲಹಿದುದು! ಅರಿಯೆ! ನೀ ಸಾಹಿತ್ಯನಲ್ಲ! ಎಂದ." ಇಂದ್ರನ ಈ ಮಾತಿನ ಚಿತ್ರದಲ್ಲಿ ವ್ಯಕ್ತವಾಗುವ

---

* ಡಾ. ಕೆ. ಕೃಷ್ಣಮೂರ್ತಿ ಅವರ ಅನುವಾದ: ಕನ್ನಡ ಕಿರಾತಾರ್ಜುನೀಯ, ಮೂರನೆಯ ಸರ್ಗ, ಪದ್ಯ ೫೪

ಧ್ವನಿಯ ಸೊಗಸನ್ನು ನೋಡಬಹುದು. ಈ ಶಾಪ, ಮುಂದೆ ಅಜ್ಞಾತವಾಸ ದಲ್ಲಿ ಪಾಂಡವರನ್ನು ಜಾಣರ ಕಣ್ಣಿನ ನೋಟದ ಬಾಣದೇರಿಂದ ಕಾಪಾಡತಕ್ಕ ಕವಚವಾಗುತ್ತದೆ; ಅಷ್ಟೆ ಅಲ್ಲ ಆ ಶಾಪದ ಅಪಕೃತಿಯೆ ಅವರ ಪ್ರತಿಜ್ಞೆಯ ಮನೆಯನ್ನು ಕಾಯುತ್ತದೆ, ನಾಯಾಗಿ. ಇಲ್ಲಿ ಶಾಪ ದೇವಜಾಯಾಲಯ ವಾಗುತ್ತದೆ. ಹೀಗೆ ಅರ್ಜುನನ್ನು ಸಂತೈಸಿ ತನ್ನರಮನೆಗೆ ಒಯ್ದು ವಿನೋದ ವಿಭವದಲ್ಲಿ ದುಃಖವನ್ನು ಮರೆಯುವಂತೆ ಮಾಡುತ್ತಾನೆ. ದಿಕ್ಪಾಲಕರು ಶಸ್ತ್ರಾಸ್ತ್ರಗಳನ್ನು ನೀಡುತ್ತಾರೆ. ಹೀಗೆ ಕಥೆ ಮುಂದೆ ಬೇರೆಪಾರಿ ಹಿಡಿಯುತ್ತದೆ. ಮತ್ತೆಲ್ಲಾದರೂ ತನಿಯಾಗಿ ಬಂದಿದ್ದರೆ ಈ ಕಥೆಯೆ ಇನ್ನೂ ಬೇರೆ ರೂಪವನ್ನು ತಾಳಬಹುದಿತ್ತೇನೊ.

ಮಹಾಭಾರತದ ಆ ಮಹಾವಿಸ್ತಾರದಲ್ಲಿ ವ್ಯೆದೋರುವ ಈ ಭೀಷಣ ಪ್ರಣಯಕಥೆ ಪ್ರಣಯಕಥೆ ಮಾತ್ರವಾಗಿಯೆ ಮುಖ್ಯವಾಗಿಲ್ಲ. ಈ ಹಿಂದೆ ತೋರಿಸಲು ಯತ್ನಿಸಿರುವ ನಾನಾ ಕಾರಣಗಳಿಂದಾಗಿ ಅದು ಮುಖ್ಯ ಕಥೆಯ ಘಟನೆಯೊಳಗೆ ಸೇರಿಕೊಂಡುಹೋಗಿದೆ. ಹಾಗಾಗಿ ಆ ಪ್ರಧಾನಕಾವ್ಯದ ಭೀಷಣತೆಯೆ ಇದಕ್ಕೂ ಅಂಟಿಕೊಂಡಿದೆ. ಇದೊಂದೆ ಏಕೆ, ಮಹಾಭಾರತ ದಲ್ಲಿ ಬರುವ ಒಂದೊಂದು ಶೃಂಗಾರ ಸನ್ನಿವೇಶವೂ ರುದ್ರಚ್ಛಾಯೆಯಿಂದಲೇ ಆವೃತವಾಗಿದೆ.* ದುರಂತವಾಗಬಹುದಿದ್ದ ಈ ಪ್ರಸಂಗ, ಶಿವಾವರಣದಿಂದಾಗಿ ಮಂಗಳಾಂತವೆ ಆಗಿದೆ, ರೌದ್ರಾಚ್ಛಾದಿತವಾಗಿದ್ದರೂ.

ಮಹಾಭಾರತ ರೌದ್ರಮಯ ಕರ್ಮಜಾಲದ ಒಂದು ಮಹಾಕಥೆ. ಕೌರವ ರಿಂದ ಹಿಡಿದು ಕೃಷ್ಣನವರೆಗೆ ಯಾರೂ ಆ ಕರ್ಮಗರ್ತದಿಂದ, ಒಂದಲ್ಲ ಒಂದು ಕಾರಣದಿಂದಾಗಿ ತಪ್ಪಿಸಿಕೊಳ್ಳಲಾಗಿಲ್ಲ. ಆ ಅದೆ ಕರ್ಮವರ್ತುಲದಲ್ಲೆ ಈ ಊರ್ವಶೀ ಕೂಡ ಬಂಧಿತಳಾಗಿದ್ದಾಳೆ. ಆಗ, ಬಹುಹಿಂದೆ ಆ ಪ್ರಣಯಾರ್ತ ಪುರೂರವನನ್ನು ತನ್ನ ಮಿಂಚಿನ ತೋಳಿಂದಪ್ಪಿ ಸಿಡಿಲ ತುಟಿಯಿಂದ ಚುಂಬಿಸಿ ಸುಟ್ಟು ತಿರಸ್ಕರಿಸಿ ಬಿಸುಟ್ಟು,

"ನ ವೈ ಸ್ತ್ರೈಣಾನಿ ಸಖ್ಯಾನಿ ಸಂತಿ
ಸಾಲಾವೃಕಾಣಾಂ ಹೃದಯಾನ್ಯೇತಾ—"*

---

* ಶ್ರೀ ತೀ. ನಂ. ಶ್ರೀ ಅವರ 'ಕನ್ನಡ ಭಾರತದಲ್ಲಿ ಶೃಂಗಾರ ಸನ್ನಿವೇಶಗಳು' ಎಂಬ ಲೇಖನವನ್ನು ನೋಡಿ—"ಕಾವ್ಯಸಮೀಕ್ಷೆ."

ಎಂದು ಹೋದ ಈ ಚಿರಭಂಗುರ ಕಾಮಿನಿ ಊರ್ವಶಿ, ಇಂದು ಅದೇ ಆ ಪುರೂರವ ವಂಶೋದ್ಭವನಾದ ಅರ್ಜುನನಿಂದಲೆ ಪ್ರತ್ಯಾಘಾತಗೊಳ್ಳುತ್ತಿರುವುದು, -ಇಲ್ಲಿನ ಕಾರಣ ಎಷ್ಟೇ ಮಹೋನ್ನತವಾದುದಾದರೂ- ಎಂಥ ವಿಚಿತ್ರಕರ್ಮವಿಧಿಯಿರಬೇಕು. 'ಕರ್ಮದ ಪಾಂಗು : ಮರಿಗೆ ಮರಿ : ಮರಿಗೆ ಮರಿ : ಬೆರಳ್ಗೆ ಕೊರಳ್ !' ಎನ್ನುವ ಶ್ರೀಕವಿ ಕುವೆಂಪು ಅವರ ಮಹಾಭಾರತ ದರ್ಶನಭಾಷ್ಯ ಇದಕ್ಕೂ ಒಪ್ಪುತ್ತದಲ್ಲವೆ ?

ಆದರೆ, ಆಮೇಲೆ ಊರ್ವಶಿಯ ಪಾಡೇನಾಯಿತು ? ಅರ್ಜುನನಿಗೊದಗಿದ ಶಾಪ ಹೇಳಿಕೊಳ್ಳಲು ಬಾರದಂತಹುದಾದರೂ ಅದು ಯಾರಿಗಾದರು ತಿಳಿದರೂ ಅದರಿಂದ ಅವನಿಗೆ ಕೀರ್ತಿಯೆ ಬರುತ್ತಿತ್ತು ; ಹಾಗೂ ಅದು ಅವನನ್ನು ಅಜ್ಞಾತವಾಸದಲ್ಲಿ ಜಾಣಾಯ್ಲರ ಕಣ್ಣೇರಿನಿಂದ ಕಾಯುವ ಜೋಡಾಯಿತು, ಭಗವದ್ ಕೃಪಾಜಾಯಾಲವಾಯಿತು. ಆದರೀ ಊರ್ವಶಿಗಾದ ಬೆಂಕಿಯ ಬೊಟ್ಟು ಮಾಯಿತೇನು ? ಮಾದರೂ, ಆ ಸುಟ್ಟಗಾಯದ ಗುರುತು ಅವಳ ಕನ್ನಡಿಗೆನ್ನೆಯಿಂದ ಮರೆಯಾಯಿತೇನು ? ಯಾರಾದರೂ ಆ ಗುರುತನ್ನು ಕಂಡರೆ ? ಅದು ಯಾರಿಗೂ ಕಾಣದಿರಲೆಂದು ಏನಾದರೂ ಅವಳು ಅವಕುಂಠನವತಿಯಾದಳೇನು ? ಅವಳ ಚಿರನೂತನ ಉಷಃಸೌಂದರ್ಯವನ್ನು ನುಂಗಬಂದ ಈ ಸೂರ್ಯೋದಯ ಛಾಯೆ ಯಾರ ಕಣ್ಣಿಗಾದರೂ ಬಿದ್ದಿತೆ ? ತನ್ನ ಏಕಾಂತದಲ್ಲಿ ಅವಳು ಅತ್ತತ್ತು ಸುರಿಸಿದ ಕಂಬನಿಯ ಕರೆಯ ಗೆರೆ ಅವಳ ಕಣ್ಣಂಚಿನಲ್ಲಿ ಕಂಡೂ ಕಾಣದಂತಿದ್ದುದನ್ನು ಯಾರಾದರೂ ಗುರುತಿಸಿದರೇನು ? ಅವಳು ಇನ್ನೂ ಉಷೆಯಾಗಿಯೆ ಉಳಿದಳೆ ? ಹಗಲಾಗಿ ಕರಗಿ ಬಾನ್ತುಂಬಿಕೊಂಡಳೆ ? ಈ ಎಲ್ಲ ಠಾಕೂರರಂತಹ ಭಾವುಕ ಕವಿಗಾಗಿ ಕಾದಿದೆ.

## ಕೆಲ ಟಿಪ್ಪಣಿ

೧. ಭಂಡಾರ್ಕರ್ ಸಂಶೋಧನಾಲಯದ ಮುದ್ರಣದಲ್ಲಿ ಈ ಊರ್ವಶೀ ಅರ್ಜುನ ಕಥಾ ವೃತ್ತಾಂತವನ್ನು ಕೊಟ್ಟಿಲ್ಲ. ಇದು ಇತ್ತೀಚಿನ ಸೇರಿಕೆಯೆಂದು ನಿರ್ಣಯಿಸಿ ಈ ಭಾಗವನ್ನು ಪರಿಶಿಷ್ಟವಾಗಿ ಕೊಡಲಾಗಿದೆ. ಗೋರಕ್‌ಪುರದ ಮುದ್ರಣದಲ್ಲಿ ಇದನ್ನು ಪಾಠವಾಗಿಯೆ ಕೊಡಲಾಗಿದೆ. ಆ ಕಥೆಯಷ್ಟನ್ನೆ ನೋಡಿದರೆ ಚೆನ್ನಾಗಿಯೆ ಕಾಣುತ್ತದೆ. ಅದರಲ್ಲಿ ಕುಮಾರವ್ಯಾಸನ ಈ ಪ್ರಸಂಗದಲ್ಲಿರುವ ಉಜ್ವಲತೆ ಅಷ್ಟಾಗಿ ತೋರದಿದ್ದರೂ ಕುಮಾರವ್ಯಾಸನಲ್ಲಿ ಅಲ್ಲಿರುವ ಸಂಯಮ ತುಸು ಕಡಿಮೆ ಎಂದೆ ಹೇಳಬಹುದು. ಅದು ಹೋಗಲಿ, ಆದರೆ ಈ ವೃತ್ತಾಂತ ಯಾವಾಗ

ಮಹಾಭಾರತದ ಕಥಾವಸ್ತುವಿನಲ್ಲಿ ಸೇರಿಹೋಯಿತು ? ಪಂಪನ ಕಾವ್ಯದಲ್ಲಿ ಊರ್ವಶಿಯ ಬದಲು ರಂಭೆಯೊಬ್ಬಳು ಪಾರ್ಥನ ಗಂಡಗಾಡಿಗೆ ಸೋತು ಅವನನ್ನು ತಿರಸ್ಕೃತಳಾಗಿ ಶಾಪಕೊಡುತ್ತಾಳೆ. ಈ ಇಷ್ಟು ಕಥೆ ಸಾಲ್ಕೈದು ಪಂಕ್ತಿ ಗದ್ಯದಲ್ಲಿ, ಒಂದು ಕಂದದಲ್ಲಿ ಬಂದು ಹೋಗುತ್ತದೆ.

"ಅಂತು ದೇವಲೋಕದೊಳ್ ತನ್ನ ಮಾತೆ ಮಾತಾಗಿರ್ದ ಪರಾಕ್ರಮ ಧವಳನ ಪರಾಕ್ರಮಕ್ಕಂ ಗಂಡಗಾಡಿಗಂ ರಂಭೆ ಸೋಲ್ತು ಸೈರಿಸಲಾಱದೇಕಾಂತದೊಳ್ ಮೇಲೆ ಬಿಜ್ದೊಡೆ—

ಎಂದು ಪುರಂದರನರಸಿಯ
ಯಂದುಪದೆಸಗಬ್ಬೆಯೇ ತೊಡಳ್ ನುಡಿಯದೆ ಪೋ
ಗೆಂದೊಡದೊಂದಬ್ಬದೊಳೆ ಬೃ
ಹಂದಳೆಯಾಗೆಂದು ಮುನಿದು ಶಾಪಮನಿತ್ತಳ್ ೩೯

ಇತ್ತೊಡೆಂತುಮಾಂ ಪರಸ್ತ್ರೀಯರ ದೆಸೆಯೊಳಮಣ್ಣನ ನನ್ನಿಯ ವರ್ಷಾವಧಿಯೊಳ ನೋತು ಪಿಡಿವೆಂ ನಿನ್ನ ನುಡಿಯೊಳೇ ದೋಷಮೆಂದು ತನ್ನ ಶೌಚದ ಮೇಗಣ ಕಲಿತನಮುಮಂ ಸೌಭಾಗ್ಯದ ಮೇಗಣ ಬಲ್ಲಾಳ್ತನಮುಮನ್ ಇಂದ್ರಲೋಕದಿಂ ಪೊಗೞಿಸಿ ಸುಖಮಿರ್ಪನ್ನೆಗಮ್"

ಆಶ್ವಾಸ ೮, ಪುಟ ೨೦೦-೧

ಪಂಪನ ಕಾಲಕ್ಕಾಗಲೆ ಈ ಊರ್ವಶೀ ವೃತ್ತಾಂತ ಮಹಾಭಾರತ ಕಥೆಯಲ್ಲಿ ಸೇರಿ ಹೋಗಿರುವುದು ನಿಶ್ಚಯ. ಹನ್ನೊಂದನೆಯ ಶತಮಾನದ ತೆಲುಗು ಕವಿ ನನ್ನಯನ ಭಾರತದಲ್ಲಿ ಈ ಪ್ರಸಂಗ ಸಂಗ್ರಹವಾಗಿ ನಿರೂಪಿತವಾಗಿದೆ. ಆತ ಪಂಪನ ಪ್ರಭಾವಕ್ಕೊಳಗಾಗಿದ್ದಾನೆಯೆಂದು ಹೇಳುತ್ತಾರೆ. ಆದರೆ ಆವನು ಊರ್ವಶೀ ಪ್ರಸಂಗವನ್ನು ವ್ಯಾಸಭಾರತದ ಪ್ರಕಾರವಾಗಿ ಚಿತ್ರಿಸಿರುತ್ತಾನೆ. ಆದರೇಕೆ ಪಂಪ ಊರ್ವಶಿಯ ಬದಲು ರಂಭೆಯನ್ನು ಹೆಸರಿಸುತ್ತಾನೆ ? ಅದವನಿಗೆ ಮುಖ್ಯವಾಗಿರಲಿಲ್ಲವೆ ? ಅರ್ಜುನನ 'ಶೌಚಾಂಜನೇಯತ್ವ'ವನ್ನು ಪ್ರತಿಬಿಂಬಿಸುವ ಈ ಪ್ರಸಂಗವನ್ನೇಕೆ ಬಹು ಲಘುವಾಗಿ ಚಿತ್ರಿಸಿದ ? ಊರ್ವಶೀ ಕಥೆ ಮಹಾಭಾರತದಲ್ಲಿನ್ನೂ ತುಂಬುರೂಪ ಪಡೆದಿರಲಿಲ್ಲವೆ ? ಅಥವಾ ಪಂಪನಿಗಿದ್ದ ಆತುರವೇನಾದರೂ ಇದೆಲ್ಲಕ್ಕೂ ಕಾರಣವಾಯಿತೆ ತಿಳಿಯದು...ಊರ್ವಶೀ ಪ್ರಸಂಗ ಕ್ಷೇಮೇಂದ್ರನ "ಭಾರತ ಕಥಾ ಮಂಜರಿ" ಯಲ್ಲಿ ಬಂದಿಲ್ಲವೆಂದು ಭಂಡಾರ್ಕರ್ ಮುದ್ರಣದ ಸಂಪಾದಕರು ತಿಳಿಸಿರುತ್ತಾರೆ. ಆದರೂ ಕುಮಾರವ್ಯಾಸನಿಗಿಂತ ಪಂಪನಿಗಿಂತ ಮುನ್ನವೆ ಈ ಪ್ರಸಂಗ ಮಹಾಭಾರತಕ್ಕೆ ಸೇರಿಹೋಗಿತ್ತೆಂದು ಭಾವಿಸುವುದು ತಪ್ಪಲ್ಲ.

೨. ಮಹರ್ಷಿ ವ್ಯಾಸರಲ್ಲೂ, ಈಶ್ವರ ಅರ್ಜುನನನ್ನು ಸ್ವರ್ಗಕ್ಕೆ ಹೋಗೆಂದು ನಿರ್ದೇಶಿಸುತ್ತಾನೆ ; "ಸ್ವರ್ಗಂ ಗಚ್ಛ ।" ಎಂದಷ್ಟೆ ಹೇಳುತ್ತಾನೆ. ಕುಮಾರವ್ಯಾಸ ಹೇಳುವಂತೆ : "ಹರಿ ಸಹಾಯನು, ನಮ್ಮ ಸತ್ತ್ವದ ಪರಮ ರೂಪಾತನು ಕಣಾ !

ನೀನಜಾದಿರು !" ಎಂದೇನೂ ಹೇಳುವುದಿಲ್ಲ. ಕೃಷ್ಣಪಾತ್ರ ಅಲ್ಲಿಂದಿಲ್ಲಿಗೆ ಎಷ್ಟೋ ಬೆಳದಿದೆ ಎನ್ನುವುದಕ್ಕೆ ಇವೆಲ್ಲ ನಿದರ್ಶನಗಳು...ಅದು ಹೋಗಲಿ, ಪರಮೇಶ್ವರ ಪಾಶುಪತಾಸ್ತ್ರವನ್ನು ಕೊಡುವ ವೇಳೆ ಅರ್ಜುನನ ಮೈಯನ್ನು ಮುಟ್ಟಲು ಅವನಲ್ಲಿದ್ದ ಕಿಂಚಿದಶುಭವೆಲ್ಲವೂ ನಾಶವಾಯಿತಂತೆ !

ಸ್ಪೃಷ್ಟಸ್ಯ ತ್ರ್ಯಂಬಕೇಣಾಥ ಪಾಲ್ಗುನಸ್ಯಾಮಿತೌಜಸಃ !
ಯತ್ ಕಿಂಚಿದಶುಭಂ ದೇಹೇ ತತ್ ಸರ್ವಂ ನಾಶಯೀಮಿನತ್ ॥೨೪॥

ಈ ಮಾತು ಕುಮಾರವ್ಯಾಸನ ಕಣ್ಣನ್ನೇಕೆ ತಪ್ಪಿಸಿಕೊಂಡಿತೊ ತಿಳಿಯದು. ಅವನ ದೃಷ್ಟಿಯಲ್ಲಿ, ಅರ್ಜುನ ಕೃಷ್ಣ ಸಾನ್ನಿಧ್ಯದಲ್ಲಿದ್ದೂ ಮತ್ತೆ ಮತ್ತೆ ಗ್ಲಾನಿಗೊಳಗಾಗುತ್ತಿದ್ದುದರಿಂದ ಹಾಗೆ ಕಿಂಚಿದಶುಭವನ್ನೂ ಶಾಶ್ವತವಾಗಿ ಕಳೆದುಕೊಂಡ ಎನ್ನುವುದು ಸರಿತೋರಿಲ್ಲದಿರಬಹುದು. ಅದಕ್ಕೊ ಏನೊ ಅವನು, ಶಿವ ಅರ್ಜುನನ ಮೈದಡವಿದ ಸನ್ನಿವೇಶವನ್ನು ಹೀಗೆ ವರ್ಣಿಸಿದ್ದಾನೆ :

ಹರನ ಕೋಮಲ ಪಾಣಿಕಮಲ
ಸ್ಪರುಶ ಪೀಯೂಷದಲಿ ಮುಳುಗಿದ
ನರನ ತನು ನಿರ್ಮೋಕಮುಕ್ತ ಭುಜಂಗನಂದದಲಿ
ಕಿರಣಲಹರಿಯ ಲಳಿಯ ದಿವ್ಯೋ
ತ್ಕರದ ಚಪಲಚ್ಛವಿಯ ಚಾರು
ಸ್ಫುರಣದಲಿ ಬೋಳೈಸಿದುದು ಸುರನರರ ಕಣ್ಮನವ !

ಮೇಲೆ ಬರುವ ಪ್ರತಿಮೆ ಧ್ವನಿಪೂರ್ಣವಾದುದ್ದು. ಅರ್ಜುನ ಆಗ ಈಶ್ವರ ಸ್ಪರ್ಶ ಪೀಯೂಷದಲ್ಲಿ ಮುಳುಗಿ ಮುಕ್ತನಾದಂತಾಗುತ್ತಾನೆ ; 'ಕಿರಣ ಲಹರಿಯ ಲಳಿಯ ದಿವ್ಯೋತ್ಕರದ ಚಪಲಚ್ಛವಿಯ ಚಾರುಸ್ಫುರಣದಲಿ' ಸುರನರರ ಕಣ್ಮನವನ್ನು ಬೋಳೈಸುವಷ್ಟು ತೇಜಸನ್ನೂ ಗಳಿಸಿಕೊಳ್ಳುತ್ತಾನೆ. ಆದರೆ ಅದು ನಾಗರ ತನ್ನ ಪೊರೆ ಕಳಚಿದಂತೆ ಮಾತ್ರ. ಆ ಪೊರೆ ಮತ್ತೆ ಬಂದೆ ಬರುತ್ತದೆ. ಇಡೀ ಮಹಾಭಾರತದಲ್ಲೆಲ್ಲ ಅರ್ಜುನನಂತೆ ದಿವ್ಯಜ್ಞಾನದ ಸ್ಪರ್ಶವನ್ನು ಪಡೆಯುತ್ತಲೆ ಇದ್ದೂ ಮತ್ತೆ ಮತ್ತೆ ಗ್ಲಾನಿಗೊಳಗಾಗುತ್ತಿದ್ದವರು ಇಲ್ಲವೇ ಇಲ್ಲ. ವಿಶ್ವರೂಪ ತೋರಿದ ಮೇಲೂ ಕೃಷ್ಣನ ವಿಷಯವಾಗಿಯೂ ಅವನು ಒಮ್ಮೊಮ್ಮೆ ಅವಜ್ಞೆ ತೋರುತ್ತಿದ್ದುದೂ ಉಂಟು. ಅರಿವು ಮರವೆಗಳು ಕಣ್ಣುಮುಚ್ಚಾಲೆ ಆಡಿವೆ ಅವನನ್ನೂ ಕೂಡ.

ಶ್ರೀ. ವ್ಯಾಸರಲ್ಲಿ ಅರ್ಜುನ ಪಡುವುದು ವಿಸ್ಮಯವನ್ನೆ ಹೊರತು ದಿವ್ಯವಿಷಾದವನ್ನಲ್ಲ. ಇಲ್ಲಿ, ಕುಮಾರವ್ಯಾಸನ ಅರ್ಜುನ ತಾನು ಪರಶಿವನನ್ನು ಚರ್ಮಚಕ್ಷುವಿನಲ್ಲಿ ಕಂಡೂ ಬೇಡಿಕೊಂಡದ್ದು ಪಾಶುಪತಮಾತ್ರವಲ್ಲ ಎಂದು ಹಲುಬಿಕೊಳ್ಳುತ್ತಾನೆ. ಅದು ಅಧ್ಯಾತ್ಮದ ದೃಷ್ಟಿಯಲ್ಲಿ ದಿವ್ಯನಷ್ಟವೆ ಸರಿ. ಅದನ್ನೆ ಮತ್ತೆ ಮತ್ತೆ ಕಿರಾತಾರ್ಜುನೀಯ ಪ್ರಸಂಗದಲ್ಲಿ ಕವಿ ಸೂಚಿಸಿದ್ದಾನೆ :

"ಮುನಿಯಿದೇನೈ ! ಚಿತ್ರವಾಯ್ತರ್ಜುನನ ಚಿತ್ತದೊಳೇನು ತಾಮಸ
ಜನಿತ ಕರ್ಮವೊ ! 'ಶುದ್ಧ ತತ್ತ್ವಜ್ಞಾನ' ಜಲಧಿಯಲಿ

ಮನ ಮುಳುಗಿ ಮಗುಳೆದ್ದು ಶಿತಿಕಂಠನಲಿ ಶಸ್ತ್ರಾಸ್ತ್ರವನು ಬೇಡಿದ !"
ಎನಲು ಜನಮೇಜಯಗೆ ಮುನಿಯಿಂತೆಂದ ನಸುನಗುತ.
"ಅರಸ ಕೇಳೈ ! ರಾಜಸಾಂತಃಕರಣವದು ಕಾಮ್ಯೈಕ ಸಿದ್ಧಿ
ಸ್ಫುರಣೆಗೋಸುಗ ತಪವಲೇ ರಾಜ್ಯಾಭಿಲಾಷೆಯಲಿ !
ಪರಚರಣ ! ನಿಕ್ಷಿಪ್ತ ! ಚೇತಃ ! ಸ್ಫುರಣೆ ತತ್ಪರಿಯಂತ ಉಕ್ಕಿತು
ಪರಮವಸ್ತು ನಿಜಸ್ವಭಾವಕೆ ಚಿತ್ರವೇನು !" ಎಂದ

ಕುಮಾರವ್ಯಾಸನ ದೃಷ್ಟಿಯಲ್ಲಿ ಹೀಗೆ ಭಗವದ್ ಸನ್ನಿಧಿಯಲ್ಲಿ ಲೌಕಿಕವಾದ ಏನನ್ನೆ ಕೇಳುವುದೂ ರಾಜಸಬುದ್ಧಿಯೆ. ಪಾಪ ! ಆದಕ್ಕಾಗಿ ಅರ್ಜುನ ಮರುಗುತ್ತಾನೆ. ಅವನಿಗೆ ಅವನನ್ನು ಬಿಟ್ಟಿದ್ದರೆ ಅರ್ಜುನ ಹಾಗೆ ಪಾಶುಪತವನ್ನೇ ಕೇಳುತ್ತಿದ್ದನೆನ್ನಲು ಬರದು. ಕುಮಾರವ್ಯಾಸನ ದೃಷ್ಟಿಯಲ್ಲಿ, ಅರ್ಜುನ ತಪಸ್ಸಿಗೆ ಬರುವಾಗ ವ್ಯಾಸರಿಂದ ಕಟ್ಟಪ್ಪಣೆ ಪಡೆದಿರುತ್ತಾನೆ ;

'ಪಾರ್ಥನೈದುವುದು, ಇಂದ್ರಕೀಲದೊಳರ್ಥಿಸಲಿ ಶಂಕರನ ; ಅಖಿಲ
ಸ್ವಾರ್ಥ ಸಿದ್ಧಿಗೆ ಬೀಜವಿದು ! ಬೇರೊಂದ ಬಯಸದಿರು !!'

ಹೀಗಿರುವುದರಿಂದ ಅರ್ಜುನ ಅಸ್ವತಂತ್ರ. ಅವನು ಮಾಡಬಹುದಾದದ್ದಿಷ್ಟೆ, ದಿವ್ಯ ವಿಷಾದ ಪಡುವುದು. ಆದರೆ ವ್ಯಾಸರಲ್ಲಿ ಇದು ಬೇರೆ. ಅಲ್ಲಿ ಹೀಗಿದೆ :

"ಬಳಿಕ ಅರ್ಜುನನು ಪರಮಾಶ್ಚರ್ಯಗೊಂಡನು ; ನಾನು ಸಾಕ್ಷಾತ್ತಾಗಿ ಮಹಾದೇವನನ್ನು ಕಂಡೆ ! ಧನ್ಯನಾದೆ ! ಅನುಗೃಹೀತನಾದೆ ! ಪಿನಾಕಿಯನ್ನು ತ್ರ್ಯಂಬಕನನ್ನು ಹರನನ್ನು ವರದ ರೂಪದಲ್ಲಿ ಕಂಡು ನನ್ನ ಕೈಯಿಂದ ಮುಟ್ಟಿದೆ ! ಪರಮ ಕೃತಾರ್ಥನೆಂದೆ ಭಾವಿಸುವೆ ! ಯುದ್ಧದಲ್ಲಾಗಲೆ ಹಗೆಗಳೆಲ್ಲರನ್ನೂ ಗೆದ್ದೆ ಬಿಟ್ಟೆ ; ನನ್ನ ಪ್ರಯೋಜನಗಳೆಲ್ಲ ನೆರವೇರಿಯೆ ಬಿಟ್ಟುವು !"

ತತೋಽರ್ಜುನಃ ಪರಂ ಚಕ್ರೇ ವಿಸ್ಮಯಂ ಪರವೀರಹಾ ।
ಮಯಾ ಸಾಕ್ಷಾತ್ ಮಹಾದೇವೋ ದೃಷ್ಟ ಇತ್ಯೇವ ಭಾರತ ॥ ೨
ಧನ್ಯೋಽಸ್ಮಿ ! ಅನುಗೃಹೀತೋಽಸ್ಮಿ ! ಯನ್ಮಯಾ ತ್ರ್ಯಂಬಕೋ ಹರಃ ।
ಪಿನಾಕೀ ವರದೋ ರೂಪೀ ದೃಷ್ಟಃ ಸ್ಪೃಷ್ಟಃ ಚ ಪಾಣಿನಾ ॥ ೩
ಕೃತಾರ್ಥಂ ಚಾವಗಚ್ಛಾಮಿ ಪರಮಾತ್ಮಾನಮಾಹವೇ ।
ಶತ್ರೂಂಶ್ಚ ವಿಜಿತಾನ್ ಸರ್ವಾನ್ ನಿರ್ವೃತ್ತಂ ಚ ಪ್ರಯೋಜನಮ್ ॥ ೪

ಕುಮಾರವ್ಯಾಸನ ದರ್ಶನ ಇಂಥೆಡೆಗಳಲ್ಲೆಲ್ಲ ವಿಶಿಷ್ಟವಾಗಿ ಧ್ವನಿತವಾಗಿದೆ.

೪. ಪಂಪಕವಿಯ ಪ್ರಕಾರ, ಅರ್ಜುನನ ತಪಸ್ಸನ್ನು ಭಂಗಗೊಳಿಸಲು ಇಂದ್ರನಿಂದ ಅಣತಿಗೊಂಡ ಅಪ್ಸರೆಯರ ತಂಡಕ್ಕೆ ತಂಡವೆ ಬರುತ್ತದೆ ; ಆರು ಋತುಗಳೂ ಒಗ್ಗೂಡಿ ಬರುತ್ತವೆ. ಇವರಾರಿಗೂ ಸೋಲದ ಅರ್ಜುನನ ಅಸ್ಖಲಿತಚಿತ್ತಕ್ಕಲ್ಲದೆ ಅವನ ಗಾಡಿಗೆ ಆ ಅಪ್ಸರೆಯರೆ ಸೋಲುತ್ತಾರೆ. ಹೀಗೆಂದು, ಕಲ್ಪಿಸಿಕೊಳ್ಳುವಾಗ ಪಂಪಕವಿ ಅರ್ಜುನನನ್ನು ಬಹಳವಾಗಿ ಸಂಭಾವಿಸಿದಂತೆ ತೋರುತ್ತದೆ. ಪರಮೇಶ್ವರನೂ ಕಾಮ

ಶರಕ್ಕೆ ಕಣ್ತೆರೆಯುತ್ತಾನೆ, ಅವನನ್ನು ಸುಟ್ಟರೂ ಕೂಡ. ಈತ ಜಿತಕಾಮನಾಗಿ ಕಣ್ಮುಚ್ಚಿಯೇ ಇರುತ್ತಾನೆ ಎನ್ನುವುದು, ಅರ್ಜುನ ಈಶ್ವರನ ಗಂಟಲು ಮೆಟ್ಟಿಕ್ಕಿದ ಎನ್ನುವ ಕಲ್ಪನೆಯಷ್ಟಲ್ಲದಿದ್ದರೂ ಒಂದಿನಿತಾದರೂ ಅಸಾಧು ಎನಿಸೀತು, ಅಸಂಭಾವ್ಯವೆನಿಸೀತು. ಅರ್ಜುನ ಏನಿದ್ದರೂ ಅರ್ಜುನನೆ ; ಭೀಷ್ಮನಲ್ಲ, ಧರ್ಮರಾಜನಲ್ಲ.

ಅವನ ಈ ಕಾಮವಿಜಯವನ್ನು, ಅಪ್ಸರಾ ಸಮ್ಮೋಹನ ಸತ್ತ್ವವನ್ನು ಚಿತ್ರಿಸುವಾಗ ಪಂಪಕವಿ, ವಾಲ್ಮೀಕಿಗಳಲ್ಲಿ ಬರುವ ನಾರಾಯಣ ಋಷಿಯ ತಪಸ್ಸಿನ ಕಥೆಯನ್ನು ನೆನಪಿನಲ್ಲಿಟ್ಟುಕೊಂಡಿರುವಂತೆ ಕಾಣುತ್ತದೆ.

೫. ವ್ಯಾಸಭಾರತದಲ್ಲಿ ಈ ಹೃದಯ ಸ್ಪರ್ಶಿಯಾದ ಸನ್ನಿವೇಶವಂತೂ ಅತ್ಯಂತ ಮನೋಹರವಾಗಿ ಬಂದಿದೆ. ಅದನ್ನು ಓದಿದ ಮೇಲೆ ಕುಮಾರವ್ಯಾಸನ ಈ ಮಾತುಗಳು ಬಹು ನಿಪುಣತನದಿಂದ ಬಂದುವೆಂದು ಅನಿಸುತ್ತದೆ. ಆ ಪ್ರಸಂಗವನ್ನೆ ಇಲ್ಲಿ ಉದ್ಧರಿಸಬಹುದು ;

"ಪುಣ್ಯಶೀಲರಾದ ಸಾಧುಗಳಿಗೆ, ಪುಣ್ಯಕರ್ಮಿಗಳಾದ ಮುನಿಗಳಿಗೆ, ಸ್ವರ್ಗಮಾರ್ಗದಲ್ಲಿ ಆಕಾಂಕ್ಷೆಯುಳ್ಳವರಿಗೆ ನೀನು, ಹೇ ಶೈಲರಾಜ, ಸದಾ ಆಶ್ರಯನಾಗಿರುವೆ. ನಿನ್ನ ಪ್ರಸಾದದಿಂದ ಸದಾ, ಹೇ ಶೈಲರಾಜ ! ಬ್ರಾಹ್ಮಣ ಕ್ಷತ್ರಿಯ ವೈಶ್ಯರುಗಳೆಲ್ಲ ವ್ಯಥೆಯಳಿದು ಸ್ವರ್ಗ ಗಳಿಸಿ ದೇವತೆಗಳೊಡನೆ ನಡೆದಾಡುತ್ತಾರೆ. ಹೇ ಅದ್ರಿರಾಜ ! ಮಹಾಶೈಲ ! ಮುನಿಸಂಶ್ರಯ ! ತೀರ್ಥವನ್ ! ಇದೋ, ತೆರಳುತ್ತಿರುವೆ ನಾನು ! ನಿನ್ನನ್ನು ಕೇಳಿಕೊಳ್ಳುತ್ತಿರುವೆ (ಬಿಟ್ಟು ತೆರಳುತ್ತಿರುವೆ) : ನಾನು ನಿನ್ನಲ್ಲಿ ಸುಖವಾಗಿದ್ದೆ. ನಿನ್ನ ಸಾನು ಪ್ರದೇಶಗಳಲ್ಲಿ ಕುಂಜಗಳನ್ನು ನದಿ ಕಾರಂಜಿಗಳನ್ನು ಸುಪುಣ್ಯ ತೀರ್ಥಗಳನ್ನು ನಾನೆನಿತೋ ಬಾರಿ ಕಂಡಿರುವೆ ; ಕಮ್ಮನೆ ಹಣ್ಣುಗಳನ್ನು ಆಗಾಗ ತಿಂದಿರುವೆ ; ನಿನ್ನ ಮೆಯ್ಯಿಂದ ಹೊರಸೂಸಿ ಬರುವ ಕಾರಂಜಿಯ ಸುಗಂಧಮಯವಾದ ನೀರನ್ನು, ಅಮೃತಾಸ್ವಾದನೀಯವಾದ ಆ ನೀರನ್ನು ಕುಡಿದಿರುವೆ ! ತಂದೆಯ ತೊಡೆಯ ಮಗುವಿನಂತೆ ನಾನು ನಿನ್ನ ತೊಡೆಯ ಮೇಲೆ—ಅಪ್ಸರ ಗಣ ಸಂಕೀರ್ಣವಾದ ಬ್ರಹ್ಮಘೋಷ ನಿನಾದಿತವಾದ ಆ ನಿನ್ನಂಕದ ಮೇಲೆ ಬಹು ಗೆಲುವಾಗಿ ಆಡಿದೆ, ಹೇ ಪ್ರಭೋ ! ಹೇ ಪರ್ವತರಾಜ ! ನಿನ್ನ ಸಾನುಗಳಲ್ಲಿ ನಾನು ಸದಾ ಸುಖದಿಂದಿದ್ದೆ ಹೇ ಶೈಲರಾಜ !"

ಎಷ್ಟು ಹೃತ್ ಸ್ಪರ್ಶಿಯಾಗಿದೆ ! ಕುಮಾರವ್ಯಾಸ ಏಕಾದರೂ ಇದನ್ನು ಹಾಗೆಯೆ, ತನ್ನ ಅನನುಕರಣೀಯವಾದ ಭಾಷೆಯಲ್ಲಿ ಕೊಡದೆ ಹೋದನೊ... ಈ ಕೆಳಗೆ ವ್ಯಾಸರ ಮೂಲಶ್ಲೋಕಗಳನ್ನೆ ನೀಡಲಾಗಿದೆ :

ಸಾಧೂನಾಂ ಪುಣ್ಯಶೀಲಾನಾಂ ಮುನೀನಾಂ ಪುಣ್ಯಕರ್ಮಣಾಮ್ ।
ತ್ವಂ ಸದಾ ಸಂಶ್ರಯಃ, ಶೈಲ ! ಸ್ವರ್ಗಮಾರ್ಗಾಭಿಕಾಂಕ್ಷಿಣಾಮ್ ॥ ೨೨
ತ್ವತ್ ಪ್ರಸಾದಾತ್ ಸದಾ ಶೈಲ ! ಬ್ರಾಹ್ಮಣಾಃ ಕ್ಷತ್ರಿಯಾ ವಿಶಃ ।
ಸ್ವರ್ಗಪ್ರಾಪ್ತಾಃ ಚರಂತಿ ಸ್ಮ ದೇವೈಃ ಸಹ ಗತವ್ಯಥಾಃ ॥ ೨೩

ಅದ್ರಿರಾಜ ! ಮಹಾಶೈಲ । ಮುನಿಸಂಶ್ರಯ ! ತೀರ್ಥವನ್ ! ।
ಗಚ್ಛಾಮಿ, ಆಮಂತ್ರಯಾಮಿ ತ್ವಾಂ, ಸುಖಮಸ್ಮಿ ಉಷಿತಃ ತ್ವಯಿ ॥ ೨೪
ತವ ಸಾನೂನಿ ಕುಂಜಾಃ ಚ ನದ್ಯಃ ಪ್ರಸ್ರವಣಾನಿ ಚ ।
ತೀರ್ಥಾ ಚ ಸುಂಪುಣ್ಯಾನಿ ಮಯಾ ದೃಷ್ಟಾನಿ ಅನೇಕಶಃ ॥ ೨೫
ಫಲಾನಿ ಚ ಸುಗಂಧೀನಿ ಭಕ್ಷಿತಾನಿ ತತಸ್ತತಃ ।
ಸುಸುಗಂಧಾಃ ಚ ವಾರ್ಯೋಘಾಃ ತ್ವತ್ ಶರೀರ ವಿನಿಃಸೃತಾಃ ॥ ೨೬
ಅಮೃತಾಸ್ವಾದನೀಯಾ ಮೇ ಪೀತಾಃ ಪ್ರಸ್ರವಣೋದಕಾಃ ।
ಶಿಶುಃ ಯಥಾ ಪಿತುರಂಕೇ ಸುಖಂ ವರ್ತತೇ, ನಗ ! ॥ ೨೭
ತಥಾ ತವಾಂಕೇ ಲಲಿತಂ, ಶೈಲರಾಜ, ಮಯಾ ಪ್ರಭೋ ! ।
ಅಪ್ಸರೋಗಣ ಸಂಕೀರ್ಣೇ ಬ್ರಹ್ಮಘೋಷಾನುನಾದಿತೇ ॥ ೨೮
ಸುಖಮಸ್ಮಿ ಉಷಿತಃ, ಶೈಲ ! ತವ ಸಾನುಷು ನಿತ್ಯದಾ ! । ೨೯

—ಅರಣ್ಯಪರ್ವ, ಅಧ್ಯಾಯ, ೪೨.

ಈ ಸುಮನೋಹರ ಹೃತ್‌ಸಂವಾದವನ್ನು ಪಂಪ ಬಂದಿಷ್ಟಾದರೂ ಚಿತ್ರಿಸ ಹೋಗಿಲ್ಲ. ಅದನ್ನು ಸಂಪೂರ್ಣವಾಗಿ ಕೈಬಿಟ್ಟಿದ್ದಾನೆ.

೬. ದೇವಾಂಗನೆಯಾದ ಊರ್ವಶಿ ವ್ಯಥೆಗೊಳ್ಳುವುದುಂಟೆ ನಾಚುವುದುಂಟೆ ಪಶ್ಚಾತ್ತಾಪಗೊಳ್ಳುವುದಾದರೂ ಉಂಟೆ ಎಂಬೆಲ್ಲ ಪ್ರಶ್ನೆಗಳು ಬರುವುದು ಯಾರಿಗಾದರೂ ಸಹಜ. ಎಂದೂ ತಿರಸ್ಕಾರವನ್ನೆ ಕಂಡಿಲ್ಲದ ಒಬ್ಬಳು ಮೊದಲ ಬಾರಿಗೆ ಅಂತಹ ಅಭಿಮಾನ ಹತಿಯನ್ನನುಭವಿಸುವುದು ಸಾಧ್ಯವಾದರೆ, ಆ ಅನಾದಿ ಪುರಸ್ಕೃತಳಾದ ಅದರೆ ಪ್ರಪ್ರಥಮವಾಗಿ ಇಂದು ತಿರಸ್ಕೃತಳಾದ ಊರ್ವಶಿ ಏಕೆ ತಾನೆ ಪಶ್ಚಾತ್ತಾಪ ಪಡಬಾರದು ; ಹಾಗೂ ಏಕೆ ಪರತಾಪಗೊಳ್ಳಬಾರದು ? ಈ ಸಮಯದಲ್ಲಿ ಮಹರ್ಷಿ ವಾಲ್ಮೀಕಿಗಳ ರಾಮಾಯಣದಲ್ಲಿ ಬರುವ ಒಂದು ಉಪಮಾನವನ್ನಲ್ಲಿ ನೆನೆದುಕೊಳ್ಳಬಹುದು. ಸೀತಾದೇವಿಯನ್ನು ಕದ್ದೊಯ್ಯಲು ಬಂದಿರುವ ರಾವಣ ಅವಳಿಗೆ ತನ್ನ ವೈಭವಗಳನ್ನೆಲ್ಲ ವರ್ಣಿಸಿ, ತನ್ನನ್ನೊಪ್ಪಿಕೊ ಎಂದು ಪೀಡಿಸುತ್ತಿರುವಾಗ ಅವನಾಡುವ ಮಾತಿದು :

"ಸರ್ವರಾಕ್ಷಸ ಭರ್ತಾರಂ ರಾವಣಂ ಸ್ವಯಮಾಗತಂ ।
ನ ಮನ್ಮಥಶರಾವಿಷ್ಟಂ ಪ್ರತ್ಯಾಖ್ಯಾತುಂ ತ್ವಮರ್ಹಸಿ ॥
ಪ್ರತ್ಯಾಖ್ಯಾಯ ಚ ಮಾಂ ಭೀರು ! ಪಶ್ಚಾತ್ತಾಪಂ ಗಮಿಷ್ಯಸಿ ! ।
ಪದಾಭಿಹತ್ಯೇವ ಪುರಾ ಪುರೂರವಸಮುರ್ವಶೀ ॥" ೧೭

—ಅ. ಕಾಂ ;—ಸಂ, ೪೮ ಡಿ.ಎ.ವಿ. ಕಾಲೇಜ್, ಲಾಹೋರ್ ಮುದ್ರಣ

(ಸರ್ವರಾಕ್ಷಸ ಭರ್ತಾರನಾದ ಸ್ವಯಂ ರಾವಣನೆ ಬಂದಿದ್ದಾನೆ, ಮನ್ಮಥಶರಾವಿಷ್ಟನಾಗಿದ್ದಾನೆ ; ತಿರಸ್ಕರಿಸಬೇಡ ! ನನ್ನನ್ನು ತಿರಸ್ಕರಿಸಿದರೆ, ಹೇ ಭೀರು ! ಪಶ್ಚಾತ್ತಾಪ ಪಡುವೆ : ಹಿಂದೆ, ಕಾಲಿನಿಂದ ಪುರೂರವನನ್ನೊದೆದ ಊರ್ವಶಿಯಂತೆ !!)

ಊರ್ವಶಿ ಪುರೂರವನನ್ನು ತಿರಸ್ಕರಿಸದ ಕಥೆ ವೇದದಷ್ಟೆ ಪ್ರಾಚೀನ. ಅಟ್ಟಹಾಸದಿಂದ, ಹಾಗೆ, ಮೆರೆದು ಮರೆತು ಹೋದ ಊರ್ವಶಿ ಸ್ವರ್ಗದಲ್ಲಿ ಒಮ್ಮೆಯಾದರೂ ತನ್ನಿಂದ ತಿರಸ್ಕೃತನಾದ ಪುರೂರವನನ್ನು ನೆನೆದು ಚಿಂತಿಸಿರಬೇಕು, ತನ್ನ ದುಡುಕಿಗಾಗಿ ಮರುಗಿರಬೇಕು. ವಾಲ್ಮೀಕಿಗಳು ಈ ಒಂದು ಉಪಮಾನದಲ್ಲೆ ಮತ್ತೊಬ್ಬ ಸಮರ್ಥ ಕವಿಗೆ ಪುಷ್ಕಲವಾದ ಆಹಾರವನ್ನೊದಗಿಸಿದ್ದಾರೆ. ಇಂಥವೆಷ್ಟೊ ಅವರಲ್ಲಿ! ಅದಿರಲಿ, ಆ ಮಾತಿನಲ್ಲಿ ಅವರು ಹೆಣ್ಣಿನ ಅತ್ಯಂತ ನಿಗೂಢವಾದ ಸ್ವಭಾವವೊಂದನ್ನು ಧ್ವನಿಸಿದ್ದಾರೆ. ಅವರ ಮಾತು ಸತ್ಯವಾಗಿದ್ದರೆ ಇಲ್ಲಿ, ಈ ಊರ್ವಶಿ ಎಷ್ಟು ತಾನೆ ದುಃಖಿಸಬೇಕಿಲ್ಲ, ಕೊರಗಬೇಕಿಲ್ಲ! ತಾನು ತಿರಸ್ಕೃತೆಯಾದೆನಲ್ಲ ಎಂಬ ಕೊರಗು, ಕುಪಿತಳಾಗಿ ಶಪಿಸಿದೆನಲ್ಲಾ ಎಂಬ ಮರುಗು ಎಲ್ಲ ಹುರಿಗೊಂಡಿದ್ದಿರಬೇಕಲ್ಲವೆ? ಈ ಭಾಗದ ಕಥೆಯೆ ಮತ್ತೊಂದು ಕಾವ್ಯವಾದೀತು.

ಕುಮಾರರಾಮನ ಕಥೆಯ ಕರ್ತೃ ನಂಜುಂಡ ಕವಿ, ಅರ್ಜುನನಿಗೆ ಶಾಪವಿತ್ತ ಮೇಲೆ ಊರ್ವಶಿ ಮರುಗಿ ಆಮೇಲೆ ತಾನೆ ಅವನ ಮಹಿಮೆಯನ್ನು ಹೊಗಳುವುದಕ್ಕೂ ಉದ್ಯುಕ್ತಳಾಗುತ್ತಾಳೆ, ಎಂದು ಚಿತ್ರಿಸುತ್ತಾನೆ. (ನನಗೆ ಇದನ್ನು ನೆನಪು ಮಾಡಿಕೊಟ್ಟವರು ಡಾ. ಜಿ. ವರದರಾಜರಾಯರು.)

# ಬಸವಣ್ಣನವರ ವಚನಗಳಲ್ಲಿ ಪ್ರಾಣಿರೂಪಕ*

ಅಂತರಂಗಜಗತ್ತು ಬಾಹ್ಯಜಗತ್ತಿಗಿಂತಲೂ ಜಟಿಲ, ವಿಚಿತ್ರ ಹಾಗೂ ಅಗ್ರಾಹ್ಯ, ಅಪ್ರಮೇಯ. ವ್ಯಕ್ತಿ ವ್ಯಕ್ತಿಗೂ ಅಂತಹ ಒಂದೊಂದು ಜಗತ್ತಿರುವುದರಿಂದ ಅದರ ಜಟಿಲತೆ, ಅಪ್ರಮೇಯತೆ ಅಗ್ರಾಹ್ಯತೆಗಳು ನೂರ್ಮಡಿಯಾಗಿವೆ. ಇಂತಹ ಲೋಕವನ್ನು ಬಾಹ್ಯಲೋಕಕ್ಕೆ ಪರಿಚಯ ಮಾಡಿಕೊಡುವುದಾಗಲಿ ಅಥವಾ ಅವೆರಡರ ಸಾಮರಸ್ಯವನ್ನು ಕಂಡುಕೊಳ್ಳುವುದಾಗಲಿ ಕಷ್ಟಸಾಧ್ಯವಾದ ಕೆಲಸ. 'ಹೀಗಿರುವಾಗ ಆ ಅದೃಶ್ಯಲೋಕದ ಸ್ವರೂಪದ ಆಲೋಕನಕ್ಕೆ ಈ ದೃಶ್ಯಲೋಕದ ನೂರಾರು ರೂಪಗಳು 'ರೂಪಕ-ಗವಾಕ್ಷ'ವಾಗುತ್ತವೆ. ಅನುಭವವು ತೀವ್ರವಾದಂತೆಲ್ಲ ಅಂತರಂಗ ಜಗತ್ತು ಹೆಚ್ಚು ಶ್ರೀಮಂತವೂ ನಿಗೂಢತರವೂ ಆಗುವುದರಿಂದ ಅಭಿವ್ಯಕ್ತಿಯ ಸಾಧನಗಳಾದ ಬಾಹ್ಯಜಗತ್ತಿನ ರೂಪಸಾಮಗ್ರಿಗಳು ವಿಪುಲವಾಗುತ್ತ ಹೋಗುತ್ತವೆ. ಆಗ ಯಾವುದು ಅಭಿವ್ಯಕ್ತಿಯ ಪ್ರಕಾರವಾಗಬಲ್ಲದು ಯಾವುದು ಆಗದು ಎಂದು ಹೇಳುವುದೇ ಕಷ್ಟವಾಗುತ್ತದೆ. ದೇವತೆಗಳಿಂದ ಹಿಡಿದು ದಾನವ, ಮಾನವ, ಪಶು, ಪ್ರಾಣಿಗಳ ತನಕ, ಭೂಮದಿಂದ ಹಿಡಿದು ಕ್ಷುದ್ರದ ತನಕ ಎಲ್ಲವೂ ಅಂತರಂಗದ ಅನುಭವಾಭಿವ್ಯಕ್ತಿಯ ಸಾಧನವಾಗುತ್ತವೆ.

ತೀವ್ರಾನುಭವಶೀಲರೂ, ಮಹಾಸಾಧಕರೂ ಆದ ಬಸವಣ್ಣನವರ ವಚನಗಳಲ್ಲಿ ಅವರ ಅಂತರಂಗದ ಬೆಳವಣಿಗೆಯ ನೂರು ಸ್ಥಿತಿಗಳನ್ನು, ನಡಗೆಯ ನೂರು ಗತಿಗಳನ್ನು ಪ್ರತಿಮಿಸುವ ಸಹಸ್ರವಿಧ ರೂಪಕಗಳನ್ನು ಕಾಣುತ್ತೇವೆ. ಹೀಗೆ ಅತ್ಯಂತ ಶಕ್ತಿಯುತವಾಗಿರುವ ಜ್ವಲಂತವಾಗಿರುವ ಅವರ ವಚನಗಳಲ್ಲಿ ಪ್ರಾಣಿರೂಪಕಗಳು ಹೇಗೆ, ಎಂತು ಬಂದಿವೆ ಎಂಬುದನ್ನು ನೋಡಬಹುದು.

---

* ಇಂಗ್ಲಿಷಿನ 'Image' ಎನ್ನು ಮಾತಿಗೆ ಸಮಾನಾರ್ಥವುಳ್ಳ ಮಾತಾಗಿ ಇದನ್ನು ಇಲ್ಲಿ ಬಳಸಿಕೊಂಡಿದೆ. ಇದನ್ನೇ ಕುರಿತು ಬೇರೆಡೆ ದೀರ್ಘವಾಗಿ ಚರ್ಚಿಸಲಿರುವುದರಿಂದ ಇಲ್ಲಿ ಇದರ ಅರ್ಥವಿವರಣೆಯನ್ನು ಒಂದು ಮಾತಿನಲ್ಲಿ ಮಾತ್ರ ಹೇಳಲು ಪ್ರಯತ್ನಿಸಬಹುದು. ರೂಪಕ ಎಂದರೆ 'ಶಬ್ದ ಚಿತ್ರ' (Word picture) ಮಾತಿನ ಮೂಲಕವಾಗಿಯೆ ಒಂದು ಚಿತ್ರವನ್ನು ಬರೆಯುವುದು.

ಇಂದ್ರಿಯ ಪರಿಮಿತವಾದ ಹಾಗೂ ಪರಿವೃತವಾದ ಚೇತನಕ್ಕೆ ಬದುಕಿನಲ್ಲಿ ಅಂತಹ ಯಾವ ಘನವಾದ ಒಳತೋಟಿಯಾಗಲಿ ಇರುವುದಿಲ್ಲ. ಇಂದ್ರಿಯ ವಿಮುಖವಾದ ಸೂಕ್ಷ್ಮ ಚೇತನಕ್ಕೆ ಈ ಒಳತೋಟಿ ತೀವ್ರತರವೂ ತೀಕ್ಷ್ಣತರವೂ ಆಗುತ್ತದೆ. ಅಂದಿನತನಕ ಮಧುರವಾಗಿರುವ ಮೃದುರಾಗ ಭಾವಗಳೆಲ್ಲ ಆಗ ಕೆರಳಿದ ತೃಷಿತ ಮೃಗಾಲಯದಂತಾಗುತ್ತವೆ. ಅಂತರಂಗದ ತುಮುಲದ ಆ ಘಟ್ಟದಲ್ಲಿ ತಿರ್ಯಙ್‌ಮಾನವಸತ್ವಗಳ ಸಂಘರ್ಷಣೆಯೆ ಪ್ರಧಾನವಾಗಿರುವುದರಿಂದ ಅಂದಿನ ಚಿತ್ತಸ್ಥಿತಿಯನ್ನು ಪ್ರಾಣಿರೂಪಕಗಳಲ್ಲಲ್ಲದೆ ಮತ್ತಾವ ವಿಧಾನದಿಂದಲೂ ಅಭಿವ್ಯಕ್ತಗೊಳಿಸುವುದು ದುಸ್ಸಾಧ್ಯವಾಗುತ್ತದೆ. ಈ ದೃಷ್ಟಿಯಲ್ಲಿ ಬಸವಣ್ಣನವರ ವಚನಗಳಲ್ಲಿ ಕಾಣಬರುವ ಪ್ರಾಣಿರೂಪಕಗಳನ್ನು ವಿಶ್ಲೇಷಿಸಿದರೆ ಎರಡು ಮೂರು ಬಗೆಯ ರಸಪ್ರಯೋಜನವಾಗುತ್ತದೆ. ಒಂದು, ಅವರ ಚಿತ್ತಸ್ಥಿತಿಯ ಅನುಭವ. ಮತ್ತೊಂದು, ಆ ಚಿತ್ರಗಳು ಕೊಡುವ ರಸಾನಂದ.

ಬಸವಣ್ಣನವರ ವಚನಗಳಲ್ಲಿ ಹತ್ತಾರು ಪ್ರಾಣಿಗಳ ರೂಪಕಗಳನ್ನು ಕಾಣುತ್ತೇವೆ. ಒಂದೇ ಪ್ರಾಣಿಯ ಚಿತ್ರವು ಮತ್ತೆ ಮತ್ತೆ, ಆದರೆ ಭಿನ್ನ ಭಿನ್ನವಾದ ಭಾವಕ್ಕೆ ಪ್ರತೀಕವಾಗಿ ಬರುವುದನ್ನೂ ಕಾಣುತ್ತೇವೆ. ಒಮ್ಮೊಮ್ಮೆ ಸಾಧಾರಣ ಸಾದೃಶ್ಯವಾಗಿ ಬಂದರೆ ಮತ್ತೊಮ್ಮೆ ಯಾವುದೋ ಭಾವಸಂಕೇತವಾಗಿ ಬರುತ್ತದೆ. ಇಲ್ಲಿ ಅವುಗಳ ಶ್ರೇಣಿಯನ್ನು, ಆ ಶ್ರೇಣಿಯ ಸೌಂದರ್ಯವನ್ನೂ ಕಾಣುತ್ತೇವೆ. ಈಗ ಮೊದಲು ನಾಯಿಯ ಚಿತ್ರ ಹೇಗೆ ಹತ್ತಾರು ಬಗೆಯ ರೂಪಕವಾಗಿ ಬಂದಿದೆ ಎಂಬುದನ್ನು ನೋಡಬಹುದು.

ಈಶ್ವರ ಸೃಷ್ಟವಾದ ಈ ಲೋಕದಲ್ಲಿ ಇದ್ದೂ ನಾವು ಅವನನ್ನಲ್ಲದೆ ಶಿವನಲ್ಲದ ಅನ್ಯವನ್ನು ನೆನೆಯುತ್ತೇವೆ; ಅಷ್ಟೇ ಅಲ್ಲ ಅವನನ್ನೇ ಬಯ್ಯುತ್ತೇವೆ. ಈ ವಿಚಿತ್ರ ಸ್ವಭಾವವನ್ನು ಕಂಡಾಗ ಅಣ್ಣನವರು,

"ತುಡುಗುಣಿ ನಾಯ ಹಿಡಿತಂದು ಸಾಕಿದರೆ
ತನ್ನೊಡೆಯಂಗೆ ಬೊಗಳುವಂತೆ ಕಾಣಾ"

ಎಂದು ನುಡಿಯುತ್ತಾರೆ. ಇಲ್ಲಿ ಅಭಿವ್ಯಕ್ತಿ ನಿಜಕ್ಕೂ ಶಕ್ತಿಯುತವಾಗಿಯೇ ಇದೆ. ಪ್ರೀತಿಯಿಂದ ಸಾಕಿದರೂ ಹಿಡಿದುತಂದ ತುಡುಗುಣಿ ನಾಯಿ ತನ್ನ ಬೊಗಳುವ ಸ್ವಭಾವವನ್ನು ಕಳೆದುಕೊಳ್ಳಲಾರದು. ಬೊಗಳುವುದೆ ಆದಮೇಲೆ ಯಾರಾದರೇನಂತೆ ? ಬೀದಿಹೋಕನಾದರೇನು, ಮನೆಯಾತ ಯಜಮಾನ

ನಾದರೇನು ? "ನೆಕ್ಕುವ ನಾಯಿಗೆ ಲಿಂಗವೇನು ಪಾಣಿಬಟ್ಟಲೇನು ?" ಎನ್ನು ವಂತೆ! ಹಾಗೆಯೇ ನಾಯಿಯ ಮತ್ತೊಂದು ಗುಣವನ್ನು ಈ ವಚನದಲ್ಲಿ ಬಳಸಿಕೊಂಡಿದ್ದಾರೆ :

"ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗನಂತೆ."

ವಾಸನೆಯನ್ನರಸುತ್ತ ರುಚಿಯನ್ನು ತನ್ನ ತೆಳುನಾಲಗೆಯಲ್ಲಿ ನೆಕ್ಕುತ್ತಾ ಹೋಗುವ ನಾಯಿ ಸದಸದ್ ವಿವೇಚನೆಯನ್ನು ಪಡೆದಿರುತ್ತದೆಂದು ಹೇಳಲಾಗು ವುದಿಲ್ಲ. ರುಚಿಯಾದರೆ ಸರಿ, ಎಂತಹದಾದರು ವಾಸಿಯೆ ; ತುಪ್ಪವಾದರೆ ಬಿಡುತ್ತದೆಯೆ ? ಆ ತುಪ್ಪದ ಸವಿಗಾಗಿ ಅಲಗಿನ ತುದಿಯನ್ನಾದರೂ ನೆಕ್ಕಿ ನೋಡಿಯೇ ಬಿಡುತ್ತದೆ. ಪರಿಣಾಮ ಅದಕ್ಕೇನು ಗೊತ್ತು ? ಇಂತಹ ಗುಣ ಲೋಚಿಕಜೀವಿಗಳದು. ದಿನದ ಸುಖಕ್ಕೆ ಯುಗದ ಸುಖವನ್ನು ಬಲಿ ಕೊಡುವ, ಸುಖಸಿಕ್ತವಾದ ದಾರುಣತೆಯನ್ನು ಅಪ್ಪುವ ಭವಪಶಿಯಾದ ಮಾನವನನ್ನು ವರ್ಣಿಸಬೇಕಾದರೆ ಇಂತಹ ಈ ನಾಯಿಯಚಿತ್ರ ಪರಿಣಾಮಕಾರಿ.

ಅಮೇಧ್ಯವನ್ನು ಅರಸಿಕೊಂಡು ಹೋಗುವ ನಾಯಿಗೆ ನಾರಿವಾಣ ರುಚಿಸು ವುದು ಕಷ್ಟ. ಅದು ಅದರ ಹಲ್ಲಿಗೆ ಖಾದ್ಯವೂ ಹಿಲ್ಲ. ದುರ್ಲಭವಾದ ಭಗವದ ನುರಾಗವನ್ನು ತಿರಸ್ಕರಿಸಿ ಸುಲಭ ಸಮ್ಮೋಹಕವಾದ ಭವದ ಅನುರಾಗವನ್ನು ಅರಸಿಹೋಗುವ ಮನುಷ್ಯನ ನಾಯಿಮನಸ್ಸನ್ನು ಮತ್ತೊಂದೆಡೆ ವರ್ಣಿಸು ತ್ತಾರೆ.

"ಎನ್ನ ಮನವು ನಿಧಾನವನೊಲ್ಲದೆ ಜಲಗ ಮುಚ್ಚಿತ್ತು ನೋಡಾ !
ನಾಯಿಗೆ ನಾರಿವಾಣವಕ್ಕುವುದೆ ? ಕೂಡಲಸಂಗಮದೇವಾ !"

ನೆಲದಮರೆಯ ನಿಧಾನದಂತೆ ನಮ್ಮೊಳಗೆ ಅಡಗಿರುವ 'ಆಗಲೆ ನಿಕ್ಷಿಪ್ತವಾಗಿರುವ' ಶಿವನನ್ನು ತಡಕಿ ಕಾಣುವುದು ಕಷ್ಟಸಾಧ್ಯವಾದ ಸಾಧನೆ. ಆ ನಿಧಾನ ಸಂಪಾದನೆಗೆ ಶಕ್ತಿಸಾಮರ್ಥ್ಯ ಪುಣ್ಯಬೇಕಲ್ಲ. ನೆಲವನ್ನು ಅಗೆದರೆ ಸಾಲದು, ಕಣ್ಣಿಗೆ ಅಂಜನ ಹಚ್ಚಿಕೊಂಡಿರಬೇಕು, ಕೈಯಲ್ಲಿ ದೀಪವಿರಬೇಕು. ಆದರೆ ಲೋಕಸುಖಕ್ಕೆ ಈ ಯಾವ ಕರಕಷ್ಟವೂ ಇಲ್ಲ. ಆದ್ದರಿಂದಲೆ ಸಾಧಾರಣ ಜೀವ ನಾಯಂತೆ ತೆಂಗಿನಕಾಯನ್ನು ಬಿಟ್ಟು ತನ್ನ ಉಣಿಸನ್ನೆ ಅರಸುತ್ತ ಹೋಗುತ್ತೆ !

ಲಿಂಗವನ್ನು ಮೆಚ್ಚಿಯೂ, ಜಂಗಮಪ್ರಸಾದವನ್ನು ತಿನ್ನುವವರನ್ನು ನೋಡಿ

ನಗುವವರನ್ನು ಖಂಡಿಸುವಾಗ ಆಡುವ ಒಂದು ಮಾತು ಬಹು ಶಕ್ತಿಯುತ ವಾಗಿದೆ.

"ಸೂಳೆಗೆ ಮೆಚ್ಚಿ ಸೂಳೆಯ ಬಂಟರೆಂಜಲ ತಿಂಬುದೀ ಲೋಕ
ಅಡಗ ಮೆಚ್ಚಿ ಸೊಣಗನ ಎಂಜಲ ತಿಂಬುದೀ ಲೋಕ !
ಲಿಂಗವ ಮೆಚ್ಚಿ ಜಂಗಮಪ್ರಸಾದವ ಕೊಂಬರ ನೋಡಿ ನಗುವವರ
ಕುಂಭೀಪಾತಕ ನಾಯಕ ನರಕದಲ್ಲಿಕ್ಕುವ—"

ರುಚಿಲೋಲ ಮನಸ್ಸು ವಿಷಯಲೋಲುಪ ಜಿಹ್ವೆ ನಾಯ ಎಂಜಲನ್ನು, ಸೂಳೆಯ ಬಂಟರ ಎಂಜಲನ್ನು ತಿನ್ನುವುದಕ್ಕೂ ಪ್ರೀತಿಸುತ್ತದೆ. ಆದರೆ ಲಿಂಗ ಮಾರ್ಗದರ್ಶಿಯಾದವನ ಪ್ರಸಾದವನ್ನು ಭಕ್ತ ಸ್ವೀಕರಿಸಿದರೆ ಮಾತ್ರ ಬೈಯುತ್ತದೆ. ಅದು ತಾನು ನಂಬದು ; ನಂಬುವವರನ್ನೂ ನಂಬಲೀಯದು.

ಕೋಣನ ಹೇಜ್ಜಿಂಗೆ ಕುನ್ನಿ ಬಸುಗುತ್ತ ಬಡುವಂತೆ
ತಾವು ನಂಬರು, ನಂಬುವವರ ನಂಬಲೀಯರು"

ಅಂತಹವರ ರೀತಿ ಕೋಣನ ಹೇರನ್ನು ಕಂಡು ಹೊಟ್ಟೆನೋವು ಪಡುವ ಬೊಗಳುವ ನಾಯಿಯಂತಲ್ಲದೆ ಮತ್ತೇನು ?

ಈ ಚಿತ್ರ ಸಹಜವಾಗಿದೆ. ಬಸವಣ್ಣನವರ ಕಾಲದಲ್ಲಿ ಈಗಿನಂತಲ್ಲದೆ ಸಕಲ ಪಡಿಪದಾರ್ಥಗಳನ್ನೂ ಕತ್ತೆ ಕುದುರೆ ಕೋಣ ಎತ್ತುಗಳಮೇಲೆ ಹೇರಿಕೊಂಡು ಹೋಗುತ್ತಿದ್ದರು. ಊರಿಂದ ಊರಿಗೆ ಬರುತ್ತಿದ್ದ ಈ ವರ್ತಕರ ಹೇರುಗಳನ್ನು ಕಂಡರೆ ಊರಿನ ಹುಲಿಗಳು, ನಾಯಿಗಳು, ತಮ್ಮನ್ನು ಹೊಸದಾಗಿ ಬಂದವರು ಗಮನಿಸಲೆ ಇಲ್ಲವಲ್ಲ ಎಂದು ಕೋಪಿಸಿಕೊಂಡೊ ಏನೊ ಘರ್ ಘರ್ ಎನ್ನುತ್ತವೆ. ಹೀಗೆ ಹೇರನ್ನು ಕಂಡು ಬೊಗಳುವುದರಿಂದ ಏನಾಗುತ್ತದೆ ; ಅವಕ್ಕೆ ನಾಲ್ಕು ಲಾತ ಬೀಳುತ್ತದೆ. ಬಸವಣ್ಣನವರು ಈ ಸಾಮಾಜಿಕ ಚಿತ್ರವನ್ನೂ ಸೊಗಸಾಗಿ ಇಲ್ಲಿ ರೂಪಕವಾಗಿ ಬಳಸಿಕೊಂಡಿದ್ದಾರೆ.

ಪೆಣ್ಣಿನ ಹಿಂದೆಯೆ ಸುಳಿದಾಡುವ ವಿಷಯಾಸಕ್ತಿ "ಟಗರ ಬೆನ್ನಲಿ ಸುಳಿವ ಸೊಣಗ"ನಂತೆ. ಟಗರನ್ನು ಕಾಯುವ ಕುರುಬ ಹೊಡೆದಾನು ಎಂದೂ ಅದಕ್ಕೆ ಚಿಂತೆಯಿಲ್ಲ. ಆದರೆ ಭಕ್ತನ ಮನಸ್ಸು ಶಿವವಿಲ್ಲದ ಯಾವುದರೆಡೆಯೂ ಹರಿಯಬಾರದು. ಅದಕ್ಕೆ ಬಸವಣ್ಣನವರು ಹೇಳುತ್ತಾರೆ :

"ಒಡೆಯರಿಲ್ಲದ ಮನೆಯ ತುಡುಗುಣಿಯ ನಾಯಿ ಹೊಗುವಂತೆ !
ನೀನಿಲ್ಲದವರ ಮನೆಯ ಹೊಗೆನಯ್ಯಾ."

ನಾಯಿಯ ಕರ್ತವ್ಯ ಮನೆ ಕಾಯುವುದು ಮನಸ್ಸಿನ ಕರ್ತವ್ಯವೂ ಆತ್ಮಾಲಯವನ್ನು ಕಾಯುವುದೇ—ಅಲ್ಲಿ ಶಿವ ಇಲ್ಲದ ಘಳಿಗೆಯಲ್ಲಿಯೂ, ಆದರೆ ತುಡುಗುಣಿ ನಾಯಿಗೆ ಅದು ಕಷ್ಟ. ಬಸವಣ್ಣನವರು ತುಡುಗುಣಿನಾಯಾಗಲು ಬಯಸರು.

ಭಕ್ತ ಭಾಷೆ ತಪ್ಪಿದ ಮೇಲೆ ಪ್ರಾಣದಾಸೆಯನ್ನು ಬಿಟ್ಟುಕೊಂಡು ಫಲವಿಲ್ಲ. "ಮಿಾಸಲ ಸೊಣಗ ಮುಟ್ಟಿದಂತೆ" ಅವನ ಪಾಡು. ಭಗವಂತನಿಗೆಂದು ಮಿಾಸಲಾಗಿಟ್ಟ ಬದುಕು—ಪ್ರಸಾದಗಳು ಎಂಜಲಾಗದಂತೆ ಎಚ್ಚರವಿರಬೇಕು. ತಾನು ತಿನ್ನದೆ, ತನ್ನ ಆಸೆಗಳನ್ನೆಲ್ಲ ಬಿಗಿಹಿಡಿದು, ಮುಟ್ಟಿದರೆ ಮೈಲಿಗೆಯಾದೀತಲ್ಲ ಎಂದು ಕಾದಿಟ್ಟಿರುವ ಮಿಾಸಲನ್ನು ನಾಯಿ ಮುಟ್ಟಿದರೆ ಏನಾಗಬೇಕು? ಶಿವಾರ್ಪಿತವಾದ ಭಕ್ತನ ಜೀವ ಸುಳ್ಳುನುಡಿದಾಗ ಅದು ನಾಯಿ ಮುಟ್ಟಿದ ಮಿಾಸಲಿನಂತೆ ವ್ಯರ್ಥ. ಬಹಳ ಚೆನ್ನಾಗಿದೆ ಈ ಮಾತು.

ಸಂಪೂರ್ಣ ಶಿವಾರ್ಪಿತವಾದ ಬಾಳಿನ ಮಿಾಸಲನ್ನು ಹೀಗೆ ಏನೆಲ್ಲಾ ನಾಯಿಗಳು ನೆಕ್ಕಲು ಬರುತ್ತಿರುತ್ತವೆಯೊ. ಸಂಸಾರ ಅಂತಹ ಭಯಂಕರವಾದ ನಾಯಿ; ಅಟ್ಟಿಕೊಂಡು ಬಂದು ಎಂಜಲುಮಾಡುತ್ತದೆ. ಶಿವನೆ ಪತಿ, ತಾನೆ ಸತಿ, ಎಂದು ಒಪ್ಪಿಕೊಂಡ ಬದುಕು ವಾಸ್ತವವಾಗಿ ಕನ್ಯೆಯೊಬ್ಬಳನ್ನು ಕೈವಿಡಿದಿರುತ್ತದೆ. ಹೀಗೇಕೆ ವೇಶ್ಯಾಜೀವನ? ಭಕ್ತಿಕನ್ಯಾ ಪಾವಿತ್ರ್ಯ, ಮನದ ಮಿಾಸಲು ಎಲ್ಲಿ ತಾನೆ ಉಳಿಯಿತು? ನಾಯಿಯನ್ನು ಅಟ್ಟಿ ಎಡೆಯನ್ನು ಕಾಯಬೇಕಾದುದು ಮನದೊಡೆಯನ ಕರ್ತವ್ಯ:

"ಸಂಸಾರವೆಂಬ ಶ್ವಾನನಟ್ಟಿ ಮಿಾಸಲ ಬೀಸರ ಮಾಡದಿರಯ್ಯಾ
ಎನ್ನ ಚಿತ್ತವು ನಿಮ್ಮ ಧ್ಯಾನವಯ್ಯ
ನೀವಲ್ಲದೆ ಮತ್ತೇನೂ ಅರಿಯೆನು.
ಕನ್ನೆಯಲ್ಲಿ ಕೈವಿಡಿದೆನು, ನಿಮ್ಮಲ್ಲಿ ಸೆರೆದೆನು,
ಮನ್ನಿಸು, ಕಂಡಾ, ಮಹಾಲಿಂಗವೇ!
ಸತಿಯಾನು, ಪತಿ ನೀನು, ಅಯ್ಯಾ
ಮನೆಯೊಡೆಯ ಮನೆಯ ಕಾಯ್ದಿಪ್ಪಂತೆ
ನೀನೆನ್ನ ಮನವ ಕಾಯ್ದಿಪ್ಪ ಗಂಡನು!
ನಿಮಗೋತ ಮನವನನ್ಯಕ್ಕೆ ಹರಿಸಿದರೆ
ನಿನ್ನಭಿಮಾನ ಹಾನಿ, ಕೂಡಲ ಸಂಗಮದೇವ!"

ಹೊರಗಿನ ಸಂಸಾರ, ಹೀಗೆ ಅಟ್ಟಿಕೊಂಡು ಬಂದರೆ ಯಾರಾದರೂ ರಕ್ಷಿಸ

ಬಹುದು. ಆ ಸಂಸಾರದಿಂದ ಈ ಭಗವದ್ ಭಕ್ತಿಸಂಸಾರಕ್ಕೆ ವ್ಯಭಿಚಾರವಾಗ ದಂತೆಯೂ ಆ ಶಿವಪತಿಯೆ ನೋಡಿಕೊಳ್ಳಬಹುದು. ಆದರೆ ಭಕ್ತನ ಇಂದ್ರಿಯ ಗಳೆ ಅವನ ಆತ್ಮವನ್ನು ಕಿತ್ತು ತಿನ್ನಲು ಹಾತೊರೆಯುವುದಾದರೆ? ಭಗವದರ್ಪಿತ ವಾದ ಆತ್ಮದ ಮೇಲೂ ಇಂದ್ರಿಯ ಮನೋವಿಕಾರಶುನಕಗಳು ಹಾರಿ ಹಾರಿ ಬೀಳುತ್ತವೆ ; ಬಿದ್ದು ಕಚ್ಚಿ ಕಚ್ಚಿ ತಿನ್ನುತ್ತವೆ.

"ಒಂದು ಮೊಲಕ್ಕೆ ನಾಯಸೊಂಬತ್ತ ಬಿಟ್ಟಂತೆ
'ಎನ್ನ ಬಿಡು ತನ್ನ ಬಿಡೆಂ'ಬುದು ಕಾಯವಿಕಾರ,
'ಎನ್ನ ಬಿಡು ತನ್ನ ಬಿಡೆಂ'ಬುದು ಮನೋವಿಕಾರ,
ಕರಣೇಂದ್ರಿಯಂಗಳೆಂಬ ಸೊಣಗ ಮುಟ್ಟದ ಮುನ್ನ
ಮನ ನಿಮ್ಮನೆಯ್ದುವುದೆ, ಕೂಡಲಸಂಗಮದೇವಾ"

ದೇವಕಿರಾತಾರ್ಪಿತವಾಗಬೇಕಾದ ಮನದ ಮೊಲವನ್ನು ಅಗಿದು ಅಗಿದು ತಿಂದು ಎಂಜಲಾಗಿಸಲು, 'ಮೊಸಲುಗೆಡಿಸಲು' ಈ ಸೊಣಗ ವಿಕಾರಗಳು ಮುಂದೆ ನುಗ್ಗುತ್ತಲೇ ಇರುತ್ತವೆ. ಜಗ್ಗುವ ಸೊಣಗಗಳನ್ನು ಬಿಗಿಹಿಡಿಯು ವುದು ಯಾರಿಗೂ ಕಷ್ಟವೆ. ಅವು ಒಂದಲ್ಲ ಒಂಬತ್ತು ನೋಡಿ. ಹಾಗೆಯೆ ಅವು ಒಮ್ಮೊಮ್ಮೆ ಕಚ್ಚುವುದರಿಂದ ಆಗುವ ನೋವನ್ನು ಅನುಭವಿಸುವುದು ಎಷ್ಟು ಕಷ್ಟವೆಂಬುದನ್ನು ದೇವರೇ ಬಲ್ಲ. ಅದಿರಲಿ, ಇಲ್ಲಿಯ ದೃಗ್‌ರೂಪಕವು ಹೇಗೆ ಪ್ರತ್ಯಕ್ಷವಾಗಿ ನಿಲ್ಲುತ್ತದೆ ನೋಡಿ. 'ಎನ್ನ ಬಿಡು ! ತನ್ನ ಬಿಡು' ಎನ್ನುವ ಉಕ್ತಿ ರೀತಿ, ಹಾಗೂ ಅವರ ಪುನರುಕ್ತಿ ಈ ಚಿತ್ರವನ್ನು ಸಜೀವಗೊಳಿಸಿದೆ.

ಶಿವಕಿರಾತನಿಗೆ ಸೇರಬೇಕಾದ ಈ ಮೃಗವನ್ನು ಹಿಡಿಯಲು ಕಿರಾತರು ಬಂದು ಪಾಪದ ಬಲೆ ಬೀಸುತ್ತಾರೆ. ಆದರೆ ಅದು ಶಿವನಿಗೆ ಸಲ್ಲಬೇಕಾದದ್ದು ; ಅನ್ಯದೀಹಕ್ಕೊಳಗಾಗದೆ ಶಿವಜಾಲದಲ್ಲಿ ಬಿದ್ದ ಅದು ಅವನಿಗೆ ಮಾತ್ರ ಅರ್ಪಿತ ವಾಗುತ್ತದೆ.

"ಬೆಟ್ಟಕ್ಕೆ ಬೆಳ್ಳಾರ ಸುತ್ತಿತ್ತಯ್ಯ
ಪಾಪದ ಬಲೆಯ ತಂದು ಮುಂದೊಡ್ಡಿದರಯ್ಯ
ಬೇಟೆಕಾಜಿಸು ಮೃಗವನಟ್ಟೆ, ಮೃಗ ಗೋರಿಗೊಳಗಾಗದಯ್ಯ !
ಹರನೊಡ್ಡಿದ ಬಲೆಯಲ್ಲಿ ಸಿಲುಕಿದ ಮೃಗವು
ಕೂಡಲ ಸಂಗಮಂಗೆ ಓಗರವಾಯಿತ್ತಯ್ಯಾ !"

ಅಧಿಕಾರದಲ್ಲಿದ್ದ ಬಸವಣ್ಣವನರಿಗೆ ಧನಬಂಧನದಿಂದ ತಪ್ಪಿಸಿಕೊಳ್ಳುವುದು

ಕಷ್ಟವಾಗಿದ್ದಿರಬೇಕು. ಹಾಗೆ ತಪ್ಪಿಸಿಕೊಂಡಾಗಲೂ ಭಕ್ತರಿಗಾಗಿ ತಾವು ಧನ ಸಮರ್ಪಣಮಾಡುತ್ತಿರುವೆನೆಂಬ ಭಾವನೆಯಾದರೂ ಬಾಧಿಸುತ್ತಿದ್ದಿರಬೇಕು. ಒಮ್ಮೆ ಸಂತೋಷಗೊಳಿಸುವ, ಒಮ್ಮೆ ದುಃಖಗೊಳಿಸುವ ಒಮ್ಮೆ ನಂಬಿಸುವ ಮತ್ತೊಮ್ಮೆ ವಂಚಿಸುವ ಧನವನ್ನು ಕಂಡು ಅವರಿಗೆ ಹೇಸಿಕೆಯಾಗಿದ್ದಿರಬೇಕು. ಅದರಿಂದ ತಾವು ನಷ್ಟಾತ್ಮರಾದಂತೆ ಯಾತನೆಯಿಂದ ಹೇಳುತ್ತಾರೆ: "ಕಾಂಚನ ವೆಂಬ ನಾಯ ನೆಚ್ಚಿ ನಿಮ್ಮ ನಾನು ಮರೆದೆನಯ್ಯ", ಎಂದು. ಮೆಚ್ಚುವ ಬಾಲವಲ್ಲಾಡಿಸುವ ಬೊಗಳುವ, ಹೇಸಿಕೆಯನ್ನು ಕಂಡಾಗಲಿ ನೆನೆದಾಗಲಿ ಅದನ್ನರಸಿ ಓಡಿಹೋಗುವ ನಾಯಿಯಂತೆ ಧನ ಅವರಿಗೆ ಆಗ ಕಂಡಿರಬೇಕು. ನಾಯಿಯ ರೂಪಕಗಳಲ್ಲಿ ಮತ್ತೊಂದು ಬಹು ಶಕ್ತಿಯುತವಾಗಿದೆ.

"ಅಂದಣವನೇರಿದ ಸೊಣಗನಂತೆ
  ಕಂಡೊಡೆ ಬಿಡದು : ಮುನ್ನಿನ ಸ್ವಭಾವವನು !
ಸುಡು ಸುಡು ಮನವಿದು ವಿಷಯಕ್ಕೆ ಹರಿಯುವುದು
  ಮೃಡ ನಿಮ್ಮನನುದಿನ ನೆನೆಯಲೀಯದು."

'ನಾಯಿಗೆ ಪಟ್ಟ ಕಟ್ಟಿದಂತೆ' ಎನ್ನುವ ಗಾದೆಮಾತು ಕೇಳಿದ್ದೇವೆ. ಇಲ್ಲಿ 'ಅಂದಣವನೇರಿದ ಸೊಣಗನಂತೆ' ಎನ್ನುವ ಮಾತನ್ನು ನೋಡುತ್ತೇವೆ. ಒಟ್ಟಿನಲ್ಲಿ ಎರಡೂ ಅಯೋಗ್ಯನಿಗೆ ಪದವಿ ಬಂದುದನ್ನು ಧ್ವನಿಸುತ್ತವೆ. ಆದರೆ ಇಲ್ಲಿ "ಕಂಡೊಡೆ ಬಿಡದು—ಮುನ್ನಿನ ಸ್ವಭಾವವನು" ಎನ್ನುವ ಮುಂದಣ ಪಂಕ್ತಿ ಭಾವಪರಿವೇಷವನ್ನೇ ವಿಸ್ತರಿಸುತ್ತದೆ. ನಾಯಿಗೆ ಅಂದಣಯೋಗವುಂಟಾದ ಮಾತ್ರದಿಂದಲೇ ಅದರ ಪೂರ್ವಭವ ಮರೆತಿರುವುದಿಲ್ಲ. ಅದಕ್ಕೆ ಅಮೃತಾನ್ನ ಸಮೃದ್ಧವಾಗಿ ದೊರೆತರೂ ಆ ಹಳೆಯ ಸವಿಗೆ ಸಮಾನ ಯಾವುದೂ ತೋರದು. ಹಾಗಿರುವಾಗ ಅದನ್ನು ಅದು ಕಂಡರೆ, ಇಲ್ಲ ಅದರ ನೆನಪು ಅದಕ್ಕಾದರೆ ಏನಾಗಬೇಕು. ? ಪಣ್ಣನೆ ಹಾರುತ್ತದೆ ಅಂದಣದಿಂದ. ಬಸವಣ್ಣನವರ ಈ ವಚನದಲ್ಲಿ ಈ ಎರಡೂ ಭಾವಗಳ ಧ್ವನಿಯಿದೆ. ಈ ರೂಪಕ ಸನ್ನಿವೇಶಗಳನ್ನು ಊಹಿಸಿಕೊಂಡಾಗ ಅವುಗಳ ಭಾವಗಾಂಭೀರ್ಯ ಮತ್ತೂ ಅತಿಶಯವಾಗುತ್ತದೆ.

ಭಕ್ತನಾದವನ ಮನಸ್ಸನ್ನು ಅವನ ಅನ್ಯಭವಸಂಸ್ಕಾರಗಳು ಪೀಡಿಸುತ್ತಲೇ ಇರುತ್ತವೆ. ಅದರಲ್ಲೂ ಭಕ್ತ ತನ್ನ ಸಂಸ್ಕಾರಬಲದಿಂದ ಭಕ್ತನಾಗಿರದೆ ಸನ್ನಿವೇಶ ಯೋಗದಿಂದ ಆ ಗೌರವಕ್ಕೆ ಏರಿದ್ದರೆ ಅವನ ಬದುಕಿನಲ್ಲಂತೂ ಆ ಹಳೆಯ

ರಾಗಗಳು ಕ್ಷಣಕ್ಷಣಕ್ಕೂ ಬಾಧಿಸುತ್ತಲೆ ಇರುತ್ತವೆ. ಬಸವಣ್ಣನವರು ಮೊದಲು ಬ್ರಾಹ್ಮಣರಾಗಿದ್ದರಂತೆ. ಶಿವಶರಣದೀಕ್ಷೆಯನ್ನು ಪಡೆದುಕೊಂಡಮೇಲೂ ಆ ಹಳೆಯ ವಾಸನೆಯು ಎಳೆ ಎಳೆಯುತ್ತಿತ್ತೇನೊ. ಅವರಂತಹವರ ವಿಚಾರ ವಾಗಿ ಹಾಗಿರಲಿ, ಉಳಿದ ನೂರಾರು ಸಾಮಾನ್ಯಶರಣರ ವಿಷಯದಲ್ಲಂತೂ ಆ ಅಂಶ ಬಹುಮಟ್ಟಿಗೆ ಸತ್ಯ. ಶಿವಶರಣತ್ವ ಉಳಿದೆಲ್ಲ ಭವಗಳಿಗಿಂತ ಎಷ್ಟೊ ಪಾಲು ಶ್ರೇಷ್ಠವೆಂದು ಭಾವಿಸಿದ್ದ ಆ ಭಕ್ತ. ಆದರೆ ಹಾಗೆ ಆ ದೀಕ್ಷೆಯನ್ನು ಪಡೆದವರೆಲ್ಲ ಅದನ್ನು ಅರಗಿಸಿಕೊಳ್ಳಬೇಕಲ್ಲ. ಅಂತಹ ಸಾಮಾನ್ಯರಿಗೆ ಹಳೆಯ ವಾಸನೆ, ಅಷ್ಟೇ ಏಕೆ, ಹಳೆಯ ಉಣಿಸು ಆಚಾರ ಎಲ್ಲವೂ ಒಂದಲ್ಲ ಒಂದು ರೀತಿ ನೆನಪಿಗೆ ಬಂದು ಕಾಡುತ್ತಲೆ ಇದ್ದುವು. ಹಾಗಾಗಿ ಶಿವಶರಣತ್ವದ ಅಂದಣದಿಂದ ಹಾರಿಹೋಗುತ್ತಿತ್ತು ಅವರ ನಾಯಿ ಚೇತನ. ಆ ಹಳೆಯ ಕ್ಷುದ್ರ ದೈವಗಳನ್ನು ಅರಸಿಕೊಂಡು ಹೋಗುತ್ತಿದ್ದ ಭಕ್ತರಿಗೆ ಬಂದ ಶರಣದೀಕ್ಷೆ ನಾಯಿಗೆ ಬಂದ ಅಂದಣಯೋಗವಾಗಿತ್ತು. ಹೀಗೆ ಈ ಉಪಮಾನ ಬಹಳ ಶಕ್ತಿಯುತವಾಗಿದೆ, ಧ್ವನಿಪರಿವೇಷದಿಂದ ಕೂಡಿದೆ.

ಭಕ್ತಿಯನ್ನು ಭಗವದನುರಕ್ತಿಯಿಂದ, ತನ್ನೊಳಗೆ ಇರುವ ಪ್ರೀತಿಯ ಅನಿವಾರ್ಯತೆಯಿಂದ ಅಲ್ಲದೆ ಬರಿಯ ಅಭ್ಯಾಸಬಲದಿಂದ ಮಾಡಿದರೇನು ಫಲ? ನಾಯಿ ತನ್ನೊಡೆಯನನ್ನು ಕಂಡು ಅಭ್ಯಾಸಬಲದಿಂದ ಬಾಲಬಡಿಯುವುದಿಲ್ಲವೆ? ಏನು ಸಿದ್ಧಿ ಬಂತು ? ಅದಕ್ಕಾದರೂ ಏನು ಮುಟ್ಟಬೇಕು ?

"ತನುವನಲ್ಲಾಡಿಸಿ ನೋಡಿದಲ್ಲಿ, ಮನವನಲ್ಲಾಡಿಸಿ ನೋಡಿದಲ್ಲಿ
ಧನವನಲ್ಲಾಡಿಸಿ ನೋಡಿದಲ್ಲಿ ದೃಢವಿಲ್ಲದಿದ್ದಡೆ,
ಒಡೆಯನ ಕಂಡು ನಾಯಿ ಬಾಲವ ಬಡಿದು ಕೊಂಬಂತೆ
ಅದಕೇನು ವೆಚ್ಚಹತ್ತಿದುದುಂಟೆ ? ಕೂಡಲಸಂಗಮದೇವಾ ?"

ಈ ದೃಢವಿಲ್ಲದ ಶಾಸ್ತ್ರಭಕ್ತಿಯಲ್ಲಿ, ಅಭ್ಯಾಸ ಭಕ್ತಿಯಲ್ಲಿ, ಯಾವ ಶಕ್ತಿಯಿದೆ ? ಷಟ್ಸ್ಥಲ ಓದಿದ ಮಾತ್ರಕ್ಕೆ ಭಕ್ತನಾಗಲಿಲ್ಲ, ದಾಸೋಹ ಮಾಡಬೇಕಲ್ಲ. ಇಲ್ಲದಿದ್ದರೆ ?

* "ಶ್ವಾನ ಮಡಕೆಯನಿಳುಹಿ ಬೋನವ ತಿಂದು ಏಱಿಸಲಱಿಯದಂತೆ" ಆಗುತ್ತದೆ. ಗೂಡಿನಿಂದಲೊ, 'ನೆಲ' ದಿಂದಲೊ ಅನ್ನದ ಮಡಕೆಯನ್ನು ಇಳುಹಿ,

---

* ಇಂಥದೆ ಒಂದು ಚಿತ್ರ ನಯಸೇನನಲ್ಲಿ ಕಂಡುಬರುತ್ತದೆ.

ಅಲ್ಲವೆ ಕೆಡವಿ, ಸ್ವೇಚ್ಛೆಯಾಗಿ ತಿಂದ ನಾಯಿ ಆ ಮಡಕೆಯನ್ನು ಮೇಲೇರಿಸ ಬಲ್ಲುದೆ ? ಒಡತಿ ಬಂದಾಳು ಎಂಬ ಭೀತಿಯಾದರೂ ಅದಕ್ಕುಂಟೆ ? ಈ ರೂಪಕ ಪರಿಣಾಮಕಾರಿಯಾಗಿಯೆ ಇದೆ.

ತಮ್ಮನ್ನೆ ಕುರಿತು ಬಸವಣ್ಣನವರಷ್ಟು ತೀಕ್ಷ್ಣವಾಗಿ ನಗ್ನವಾಗಿ ನುಡಿಯುವುದು ಅತ್ಯಸಾಧಾರಣವಾದದ್ದೆ ಸರಿ. ಒಂದು ನಾಡಿನ ಮಹಾಪ್ರಧಾನಿಯಾಗಿದ್ದು ಲೋಕಭಯ ಗೌರವಕ್ಕೆ ಪಾತ್ರರಾಗಿದ್ದರು. ಮಹಾ ಭಕ್ತರೆಂಬ ಕಾರಣದಿಂದಾಗಿ ಶರಣ ಪ್ರಪಂಚದಲ್ಲಂತೂ ಅಣ್ಣನಾಗಿಯೆ ಪೂಜ್ಯರಾದರು. ಜೊತೆಗೆ ಬೇರೆ ಅವರು ಪೂರ್ವಾಶ್ರಮದಲ್ಲಿ ಉತ್ತಮ ಕುಲದವರಾಗಿದ್ದರೆಂಬ ಕಾರಣದಿಂದಾಗಿ ಸಾಧಾರಣ ಭಕ್ತಜನದ ವಿಸ್ಮಯಕ್ಕೂ ಕಾರಣವಾಗಿದ್ದರು. ಇಂಥವರು ತಮ್ಮನ್ನು ಈ ಯಾವ ದೊಡ್ಡಸ್ತಿಕೆಯ ಪೀತಾಂಬರದಿಂದಲೂ ಮುಚ್ಚಿಕೊಳ್ಳದೆ ಆದಷ್ಟೂ ದಿಗಂಬರವಾಗಿ ನಿರ್ಮಲಗೊಳ್ಳುವುದಕ್ಕೆ ಭಯಂಕರವಾಗಿ ಹೋರಾಡುತ್ತಿದ್ದರು. ಅವರ ಆ ಪ್ರಾಮಾಣಿಕತೆಯ ಸಾಕ್ಷಿಯಾಗಿ ಅವರ ಈ ವಚನಗಳು ನಿಂತಿವೆ....ಆ ಮಹಾಭಕ್ತ ತಮ್ಮ ಭಕ್ತಿಯನ್ನು ಕುರಿತು ಎಷ್ಟು ಉಗ್ರವಾಗಿ ನುಡಿಯುತ್ತಾರೆ :

"ಒಳ್ಳಿಹ ಮೈಲಾರನ ಒಳಗೆಲ್ಲ ಸಣಬು !
ಹೊರಗಣ ಬಣ್ಣ ಕರಲೇಸಾಯಿತ್ತಯ್ಯ !
ಶ್ವಾನನ ನಿದ್ರೆ ! ಅಜ್ಞಾನಿಯ ತಪದಂತೆ !
ಆಯಿತ್ತಯ್ಯಾ ಎನ್ನ ಮತಿ, ಕೂಡಲಸಂಗಮದೇವಾ"

ಮೈಲಾರದೇವತೆ ಬಸವಣ್ಣನವರ ಕಾಲದಲ್ಲಿ ಬಹು ಪ್ರಸಿದ್ಧವಾಗಿದ್ದಿರಬೇಕು. ಆ ದೇವರನ್ನು, ಒಳಗೆಲ್ಲ ಸೆಣಬು ತುರುಕಿ ಮೇಲೆ ಮಣ್ಣು ಮೆತ್ತಿ ಬಣ್ಣ ಬಳಿದು ನಯಮಾಡಿ ಹೊಳಪಿಟ್ಟು ಪೂಜಿಸುತ್ತಿದ್ದಂತೆ ತೋರುತ್ತದೆ—ಇಂದು ಗಣೇಶ ಗೌರಿಯರ ಪ್ರತಿಮೆಗಳನ್ನು ಹಬ್ಬದ ದಿನಗಳಲ್ಲಿ ಮಾಡುವಂತೆ. ಆ ಮೂರ್ತಿ ಹೊರನೋಟಕ್ಕೇನೊ ಚೆಲುವ; ಆದರೆಷ್ಟು ದಿನ ? ನೀರು ಬಿದ್ದರೆ ? ಉರಿತಾಗಿದರೆ ? ಹೀಗಿದ್ದರೂ ಸಾಮಾನ್ಯ ರಂಜಕವಾಗಿದ್ದೆ ಇದ್ದ. ಈ ಚಿತ್ರ ಬಸವಣ್ಣನವರ ಆತ್ಮ ಪರೀಕ್ಷಣವನ್ನು ಪ್ರತಿಮಿಸುವ ಶಕ್ತಿ ರೂಪಕವಾಗುತ್ತದೆ. ಜತೆಗೆ ಮುಂದೆ ಬರುವ ನಾಯಿಯ ಚಿತ್ರ, ಬಹು ಗಾಢವಾದ ಪರಿಣಾಮವನ್ನುಂಟು ಮಾಡುತ್ತದೆ. ನಾಯಿ ನಿದ್ರೆ ಮಾಡುವುದನ್ನು ಚೆನ್ನಾಗಿ ನೋಡಿದ್ದರಂತೂ ಇದರ ಶಕ್ತಿ ತಿಳಿಯುತ್ತದೆ. ಅದು ನಿದ್ರೆ ಮಾಡುವ ರೀತಿಯೆ

ರೀತಿ. ಹಗಲೆಲ್ಲಾ ನಿದ್ರೆ ಮಾಡುವುದೂ ಉಂಟು, ರಾತ್ರಿಯೆಲ್ಲ ಬೊಗಳಾಟದಲ್ಲಿ ನಿದ್ದೆಗೆಡುವುದೂ ಉಂಟು, ನಿದ್ರೆ ಮಾಡುವುದಾದರು ಹೇಗೆ! ಕಣ್ಣು ಮುಚ್ಚಿಯೆ ಇರುತ್ತದೆ; ದಾರಿಯಲ್ಲಿ ಯಾವುದೊ ನಾಯಿಯ ಸದ್ದಾದರೊ ಮತ್ತಾರ ಸಪ್ಪುಳವಾದರೊ ಸಾಕು, ಘುರ್ ಎನ್ನುತ್ತದೆ. ಏನಿಲ್ಲದಿದ್ದರೂ ತನ್ನ ಮೈಮೇಲೆ ಹಾರಾಡುತ್ತ ಕಚ್ಚಿಕೊಂಡಿರುವ ತೊಣಚಿಗಳನ್ನು ಕೆರೆಯುತ್ತಲೆ ಇರುತ್ತದೆ. ಒಮ್ಮೊಮ್ಮೆ ಅದರ ಮೇಲೆ ಸಿಡಿದೆರಗಿ ಮತ್ತೆ ನಿದ್ದೆ ಹೋಗುತ್ತದೆ. ಗಂಭೀರವಾಗಿ ನಿದ್ರೆ ಮಾಡುತ್ತಿದೆ ಎನ್ನುವಾಗಲೂ ಕೂಡ ಅದು ಕನಸಿನಲ್ಲಿ ಯಾವ ದಾಯಾದಿಯೊಡನೆ ಹೋರಾಡುತ್ತಿರುತ್ತದೊ, ಯಾವ ನೆನಪನ್ನರಸಿಕೊಂಡೋಡಿರುತ್ತದೆಯೊ! ನಾಯ ನಿದ್ರೆ ಇಂಥದು; ಅಜ್ಞಾನಿಯ ತಪ ವಿಂಥದು. ಬಸವಣ್ಣನವರು ತಮ್ಮ ಮನ ಇಂತಹದೆಂದು ಬಹು ಕಟುವಾಗಿ ಹೇಳಿಕೊಳ್ಳುತ್ತಾರೆ. ಇದು ಬಹು ಯಶಸ್ವಿಯಾದ ರೂಪಕವೆನ್ನೈ.

ತಮ್ಮನ್ನೆಂತೊ ಲೋಕವನ್ನಂತೆಯೆ ನಿರ್ದಾಕ್ಷಿಣ್ಯವಾಗಿ, ಆದರೆ ಸದಯರಾಗಿ ವಿಮರ್ಶಿಸುವಾಗ ಬಸವಣ್ಣವರಿಗೆ ಈ ನಾಯಿ ರೂಪಕವಾಗಿ ನೆರವಿಗೆ ಬರುತ್ತದೆ. ಅವರ ಪ್ರಸಿದ್ಧವಾದ 'ಲೋಕದ ಡೊಂಕ ನೀವೇಕೆ ತಿದ್ದುವಿರಿ!' ಎಂಬ ಮಾತಿನಲ್ಲೆ ಈ ನಾಯಬಾಲದ ಡೊಂಕಿನ ಚಿತ್ರ ಅಡಗಿರುವಂತೆ ತೋರುತ್ತದೆ. ನಾಯಿಬಾಲದ ಡೊಂಕು ತಿದ್ದುವುದಕ್ಕಂತೂ ಬರುವುದೇ ಇಲ್ಲ. ದಬ್ಬೆ ಕಟ್ಟಿದಾಗ ನೇರವಾಗಿರುವಂತೆ ತೋರುತ್ತದೆ. ಅದನ್ನು ಕಳಚಿದೊಡನೆಯೆ ಮೊದಲಿಗಿಂತ ಡೊಂಕಾಗಿಬಿಡುತ್ತದೆ ಆ ಬಾಲ. ಲೋಕವೂ ಇಷ್ಟೆ. ಸುಧಾರಕನು ಮಾಡುವ ಸುಧಾರಣೆಗಳಿಂದ ಲೋಕದ ಮೇಲಾಗುವ ಪರಿಣಾಮವಷ್ಟೆ. ಈ ಮಾತಿನಲ್ಲಿ ನಾಯಿಯ ಅಂತರ್ಗತ ರೂಪಕವಿರುವಂತೆ ತೋರುತ್ತದೆ.

ಮುಂದಿನ ವಚನದಲ್ಲಿ ಇದು ಮತ್ತೂ ಶಕ್ತಿಮತ್ತಾಗಿ ವ್ಯಕ್ತವಾಗಿದೆ:

"ಆಗಳೂ ಬೋಗರಮನೆಯ ಬಾಗಿಲ ಕಾಯ್ದುಕೊಂಡಿಪ್ಪವು, ಕೆಲವು ದೈವಂಗಳು!

ಹೋಗೆಂದರೆ ಹೋಗವು, ಕೆಲವು ದೈವಂಗಳು,
ನಾಯಿಂದಲೂ ಕರಕಷ್ಟ, ಕೆಲವು ದೈವಂಗಳು!
ಬೋಗರ ಬೇಡಿಕೊಂಡುಂಬ ದೈವಂಗಳು
ತಾವೇನ ಕೊಡುವುವು, ಕೂಡಲಸಂಗಮದೇವಾ!

ಒಬ್ಬೊಬ್ಬರ ಮನಸ್ಸಿನಲ್ಲೂ ಎಷ್ಟು ದೇವರುಗಳಿದ್ದಿಲ್ಲ. ದುರ್ಬಲರ, ದುರಾಶಾವಂತರ ಮನಸ್ಸಿಲ್ಲಂತೂ ದೈವದ ಜಾತ್ರೆಯೊ ಜಾತ್ರೆ ನೆರೆದಿರುತ್ತದೆ. ಬಯಕೆಗಳೆಷ್ಟೊ ದೇವತೆಗಳೂ ಅಷ್ಟೆ ಇದ್ದಾರು. ನಮ್ಮನ್ನು ಕಾಪಾಡುವುದಿರಲಿ, ಎಷ್ಟೊ ವೇಳೆ ನಮ್ಮ ಬಯಕೆಗಳು ಸೃಷ್ಟಿಸಿಕೊಳ್ಳುವ ಅಂಥ ದೈವಗಳನ್ನು ನಾವೆ ಸಾಕಿ ಸಲಹುತ್ತಿರುತ್ತೇವೆ. ಅವರು ಆಮೇಲೆ ಆಚೆ ಹೋಗೆಂದರೂ ಹೋಗುವುದಿಲ್ಲ. ಎಲ್ಲೋ ಬೀದಿಯಲ್ಲಿ ಅಲೆಯುತ್ತಿದ್ದ ನಾಯನ್ನು ಅಯ್ಯೋ ಎಂದು ಮನೆಗೆ ತಂದು ಒಂದುದಿನ ಅನ್ನವಿಟ್ಟರೆ ಸಾಕು, ಅದು ಇನ್ನಾಚೆ ಹೋಗುವುದೇ ಇಲ್ಲ. ಆದರೆ ಎಲ್ಲ ನಾಯಿಗಳೂ ರಕ್ಷಕರಾಗುವುದಿಲ್ಲ, ಹಲವಾರು ನಮಗೆ ಕಿರುಕುಳವೆ ಆಗುವುದುಂಟು. ಇಂಥ ನಾಯಿಗಳಂತೆ ಕ್ಷುದ್ರ ಬಯಕೆಯ ಸೃಷ್ಟಿಯಾದ ದೈವಗಳು. ಮೇಲಿನ ವಚನದ ಮೊದಲ ಮೂರು ಪಂಕ್ತಿಗಳಲ್ಲಿ ನಾಯ ಉಚ್ಚರಣೆಯಿಲ್ಲದಿದ್ದರೂ, ಅದರ ಸ್ಮರಣೆ ಇದೆ. ನಾಲ್ಕನೆ ಪಂಕ್ತಿಯಲ್ಲಂತೂ ಅದು ಸ್ಪಷ್ಟವೆ ಆಗುತ್ತದೆ. ಒಟ್ಟಿನಲ್ಲಿ ಈ ವಚನದಲ್ಲಿ ಬರುವ ಈ ನಾಯಿರೂಪಕ ಸತ್ತ್ವಯುತವಾಗಿದೆ.

ತಾವೆಷ್ಟೆ ತಮ್ಮನ್ನು ಲೋಕದ ಮುಂದೆ ನಿರ್ಭೀತರಾಗಿ ಖಂಡಿಸಿಕೊಂಡರೂ ಬಸವಣ್ಣನವರನ್ನು ಭಕ್ತರು ಅತಿಶಯಭಕ್ತಿ ಗೌರವದಿಂದಲೆ ಕಾಣುತ್ತಿದ್ದಂತೆ ಕಾಣುತ್ತದೆ. ಅದೇನೊ ಸರಿಯೆ; ಆದರೆ ಈ ಭಕ್ತನಿಗೆ ಮತ್ತೂ ಅಶಾಂತಿಯಾಗುತ್ತದೆ. ತಮ್ಮನ್ನು ಭಕ್ತರು ಹೊಗಳಬಹುದು, ಮೆರೆಸಬಹುದು. ಆದರೆ ತಾವೇನಾದಂತಾಯಿತು ?

"ಹೊಜ್ಜಿಸಿಕೊಂಡು ಹೋದ ನಾಯಿ: ಮೊಲನನೇನ ಹಿಡಿವುದಯ್ಯ ?
ಇಱಿಯದ ವೀರ ! ಇಲ್ಲದ ಸೊಬಗುವ ಹೇಳುವುದೇ ನಾಚಿಕೆ !
ಆನು ಭಕ್ತನೆಂತಪ್ಪೆನಯ್ಯ ? ಕೂಡಲಸಂಗಮದೇವಾ ?"

ಪೊದೆಪೊದೆಗಳಲ್ಲೆಲ್ಲ ಒಳನುಗ್ಗಿ ಅಂಡಲೆದಾಡಬೇಕಾದ ಬೇಟೆಯ ನಾಯನ್ನು ಹೊತ್ತುಕೊಂಡು ಹೋದರೆ, ಅಥವಾ ಹಾಗೆ ಅದು ಹೊರಿಸಿಕೊಂಡುಹೋಗುವಂಥದಾದರೆ, ಆ ನಾಯಿಯಿಂದ ಏನು ಫಲ ಬಂದೀತು ? ಅದನ್ನು ಜಾಯಾಲ ಎಂದು ಕರೆದೇನು ಫಲ ? ಒಡೆಯನೇನೊ ಮುದ್ದಾಗಿ ಸಾಕಿದ ನಾಯೆಂದು ಅದನ್ನು ಹೊತ್ತುಕೊಂಡೂ ಹೋಗಬಹುದು. ಆದರೆ ಬೇಟೆಯಲ್ಲೇನು ಮಾಡುವುದು ? ಬೇಟೆಯಾಡಹೋದ ನಾಯಿ ತಾನೆ ಬೇಟೆಯಾದೀತು ! ಇರಿಯದ

ವೀರನೂ ಹಾಗೆಯೆ. ಅಂತೆಯೆ ಬರಿಯ ಹೊಗಳಿಕೆಯಿಂದಲೆ ಭಕ್ತನಾದವನು ಹೊರಿಸಿಕೊಂಡು ಹೋದ.ಬೇಟೆನಾಯಿಯಂತೆ. ಲೋಕದಲ್ಲಿ ಇಂಥವರೆ ಹೆಚ್ಚು. ಸರಿ, ಆದರೆ ಪರಮ ಪ್ರಾಮಾಣಿಕ ಭಕ್ತ ಬಸವಣ್ಣನವರು ತಮ್ಮನ್ನು ಹೀಗೆಂದು ಕೊಳ್ಳಬೇಕೆ? ಅವರೆ ಅಂತಾದರೆ ನಾವು? ಈ ಹೊರಿಸಿಕೊಂಡು ಹೋದ ನಾಯಿ ಗಾದೆಯ ಮಾತಾಗಿರುವುದೂ ಉಂಟು. ಅಳುತ್ತಾ ಹೋದ ನಾಯಿ ಮೊಲ ಹಿಡಿದೀತೆ ಎಂಬ ಗಾದೆಯನ್ನು ನಮ್ಮ ತಂದೆ ಎಷ್ಟೋ ವೇಳೆ ಹೇಳು ತ್ತಿದ್ದುದುಂಟು, ನಾನು ಕೆಲಸ ಮಾಡುವ ರೀತಿ ನೋಡಿ!

ಇನ್ನು ಮರ್ಕಟರೂಪಕ. ನಾವೆಲ್ಲ ಕಪಿಯ ವಂಶದವರೆ ಎಂದು ಹೇಳುತ್ತಾರೆ. ನಮ್ಮ ಪೂರ್ವಿಕರನ್ನು ನಾವು ನೆನೆಯದ, ನೆನೆದು ಅವರಿಗೆ ಕಾಣಿಕೆ ಒಪ್ಪಿಸದ ದಿನವೇ ಇಲ್ಲ. ನಮ್ಮೊಳಗನ್ನೆ ನಾವು ನೋಡಿದರೆ ಇದೆಷ್ಟು ನಿಜವೆಂಬುದು ತಿಳಿಯುತ್ತದೆ. ಕ್ಷಣವಾದರೂ ನಿಂತಲ್ಲಿ ನಿಲ್ಲದೆ ನಮ್ಮದೇ ಆದ ನಮ್ಮ ಮನಸ್ಸು ಎಷ್ಟು ಕಷ್ಟ ಕೊಡುತ್ತದೆ. ಸಾಧನೆಯ ಪ್ರಥಮಾವಸ್ಥೆಯಲ್ಲಿರುವ ಚೇತನಕ್ಕೆ ಈ ಕಷ್ಟ ಬಹಳ ಹೆಚ್ಚಾಗಿರುತ್ತದೆ. ತಾನೊಂದೆ ಇರುವಾಗಲೂ ಮರಗಳ ಮಧ್ಯ ವಲ್ಲಿ ಸುಮ್ಮನಿರದ ಕೋತಿ ತನ್ನನ್ನು ಹಿಡಿಯಲೆಂದು ಸುತ್ತಲೂ ಜನ ಬಂದಾಗ ಲಂತೂ ಹಾರಿ ಹಾರಿ ಬೀಳುತ್ತದೆ. ಸ್ವಚ್ಛಂದವಾಗಿರುವ ಮನಸ್ಸನ್ನು ಏಕಾಗ್ರ ಗೊಳಿಸಲು ಯತ್ನಿಸಿದಾಗ ಅದೂ ಹಾಗೆ ವರ್ತಿಸುತ್ತದೆ. ಚಂದ ಮನಸ್ಸನ್ನು, ನೂರಾರು ಕೊಂಬೆಗಳ ನಡುವೆ ದಿಗ್ಭ್ರಾಂತವಾಗಿರುವ ಕೋತಿಯನ್ನು, ನಚ್ಚುವು ದಾದರೂ ಎಂತು?

"ಮರನನೇಱಿದ ಮರ್ಕಟನಂತೆ
ಹಲವು ಕೊಂಬಿಂಗೆ ಹಾಯುತಲಿಪೆ
ಚಂದ ಮನವ ನಾನೆಂತು ನಂಬುವೆನಯ್ಯಾ?
ಎಂತು ನಚ್ಚುವೆನಯ್ಯಾ?
ಎನ್ನಯ್ಯ ಕೂಡಲಸಂಗಮದೇವನಲ್ಲಿಗೆ ಹೋಗಲೀವಡುವಯ್ಯ
...ನಿಮ್ಮ ಚರಣಕಮಲದಲ್ಲಿ ಭ್ರಮರನಾಗಿರಿಸು ನಿಮ್ಮ ಧರ್ಮ!"

ಆಗ ಬೇಡಿಕೊಳ್ಳುತ್ತದೆ ಭಕ್ತಭ್ರಮರ: "ಸುತ್ತಿ ಸುತ್ತಿ ಸತ್ತೆ; ಆ ನಿನ್ನ ಚರಣಕಮಲದಲ್ಲಿ ನನ್ನನ್ನು ತುಂಬಿಮಾಡಿಕೊ" ಎಂದು. ಭ್ರಮಿಸುವುದೆ ಭ್ರಮರದ ಸ್ವಭಾವ: ನೆಗೆಯುವುದೆ ಕೋತಿಯ ಗುಣ. ಕೊನೆಯಿಲ್ಲ ಇದಕ್ಕೆ. ಆದರೆ ಶಿವಚರಣಕಮಲ ಆ ಭ್ರಮಣೆಗೆ ಪೂರ್ಣವಿರಾಮವಾಗುತ್ತದೆ.

ನೆಗೆದಾಡುತ್ತಲೆ ಇರುವ ಈ ಕೋತಿಯನ್ನು ಸೆರೆಹಿಡಿಯುವುದಾದರೂ ಸಾಧ್ಯವೆ ? ಅದಕ್ಕೆ ಸಂಯಮಮರ್ಯಾದೆಗಳನ್ನು ಕಲಿಸಲಾದರೂ ಬರುವುದೆ ? ಎಷ್ಟು ಕೊಂಬೆಗಳುಂಟೊ ಅಷ್ಟೂ ಕೊಂಬೆಗೆ ನೆಗೆದು ಜಿಗಿದು ಕಾಯಿ ಹೂವುಗಳನ್ನೆಲ್ಲ ಉದುರಿಸಿ ತೋಟಗಾರನಿಗೆ ನಷ್ಟಮಾಡುವುದೆ ಅದರ ಕೆಲಸ. ತಿನ್ನುವುದಕ್ಕಿಂತ ಲೂಟಿ ಮಾಡುವುದೆ ಹೆಚ್ಚು. ಹೇಗಾದರು ಆಗಲಿ. ಅದಕ್ಕೆ ಬುದ್ಧಿ ಬರುವುದು ಹೇಗೆ ? ಅದರ ಸ್ವಭಾವವನ್ನೆ ನಾಶಮಾಡುವುದಾಗಲಿ ಪರಿವರ್ತಿಸುವುದಾಗಲಿ ಸಾಧ್ಯವಿಲ್ಲದ ಕೆಲಸ. ಅದು ಹಾರಲಿ, ಬೇಡವೆನ್ನುವುದಿಲ್ಲ. ಈ ಮುಳ್ಳುಗೆಂಟೆಗಳಿಗೆಲ್ಲ ಹಾರಿ ಮೈ ಪರಿಚಿಕೊಳ್ಳುವುದಕ್ಕಿಂತ ಆ ಶಿವಮಹಾ ಶಾಶ್ವತ ಕಲ್ಪವೃಕ್ಷಕ್ಕೆ ಲಂಘಿಸಲಿ. ಅಲ್ಲಿ ಅದು ಬೇಕಾದುದೆಲ್ಲವನ್ನೂ ಲಂಘಿಸದೆಯೆ ಪಡೆಯಬಹುದಲ್ಲ ; ಕುಳಿತಲ್ಲಿಯೆ ಬಯಸಿದುದನ್ನು ಪಡೆಯಬಹುದಲ್ಲ.

"ಎನ್ನ ಮನವೆಂಬ ಮರ್ಕಟನು ತನುವಿಕಾರವೆಂಬ ಅಲ್ಪಸುಖದಾಸೆಗಾಗಿ
ವೃಥಾಭ್ರಮಣಗೊಂಡು, ನಾನಾ ದೆಸೆಗೆ ಲಂಘಿಸಿ,
ಅಳಲಿಸಿ ಬಳಲುತ್ತಿದೆ ನೋಡಾ !
ಕೂಡಲ ಸಂಗಮ ದೇವರೆಂಬ ವೃಕ್ಷಕ್ಕೆ ಲಂಘಿಸಿ
ಅಪರಿಮಿತ ಸುಖವನ್ನೈದದು ನೋಡಾ !"

ಇಲ್ಲಿ ಹಾರಿ ಅಲ್ಲಿ ಹಾರಿ ದಾರಿತಪ್ಪಿದ ಕಪಿ ಆ ಮರಕ್ಕೆ ಹಾರಿದರೆ ಮತ್ತೆಲ್ಲೂ ದಾರಿತಪ್ಪಬೇಕಾಗಿಲ್ಲ. ಆ ಮಹಾಸಾಗರದಲ್ಲಿ ದುಡುಕಿದ ನದಿ ಮತ್ತಾವ ಕಾಡುಮೇಡುಗಳಲ್ಲೂ, ಮರುಳುಗಾಡುಗಳಲ್ಲೂ ದಾರಿತಪ್ಪಬೇಕಾಗಿಲ್ಲ. ಶಿವಪಾದ ಕಮಲಕ್ಕೆರಗಿದ ಭ್ರಮರ ಮತ್ತಾವ ಹೂತೋಟದಲ್ಲೂ ಅಲೆಯಬೇಕಿಲ್ಲ, ಯಾವ ಹೇಸಿಗೆಯ ಯಾವ ಡ್ಯಾಸಿರದ ಭೀತಿಯೂ ಇಲ್ಲದಿರಬಹುದು. ಆದರೆ ಆ ಕಡಲೆಲ್ಲಿದೆ ? ಆ ಶಿವಕಲ್ಪತರುವೆಲ್ಲಿದೆ ? ಶಿವಪಾದಪದ್ಮವಾದರೂ ಎಲ್ಲಿದೆ ? ಅಲೆದಲೆದೆ ತಿಳಿದುಕೊಳ್ಳಬೇಕೇನು ಅದರ ನೆಲೆಯನ್ನು ? ಅಲೆಯುತ್ತ ಅಲೆಯುತ್ತ ಆಯಾಸವಾಗುವುದೊಂದೆ ಫಲವೇನು ? ಈ ಸಣ್ಣ ಸಣ್ಣ ಮರಗಳಲ್ಲೆ ಹಾರಿ ಚೀರಿ ಕಾಲಕಳೆದು ಶಕ್ತಿಗುಂದಿದ ಕೋತಿ ಆ ಅದೃಶ್ಯ ಸುದೂರ ಅಲೋಕ ವೃಕ್ಷವನ್ನು ಕಾಣುವುದಾದರೂ ಎಂದು ? ಕಂಡರೂ ಆ ದೂರಕ್ಕೆ, ಆ ಎತ್ತರಕ್ಕೆ ಹಾರುವುದಾದರೂ ಎಂತು ? ಮರ ಮರಗಳಲ್ಲಿ ಕಮಂಗಿ ಆಟ ಆಡಿದ ಕಪಿಗಳು ಸಾಗರ ತಟೆಯಲ್ಲೆ ಹಾರಿ ಮುಗ್ಗರಿಸಿದವು ; ಎಂದೂ ಮೌನಿಯಾಗಿಯೆ ಇದ್ದ ಹನುಮಂತ ಆ ಸಾಗರದಾಚೆಯ ಸೀತಾಸನ್ನಿಧಿಗೆ ಲಂಘಿಸಿ ಹಿಂತಿರುಗಿ ಬಂದ.

ತನ್ನ ಕಪಿತ್ವ ಕಳೆದುಕೊಂಡು ಕಪೀಶ್ವರನಾದ ; ಅದರಿಂದ ತನ್ನ ಕುಲಕ್ಕೆಲ್ಲ ಗೌರವ ತಂದ. ಆದರೆ ಶಿವವೃಕ್ಷ ಹನುಮಂತನಿಗೆ ಮಾತ್ರ ವೇದ್ಯ ಸಾಧ್ಯ ಏನು ?

ವಿಷಯಾಭಿಮುಖಿಯಾಗಿ ಅತ್ತಿತ್ತ ಅಲೆದಾಡುವ ಚಂಚಲ ಮನಸ್ಸನ್ನು ಬೇರೆ ಬೇರೆ ಪ್ರಾಣಿಚಿತ್ರಗಳಿಂದ ಚಿತ್ರಿಸುವುದನ್ನು ಕಾಣಬಹುದು.

"ಬೆಲ್ಲವ ತಿಂದ ಕೋಡಗನಂತೆ
ಸಿಹಿಯ ನೆನೆಯದಿರಾ, ಮನವೇ !
ಕಬ್ಬ ತಿಂದ ನರಿಯಂತೆ
ಹಿಂದಕ್ಕೆಳಸದಿರಾ, ಮನವೆ !
ಗಗನವಡರಿದ ಕಾಗೆಯಂತೆ
ದೆಸೆ ದೆಸೆಗೆ ಹಂಬಲಿಸದಿರಾ, ಮನವೆ !
ಕೂಡಲ ಸಂಗನ ಶರಣರ ಕಂಡು
ಲಿಂಗವೆಂದೇ ನಂಬು ಮನವೆ !"

ವಿಷಯ ರುಚಿಯನ್ನು ಸವಿದ ಮನಸ್ಸು ಅದರಿಂದ ವಿಮುಖವಾಗುವುದು ಸುಲಭವಲ್ಲ. ಮೊದಲೆ ಕೋತಿ, ಬೆಲ್ಲ ತಿಂದಮೇಲೆ ಕೇಳಬೇಕೆ ? ಮೊದಲೆ ನರಿ, ಕಬ್ಬು ತಿಂದಮೇಲೆ ಕೇಳಬೇಕೆ ? ಕಬ್ಬಿನ ಗದ್ದೆಯಲ್ಲಿ ಕೊಂತದ ಏಟುಬಿದ್ದರೂ ಚಿಂತೆಯಿಲ್ಲ. ರುಚಿಯನ್ನು ನೆನೆದೊಡನೆಯೆ ನೆಗೆದಾಡುತ್ತದೆ. ಸಾಧನೆಯ ದಾರಿಯಲ್ಲಿ ಮುಂದೆ ಹೋಗಿದ್ದರೂ ಭವರುಚಿಯು ನೆನಪು ಬಂದಾಗ ಭಕ್ತನ ಮನಸ್ಸು ತತ್ತರಿಸುತ್ತದೆ. ಈ ಅನುಭವವನ್ನು ಕೊನೆಯ ಚಿತ್ರ ಮತ್ತೂ ಸುಂದರವಾಗಿ ಚಿತ್ರಿಸುತ್ತದೆ....ಯಾವಾಗಲೂ ನೆಲದ ಮಟ್ಟದಲ್ಲೆ ಹಾರಿ ಸುಖಿಸುವ, ಹಾರಿದರೂ ನೆಲದ ಮೇಲೆ ಕಣ್ಣಿಟ್ಟಿರುವ ಕಾಗೆ ಮೇಲೆ ಮೇಲೆ ಏರಿದಾಗ ನೋಡಬೇಕು : ಹಾರಲಾರದು ; ಆದರೆ ಸುತ್ತಲೂ ಅತ್ತ ಇತ್ತ ಹೋಗಬೇಕೆಂದು ಹಂಬಲಿಸಿ ಗರಿ ಬಡಿದು ಶಕ್ತಿ ಉಡುಗಿಸಿಕೊಳ್ಳುತ್ತದೆ. ಅದರ ರೆಕ್ಕೆಯ ಶಕ್ತಿಗಿಂತ ಮೈಯೆ ಭಾರವಾಗಿ ನೆಲವೆ ಆಧಾರವಾಗುತ್ತದೆ. ನೆಲೆಯಿಲ್ಲದೆ ಹಾರುವ ಕೋತಿಯಂತೆ ಮಾತ್ರವಲ್ಲದೆ ಮೇಲೇರಿ ಎತ್ತ ಹಾರಲೂ ಶಕ್ತಿಯಿಲ್ಲದ ನೆಲೆಯರಿಯದ ಕಾಗೆಯಂತೆ ಸಾಧಕನ ಮನಸ್ಸು ಒಮ್ಮೊಮ್ಮೆ ಆಗುವುದುಂಟು. ಸಾಧನೆಯ ಪ್ರಾರಂಭಾವಸ್ಥೆಯಲ್ಲಿ ಯಾವುದನ್ನು ಎಷ್ಟು ಸ್ವೀಕರಿಸಬೇಕು, ತನ್ನ ಸ್ವಧರ್ಮವೇನು ಎಂಬುದನ್ನು ಅರಿತಿಲ್ಲದೆ ಮೇಲೇರಿ ಹಾರಲಾಗದೆ ತತ್ತರಿಸುವ ಸಾಧಕನ ಅವಸ್ಥೆಯನ್ನು ಅಷ್ಟೆ ಅಲ್ಲ, ಶರಣಧರ್ಮಕ್ಕೆ ದೀಕ್ಷೆಗೊಂಡೂ ಅದರೆತ್ತ

ರಕ್ಕೆ ಏರಲಾರದೆ ತೊಳಲುತ್ತಿದ್ದ ಶೂದ್ರವರ್ಗವನ್ನೂ ಈ ಕಾಗೆಯ ಚಿತ್ರ ಬಹಳ ಸೊಗಸಾಗಿ ಚಿತ್ರಿಸುತ್ತದೆ. ಕೋಡಗದ ಚಿತ್ರ ಮತ್ತೊಂದೆಡೆ ಅತ್ಯಂತ ಮಾರ್ಮಿಕವಾಗಿ ಬಂದಿದೆ.

ಭಗವಂತನನ್ನು ಕುರಿತು ಬಸವಣ್ಣನವರು ಸರಸವಾಗಿ ಗೇಲಿಮಾಡಿರುವುದು ಬಹಳ ವಿರಳ. ಈ ನಿಟ್ಟಿನಲ್ಲಿ ಹರಿದಾಸರು ಹೆಸರುವಾಸಿಯಾಗಿದ್ದಾರೆ. ಈ ಬಹು ಗಂಭೀರ ಸ್ವಭಾವದ ವ್ಯಕ್ತಿಯೂ ಒಂದೆರಡೆಡೆ ಶಿವನನ್ನು ಕೀಟಲೆಮಾಡಿರುವುದುಂಟು. ಅದೂ ಬಹು ಅರ್ಥಪೂರ್ಣವಾಗಿ ದರ್ಶನಸತ್ತ್ವಾಗಿಯೆ ಇದೆ.

"ಎಲ್ಲಿ ಹೊಕ್ಕಲ್ಲಿ ನಿನ್ನ ವಿಕಾರವ ಮಾಣೆ ; ಗರುವತನವೆ ?
ದಾಸನ ವಸ್ತ್ರವನುಡುವುದೊಂದು ಗರುವತನವೆ ?
ಸಿರಿಯಾಳನ ಮಗನ ಬೇಡುವುದೊಂದು ಗರುವತನವೆ ?
ಕೋಡಗನ ಹುಲ್ಲಲಿ ಮುಸುಕಿದಂತೆ, ಕೂಡಲಸಂಗಮದೇವ, ನಿಮ್ಮ ಪರಿ !"

ಶಿವ ತನ್ನ ಭಕ್ತರನ್ನು ಪರೀಕ್ಷಿಸಲು ನಾನಾ ರೂಪದಿಂದ ಬಂದು ಎರೆಯುತ್ತಾನೆ, ಒರೆಯುತ್ತಾನೆ, ಅರೆಯುತ್ತಾನೆ ; ಸತ್ತ್ವ ಕಂಡರೆ ಕೈಯಿಡಿದೆತ್ತಿಕೊಳ್ಳುತ್ತಾನೆ. ಇದನ್ನೆ ಬಸವಣ್ಣನವರು ಗೇಲಿ ಮಾಡುತ್ತಾರೆ. ಈ ದೇವರು ಹೇಗೆ ಹೇಗೊ ವೇಷ ಮರೆಸಿಕೊಂಡು ಬರುತ್ತಾನೆ ; ಬೇಡಿ ಕಾಡುತ್ತಾನೆ ; ಕಡೆಗೆ ತಾನೆ ತನ್ನ ಪರೀಕ್ಷೆಯಲ್ಲಿ ಸೋಲುತ್ತಾನೆ; ತನ್ನ ಭಕ್ತರ ಮುಂದೆ. ದಾಸನ ವಸ್ತ್ರ ಬೇಡಲು ಬಂದು ಹಾಗಾಯಿತು, ಸಿರಿಯಾಳನ ಮಗನನ್ನು ಬೇಡಿದಂದು ಹೀಗಾಯಿತು. ಆ ಭಕ್ತರ ಸತ್ತ್ವ ನೋಡಿ ಅವನ ಛದ್ಮವೇಷ ತಾನಾಗಿಯೆ ಕಳಚಿಹೋಗುತ್ತದೆ. ಶಿವನೂ ತನ್ನ ವಿರಾಟ್ ಸತ್ತ್ವವನ್ನು ಭಕ್ತರ ಮುಂದೆ ಬಹಳ ಹೊತ್ತು ಮುಚ್ಚಿಕ್ಕಿರಲಾರ. ಇದಕ್ಕೆ ಬಸವಣ್ಣನವರು ಕೊಡುವ ಉಪಮೆ ಬಹು ಮನೋಜ್ಞ. ಹುಲ್ಲಿನಲ್ಲಿ ಮುಚ್ಚಿದ ಕೋಡಗ! ಒಳಗೆ ಕೋತಿಯನ್ನು ಇಟ್ಟು ಮೇಲೆ ಹೊರೆಗಟ್ಟಲೆ ಹುಲ್ಲು ಮುಚ್ಚಿ ಅದನ್ನು ಗುಟ್ಟಾಗಿಡಿ, ತಿಳಿಯುತ್ತದೆ. ಒಂದು ಕ್ಷಣವಷ್ಟೆ ಆ ಕೋತಿ ಸುಮ್ಮನಿದ್ದೀತು. ತತ್ಕ್ಷಣವೆ ಆ ಹುಲ್ಲೆಲ್ಲವನ್ನೂ ಬಗಿದು ಹೊರಕ್ಕೆ ಬರುತ್ತದೆ, ಹಲ್ಲು ಗಿರಿಯುತ್ತ. ಭಕ್ತರನ್ನು ವೇಷ ಮರೆಸಿಕೊಂಡು ಬಂದು ಪರೀಕ್ಷಿಸುವ ಶಿವ ಹೀಗೆ. ಇಲ್ಲಿ ಬಂದಿರುವ ಸಾದೃಶ್ಯ ತಟಕ್ಕನೆ ಹೋಲುವಂತೆ ತೋರದಿದ್ದರೂ ಇದರ ಉದ್ದೇಶವನ್ನು ತಿಳಿದರೆ ಈ

ಚಿತ್ರ ಅತ್ಯಂತ ರಮ್ಯವಾಗಿ ತೋರೀತು.*

ಶಿವಶರಣತ್ವವನ್ನು ಸ್ವೀಕರಿಸಿದ ಸಾಧಾರಣರು ಲಿಂಗಧಾರಣೆ ಮಾಡಿದರೇ ವಿನಾ ತಮ್ಮನ್ನು ಸ್ವರೂಪತಃ ಪರಿವರ್ತಿಸಿಕೊಳ್ಳಲಿಲ್ಲ. ಬಸವಣ್ಣನವರು ಲಿಂಗದ ಮಹಿಮೆಯನ್ನು ಹೇಳುವಾಗ ಮೊದಮೊದಲು, ಅದನ್ನು ಧರಿಸಿದವನು ಮಾಂಸ ಮದ್ಯಗಳನ್ನು ತಿನ್ನುತ್ತ, ಕುಡಿಯುತ್ತ, ಕೈಯಲ್ಲಿ ಕತ್ತಿ ಹಿಡಿದುಕೊಂಡು ಬಂದರೂ ಅಂತಹವನನ್ನು ಶಿವನೆನ್ನುತ್ತೇನೆ ಎನ್ನುವ ಅತಿಔದಾರ್ಯ ತೋರುತ್ತಾರೆ. ಕಾಲಕ್ರಮೇಣದಲ್ಲಿ ಅವರ ಸಾಧನೆ ಮುಂದುವರೆದಂತೆ, ಲೋಕಾನುಭವ ಅಧಿಕವಾದಂತೆ, ಅಲ್ಲಮಪ್ರಭುವಿನ ದರ್ಶನವಾದ ಮೇಲೆ ತಮ್ಮ ಮೊದಲ ಭಾವಾತಿರೇಕವನ್ನು ತಿದ್ದಿಕೊಳ್ಳಬೇಕಾಗುತ್ತದೆ. ಆಗ ಲಿಂಗಮಹಿಮೆಯ ಜತೆಗೆ ಆ ಮಹತ್ತನ್ನು ಧಾರಣಮಾಡಲು ಲಿಂಗಧಾರಿಗೆ ಅಂತಸ್ಸತ್ವವೂ ಅತ್ಯಗತ್ಯವೆಂದು ಅರಿತುಕೊಳ್ಳುತ್ತಾರೆ.† ಆದರೆ ಲಿಂಗದ ಮಹಿಮೆಯ ವಿಚಾರವಾಗಿ

---

* ತಪಸ್ವಿನೀ ಶಿವೆಯನ್ನು ಪರೀಕ್ಷಿಸ ಬಂದ ವಟುವೇಷದ ಶಿವ ಹೇಗೆ ತನ್ನ ಅನಂತರೂಪನ್ನು, ಸತ್ಯವನ್ನು ಆಕೆಯ ಮಧುರ ತಪೋದೃಷ್ಟಿಯ ಮುಂದೆ ಮುಚ್ಚಿಡಲು ಕಷ್ಟವಾಯಿತು ಎಂಬುದನ್ನು ಗಿರಿಜಾ ಕಲ್ಯಾಣದಲ್ಲಿ ಹರಿಹರ ಬಹು ಸೊಗಸಾಗಿ ಚಿತ್ರಿಸಿದ್ದಾನೆ :

"ಗಿರಿಸುತೆಯ ಮಧುರ ದೃಷ್ಟಿಗ
ಳುರವಣೆಯಿಂ ತಾಗೆ ತನ್ನನಾಗಳ್ ವಿಪ್ರಂ
ಕರಗಿ ನಿಲಲಾರದೆದ್ದಾ
ತುರ ಪುಳಕಮನಂತುಮಿಂತು ಸಂತವಿಡುತ್ತುಂ
ನೆಗೆವ ಜಡೆ ಮುಡಿಯನೊತ್ತು
ತ್ತೊಗೆವ ಭುಜಾಳಿಯನಡಂಗಿಸುತ್ತೊತ್ತುರುಗಳಿಂ

ಮಿಗುವ ವೃಷೇಂದ್ರನನಾಂಕು
ತ್ತಗಲದೆ ನಿಜ ಮೂರ್ತಿಯೊಳಗೆ ಗಜಬಜಿಸುತ್ತುಂ
ಎಂತಾನಂ ನಿಜರೂಪಂ
ಸಂತವಿಡುತ್ತಾ"....ಆಶ್ವಾಸ—ಪದ್ಯ : ೯೭.೯೮.೯೯.

† ಬಸವಣ್ಣನವರ ಸಾಧನೆಯು ಯಾವ ದಾರಿಯಲ್ಲಿ ಹರಿದುಕೊಂಡು ಬಂದಿತೆಂಬುದನ್ನು ಬೇರೊಂದೆಡೆಯಲ್ಲಿ ಸವಿಸ್ತಾರವಾಗಿ ಚಿತ್ರಿಸಲಾಗುತ್ತದೆ. ಅಲ್ಲಿ ಈ ಅಂಶಗಳನ್ನು ಸ್ಪಷ್ಟಪಡಿಸಲಾಗುತ್ತದೆ.

ಅವರಿಗೆ ಸಂಶಯವಿಲ್ಲ ; ತಪ್ಪೇನಿದ್ದರೂ ಧರಿಸಿದವನದೆ ಎಂಬ ಭಾವನೆಯನ್ನು ಮೇಲಿನ ವಚನದಲ್ಲಿ ಬಹು ಮಾರ್ಮಿಕವಾಗಿ ವ್ಯಕ್ತಗೊಳಿಸಿದ್ದಾರೆ. ಲಿಂಗಧಾರಿ ಯಾವ ಮಾತ್ರದಿಂದಲೆ ಹಿಂದೆ ಮಾಡುತ್ತಿದ್ದ ಎಲ್ಲವನ್ನೂ ಮಾಡಬಹುದು ಎಂದು ಹಲವರು ಭ್ರಮಿಸಿದ್ದರು. ಲಿಂಗದ ಮಹಿಮೆ ಅವರನ್ನು ಸ್ವಲ್ಪವೂ ಪರಿ

"ಕಬ್ಬುನದ ಕೋಡಗವ ಪರುಷ ಮುಟ್ಟಲು
ಹೊನ್ನಾದರೇನು, ಮತ್ತೇನಾದರೇನು ?
ತನ್ನ ಮುನ್ನಿನ ರೂಪ ಬಿಡದನ್ನಕ್ಕ ?
ಕೂಡಲ ಸಂಗಮದೇವಾ ನಿಮ್ಮ ನಂಬಿಯೂ ನಂಬದ ಡಂಬಕರಿಗಯ್ಯ"

ವರ್ತಿಸಲಿಲ್ಲವೆಂದಲ್ಲ. ಆದರೆ ಅವರು ಅವಕ್ಕೆ ತಕ್ಕನಾಗಿ ಪರಣಾಮಗೊಳ್ಳಲಿಲ್ಲ. ಕಬ್ಬುನದ ಕೋಡಗ ಪರುಷಸ್ಪರ್ಶದಿಂದ ಚಿನ್ನದ ಕೋಡಗವಾಯಿತಷ್ಟೆ. ಸ್ವರೂಪ ಪರಿವರ್ತನವಾಯಿತು. ಇದೇನೋ ಮುಖ್ಯವೇ ಸರಿ. ಆದರೆ ರೂಪ ಪರಿವರ್ತನವೂ ಆಗಲೇಬೇಕು. ಹಾಗೆ ಆಗದೆ ಬರಿದೆ ಚಿನ್ನವಾದ್ದರಿಂದ ಅದು ಬೆಲೆಯುಳ್ಳದಾಯಿತೆ ವಿನಾ ಪೂಜ್ಯವಾಗಲಿಲ್ಲ. ವ್ಯಾಪಾರಿಗೆ ವಸ್ತುವಾಯಿತೆ ವಿನಾ ಭಕ್ತ ಪೂಜಾರ್ಹವಾಗಲಿಲ್ಲ. ಈ ವಚನಚಿತ್ರ ಭಾವಗೌರವ ದೃಷ್ಟಿಯಿಂದ ತುಂಬಾ ಶ್ರೇಷ್ಠವಾದುದು.

ಶಿವದೀಕ್ಷೆ ಪಡೆದವನು ಅದಕ್ಕೆ ಯೋಗ್ಯನಾಗುವಂತಿರಬೇಕು. ತನ್ನ ಹಿಂದಿನ ದುರಾಚಾರ ವ್ಯವಹಾರಗಳನ್ನು ಬಿಡಬೇಕು. ಬಿಡದಿದ್ದರೆ ? ಲಿಂಗವಂತನೇನೊ ಆದ ; ಆದರೇನು. ಮೇಲಿನ ರೂಪಕದಿಂದಲೂ ಪರಿಣಾಮವಾಗದಿದ್ದಾಗ ರೂಕ್ಷ ವಾದ ವಾಚ್ಯಕಲೆ ನೆರವಾಗುತ್ತದೆ:

"ಕತ್ತೆ ಭಕ್ತನಾದರೆ ಕಿಸುಕುಳವ ತಿಂಬುದ ಮಾಣ್ಬುದೆ ?
ಬೆಕ್ಕು ಭಕ್ತನಾದರೆ ಇಲಿಯ ತಿಂಬುದ ಮಾಣ್ಬುದೆ ?
ಹಂದಿ ಭಕ್ತನಾದರೆ ಹಡಿಕೆಯ ತಿಂಬುದ ಮಾಣ್ಬುದೆ ?
ಶುನಕ ಭಕ್ತನಾದರೆ ಮೂಳೆಮಾಂಸವ ತಿಂಬುದ ಮಾಣ್ಬುದೆ ?
ಕೋಳಿಯ ತಂದು ಹಂಜರವ ಕೂಡಿ ಅಮೃತಾನ್ನವನಿಕ್ಕಿ ಸಲಹಿದಡೆ
ಅದು ತಾನೆ ಮತ್ತೆ ತಿಂಬ ಹಡಕಿಂಗೆ ಚಿತ್ತವನಿಕ್ಕುವುದ ಮಾಣ್ಬುದೆ ?
ಆ ಕತ್ತೆ ಬೆಕ್ಕು ಸೂಕರ ಕೋಳಿಗಿಂದತತ್ತ ಕಡೆ...."

ಎಂದು ಶಸ್ತ್ರ ಚಿಕಿತ್ಸೆಯನ್ನು ಆರಂಭಿಸುತ್ತಾರೆ. ಮೇಲಿನ ವಚನದಲ್ಲಿ ಸ್ವಭಾವ ಪರಿವರ್ತನವಾಗಬೇಕೆಂಬುದನ್ನೂ ಇದರಲ್ಲಿ ಅದು ಎಷ್ಟು ದುರತಿಕ್ರಮವಾದದು ಎಂಬುದನ್ನೂ ಸೂಚಿಸಿದ್ದಾರೆ. ಇವರಿಂದ ಎಷ್ಟೋ ಭಕ್ತರು ಪ್ರತಿಭಟಿಸಿರ

ಬೇಕು, ನೊಂದಿರಬೇಕು. ತನ್ನೊಳಗಾದ ಈ ಭಾವಕ್ರಾಂತಿಯನ್ನು ಅಂದಿನ ಹಲವು ಸಾಧಾರಣ ಭಕ್ತರು ತಪ್ಪು ತಿಳಿದಿರಬೇಕು, ಕಂಡು ಅಸಮಾಧಾನ ಗೊಂಡಿರಬೇಕು. ಬಸವಣ್ಣನವರಿಗೆ ಕಷ್ಟವಾಗಿದೆ ಆಗ. ತಪ್ಪನ್ನು ಕಂಡೂ ತಿದ್ದದೆ ಹೋದರೆ ತಮಗೂ ಪಾಪ, ತಪ್ಪು ಮಾಡುವವರಿಗೂ ಕೇಡು. ಎಲ್ಲಕ್ಕಿಂತ ಹೆಚ್ಚಾಗಿ ಅನ್ಯಸಮಯಾಚಾರಿಗಳ ಕ್ರೂರ ಅವಹೇಳನಕ್ಕೆ ನೀರೆರೆದಂತಾಗುವು ದಲ್ಲ ಎಂಬ ದುಃಖ. ಆಗ ಅವರಿಗೆ ಉಭಯಸಂಕಟ.

"ತಂದೆ ಮಕ್ಕಳಿಗೆ ಬುದ್ಧಿಯ ಹೇಳುವಲ್ಲಿ
ತಪ್ಪಿಂಗೆ ಮುನಿವನಲ್ಲದೆ ಪ್ರಾಣಕ್ಕೆ ಮುನಿಯ
ಲಿಂಗವಂತ ಲಿಂಗವಂತರಿಗೆ ಬುದ್ಧಿಯ ಹೇಳುವಲ್ಲಿ
ಅವಗುಣಕ್ಕೆ ಮುನಿವನಲ್ಲದೆ ಲಾಂಛನಕ್ಕೆ ಮುನಿಯ
ಲಿಂಗಭಕ್ತನು ಲಿಂಗಪಥವ ಹೇಳಿದರೆ
ಮಚ್ಚರಿಸುವರ ಮೆಚ್ಚ ಕೂಡಲ ಸಂಗಮದೇವ."

ಎಂಬ ಸಮಾಧಾನದ 'ಅನೆಸ್ತೆಸಿಯ'ವನ್ನು ಕೊಟ್ಟು ಮತ್ತೆ ತಮ್ಮ ನೂತನ ಶಸ್ತ್ರ ಚಿಕಿತ್ಸೆಯನ್ನು ಪ್ರಾರಂಭಿಸುತ್ತಾರೆ.

"ಮರ್ಕಟನ ಕೈಯಲ್ಲಿ ಮಾಣಿಕವಿರ್ದು ಫಲವೇನು ?
ನಮ್ಮ ಕೂಡಲ ಸಂಗನ ಶರಣರನಱಿಯದನ ಕೈಯಲ್ಲಿ
ಲಿಂಗವಿರ್ದು ಫಲವೇನು ಶಿವಪಥವನಱಿಯದನ್ನಕ್ಕ ?"

ಲಿಂಗವಿದ್ದರೂ ಭಕ್ತನಲ್ಲ. ಅದರ ಅರಿವು ಇಲ್ಲದಿದ್ದರೆ ಅವನ ಪರಿವರ್ತನೆ ಪೂರ್ಣ ವಾಗುವುದಿಲ್ಲ. ಅದು ದುರ್ಬಲನಿಗೆ ಮಾರಕವೂ ಆಗಬಹುದು.

"ಹುಲಿಯ ಹಾಲು ಹುಲಿಗಲ್ಲದೆ ಹೊಲದ ಹುಲ್ಲೆಗೆ ಉಣಿಸಬಾರದು
ಕಲಿಯ ಕಾಲ ತೊಡರು ಛಲದಾಳಿಗಲ್ಲದೆ ಇಕ್ಕಬಾರದು
ಅಳಿಮನದಾಸೆಯವರ ಮೂಗ ಹಲುದೋಱ ಕೊಯ್ವ ಕೂಡಲಸಂಗಮದೇವ."

ಬರಿದೆ ಸಾನ್ನಿಧ್ಯ ಮಹಿಮೆಯಿಂದಲೆ ಎಲ್ಲ ಉದ್ಧಾರವಾಗುವುದಿದ್ದರೆ ಈ ವೇಳೆಗೆ ಎಲ್ಲರೂ ಮುಕ್ತರಾಗುತ್ತಿದ್ದರಲ್ಲ. ಬರಿಯ ಅನುಕರಣದಿಂದಲಾದರೂ ದೊಡ್ಡವ ರಾಗುವುದಿದ್ದರೆ ಎಲ್ಲರೂ ದೊಡ್ಡವರಾಗುತ್ತಿದ್ದರಲ್ಲ :

"ಹೊನ್ನಹುಳುವ ಕಂಡು ನರಿ ತನ್ನ ಬಾಲವ
ಹುಣ್ಣುಮಾಡಿಕೊಂಡರೆ ಹೋಲಬಹುದೆ ?"

ಅನುಕರಣೆಯಾಗಲಿ, ಬರಿಯ ಹಾಡಾಗಲಿ ಜ್ಞಾನವಾಗಲಿ ಯಾವುದೂ ಕೊನೆ ಮುಟ್ಟಿಸದು. ಕಾರಣ :

"ಆಡಿದರೇನೊ, ಹಾಡಿದರೇನೊ, ಓದಿದರೇನೊ—
ತ್ರಿವಿಧ ದಾಸೋಹವನರಿಯದನ್ನಕ್ಕ ?
ಆಡದೆ ನವಿಲು ? ಹಾಡದೆ ತಂತಿ ? ಓದದೆ ಗಿಳಿ ?
ಭಕ್ತಿಯಿಲ್ಲದವರನೊಲ್ಲ ಕೂಡಲಸಂಗಮದೇವ"
"ಶ್ವಾನಜ್ಞಾನ ಗಜಜ್ಞಾನ ಕುಕ್ಕುಟಜ್ಞಾನವೆಂಬ
ಜ್ಞಾನತ್ರಯಂಗಳೇನಾದುವು ?
ಕೂಡಲಸಂಗಮದೇವಾ, ನಿಮ್ಮನರಿಯದ ಜ್ಞಾನವೆಲ್ಲ ಅಜ್ಞಾನ !"
"ಕೊಳನ ತಡಿಯಲ್ಲೊಂದು ಹೊಲಸು ಕುಳ್ಳಿರ್ದರೇನು
ಗಳಹಂಸೆಯಾಗಬಲ್ಲುದೆ ?"

ಕಾಗೆಯ ಚಿತ್ರ ಬಹು ಚೆನ್ನಾಗಿ ಹಿಂದೆ ಬಂದಿರುವುದನ್ನು ನೋಡಿದ್ದೇವೆ. ಮತ್ತೆ ಒಂದೆರಡು ನಿದರ್ಶನಗಳನ್ನು ನೋಡಬಹುದು. ಭಕ್ತನಿಗೆ ಬದುಕಿನಲ್ಲಿ ಇರುವ ಆಸೆಗೂ ಲೌಕಿಕನಿಗಿರುವ ಬಯಕೆಗೂ ವ್ಯತ್ಯಾಸವಿದೆ. ಲೌಕಿಕವಾಗಿ ದೊಡ್ಡವನಾಗಬೇಕು, ಮೆರೆಯಬೇಕು, ಹೊನ್ನಕಳಸವಾಗಬೇಕು ಎಂಬ ಆಸೆ ಲೌಕಿಕನದು. ಭಕ್ತನ ಬಯಕೆ ತಾನು ದೀನನಾಗಿ ಭಗವಂತನ ಭಕ್ತರ ಹಾವುಗೆಯಾಗಬೇಕು ಎಂದು. ಲೋಕಗೌರವ ಭಾಜನವಾಗುವ ಹೊನ್ನಕಳಸದಮೇಲೆ ಕಾಗೆ ವಿಷ್ಟಿಸುತ್ತದೆ. ಆದ್ದರಿಂದ ಅಂತಹ ಪದವಿಯಾದರೂ ಏಕೆ ? ಅದಕ್ಕಿಂತ ಭಕ್ತನ ಚರ್ಮ ಪಾದುಕೆಯಾದರೆ ಯಾವ ಮೆರವಣಿಗೆಯಿಲ್ಲದೆಯೆ ಪವಿತ್ರನಾಗಬಹುದು.

"ಕಾಗೆ ವಿಷ್ಟಿಸುವ ಹೊನ್ನ ಕಳಸವಹುದರಿಂದ
ಒಡೆಯರು ಜೋಗೈಸುವ ಚಮ್ಮಾವುಗೆಯ ಮಾಡಯ್ಯ
ಅಯ್ಯಾ ನಿಮ್ಮ ಶರಣರ ಪಾದಕ್ಕೆ ಚಮ್ಮಾವುಗೆಯ ಮಾಡಯ್ಯ"

ಭಕ್ತಿಹೀನರ ದಾಸೋಹವನ್ನು ಸದ್ಭಕ್ತರು ಸವಿಯುವುದಿಲ್ಲ. ಭವಿಗಳು ಅದನ್ನೆ ರುಚಿಸಬಹುದು. ಕಾರಣ : 'ಬೇವಿನ ಹಣ್ಣು ಕಾಗೆಗೆ ಇನಿದಲ್ಲದೆ ಕೋಗಿಲೆಗೆ ಮೆಲಬಾರದು !'

ಇದೇ ಕಾಗೆಯ ಚಿತ್ರ ಮತ್ತೊಂದೆಡೆ ಬೇರೊಂದು ಭಾವವನ್ನು ಚಿತ್ರಿಸಲು ಬರುತ್ತದೆ :

"ಕಾಗೆ ಒಂದಗುಳ ಕಂಡರೆ ಕರೆಯದೆ ತನ್ನ ಬಳಗವನು ?
ಕೋಳಿಯೊಂದು ಕುಟುಕ ಕಂಡರೆ ಕೂಗಿ ಕರೆಯದೆ ತನ್ನ ಕುಲವೆಲ್ಲವ ?
ಶಿವಭಕ್ತನಾಗಿ ಭಕ್ತಿಪಕ್ಷವಿಲ್ಲದಿದ್ದರೆ ಕಾಗೆ ಕೋಳಿಗಿಂತ ಕರಕಷ್ಟ !"

ಕಾಗೆ ಕೋಳಿಗಳ ಈ ಗುಣವನ್ನು ಮಾನವನೆ ಕಲಿಯಬೇಕಾದುದೆ ಸರಿ. ಪ್ರಾಣಿ ರೂಪಕದಲ್ಲಿ ನಾವು ಕಾಣುವುದು ಕೇವಲ ಮಾನವನ ಕ್ಷುದ್ರ ಗುಣಕ್ಕೆ ಸಂಕೇತ ವಾಗಿ ಬರುವ ಪ್ರಾಣಿ ಚಿತ್ರವನ್ನೆ ಅಲ್ಲ ಎಂಬುದಕ್ಕೆ ಈ ವಚನಚಿತ್ರವೆ ಸಾಕ್ಷಿ.

ತನ್ನೊಳಗನ್ನು ಅರಿಯಲಾರದ, ಕಂಡ ಕಂಡವರ ದೋಷಗಳನ್ನು ಎತ್ತಿ ಆಡುವ ಜನರನ್ನು ಕಂಡು ನುಡಿಯುವಾಗ ಗಿಳಿಯ ರೂಪಕವನ್ನು ಬಳಸುತ್ತಾರೆ

"ಗಿಳಿಯೋದಿ ಫಲವೇನು ?
ಬೆಕ್ಕು ಬಹುದ ಹೇಳಲರಿದು
ಜಗವೆಲ್ಲ ಕಾಂಬ ಕಣ್ಣು :
ತನ್ನ ಕೊಂಬ ಕೊಯಿಲೆಯ ಕಾಣಲರಿದು !
ಇದಿರ ಗುಣವ ಬಲ್ಲವೆಂಬರು !
ತಮ್ಮ ಗುಣವನರಿಯರು !

ಎಲ್ಲವನ್ನು ಓದುತ್ತದೆ ; ಆದರೇನು ? ತನ್ನನ್ನು ಕೊಲ್ಲುವ ಬೆಕ್ಕು ಯಾವಾಗ ಎಲ್ಲಿಂದ ಬಂದೀತೆಂಬುದನ್ನು ಅರಿಯದು. ತನ್ನ ಹಂಜರವನ್ನು ನಂಬಿ, ಆ ಹಂಜರ ದಿಟವೆಂದು ಬಲ್ಲಿತ್ತೆಂದು ಅಂಜದೆ ಓದುತ್ತದೆ. ತಾನೆಂದೂ ಅಳಿಯೆನೆಂದರೂ ಮನ ದೊಳಗಣ ಮಾಯಾ ಮಂಜರ ಕೊಲ್ಲುವುದಾದರೆ ಹಂಜರ ಕಾಯುವುದಾದರೂ ಎಂತು? ಬರಿದೆ ತನ್ನೊಳಗೆ ಗುಡಿಗಟ್ಟಿಕೊಂಡರೆ ಹೇಗೆ ? ವಸ್ತು ವಿಜ್ಞಾನವಿದ್ದು ಆತ್ಮ ವಿಜ್ಞಾನವಿಲ್ಲದವರನ್ನು ವಾಗಧ್ಯಾತ್ಮಿಗಳನ್ನು ಈ ಮಾತಿಗಿಂತಲೂ ಬೇರೆ ಶಕ್ತಿಯುತವಾಗಿ ಚಿತ್ರಿಸುವುದು ಸುಲಭವಲ್ಲ.

"ಹಂಜರ ಬಲ್ಲಿತ್ತೆಂದು ಅಂಜದೆ ಓದುವ ಗಿಳಿಯೇ !
ಎಂದೆಂದೂ ಅಳಿಯೆನೆಂದು ಗುಡಿಗಟ್ಟಿದೆಯಲ್ಲಾ !
ನಿನ್ನ ಮನದಲ್ಲಿ ಮಾಯಾಮಂಜರ ಕೊಲ್ಲುವರೆ
ನಿನ್ನ ಹಂಜರ ಕಾವುದೆ ?"

ಮೊದಲು ಬಂದ ಗಿಳಿಯ ರೂಪಕಕ್ಕಿಂತ ಇದು ಹೆಚ್ಚು ಆಂತರಿಕ, ಅವಿ ಭಾಜ್ಯ. ಆದರೆ ಇದೇ ಗಿಳಿಯನ್ನು, ಪಂಜರವನ್ನು ಬೇರೊಂದೆಡೆ ಭಿನ್ನವಾದ ಅನುಭವವೊಂದರ ವರ್ಣನೆಗೆ ಬಳಸಿದ್ದಾರೆ :

"ಸರವಿಂಥ್ಯದೊಳಗೆನ್ನ ಹುಲುಗಿಳಿಯ ಮಾಡಿ
ಸಲಹುತ್ತ "ಶಿವಶಿವಾ" ಎಂದೋದಿಸಯ್ಯಾ !
ಭಕ್ತಿಯೆಂಬ ಪಂಜರದೊಳಗಿಕ್ಕಿ ಸಲಹು
ಕೂಡಲಸಂಗಮದೇವಾ !"

ಸಂಸಾರವನವಿಂಧ್ಯದಲ್ಲಿ, ಸಹಸ್ರಾರು ಕ್ರೂರ ಮೃಗಗಳ ನಡುವೆ ಸಿಲುಕಿದ ಮುಗ್ಧ ಶುಕಮನವನ್ನು ತನ್ನನ್ನು ಅವುಗಳಿಂದ ಪಾರುಮಾಡಿ ಪಂಜರದಲ್ಲಿ—ಭಕ್ತಿ ಪಂಜರದಲ್ಲಿ—ರಕ್ಷಿಸಬೇಕೆಂದು ಭಗವಂತನನ್ನು ಬೇಡುತ್ತದೆ. ಪಂಜರವೆ ಮಂಜರ ವಾಗಬಹುದಲ್ಲ !* ಅದಕ್ಕೆ ಅದು ಭಕ್ತಿಯ ಪಂಜರವಾಗಬೇಕು. ಮಾಯಾ ಮಂಜರ—ತನ್ನೊಳಗಿನ ಅವಿದ್ಯಾಮಂಜರ—ಕೊಲ್ಲುವುದಾದರೆ ಪಂಜರವೇನು ಮಾಡೀತು ? ಆದ್ದರಿಂದ ಅದಕ್ಕೆ ಕಲಿಸುವುದು ಶಿವಮಂತ್ರವನ್ನು, ಮಾಯಾ ಹರ ಮಂತ್ರವನ್ನು ! ಹೀಗಿರುವಾಗ, ಭಕ್ತಿಯೆ ಪಂಜರವಾಗಿರುವಾಗ ವನವಿಂಧ್ಯ ದಲ್ಲೂ ಯಾವ ಮರಣಭೀತಿಯೂ ಇಲ್ಲದಿರಬಹುದು. ಹೀಗೆ ಇಲ್ಲಿಯ ರೂಪ ಕವೇ ಬೇರೆ, ಅನುಭವವೇ ಬೇರೆ, ಹಾಗೆಯೆ ಶಕ್ತಿಯೂ ಬೇರೆ.

ಪಕ್ಷಿಗಳಲ್ಲಿ ಗಿಳಿ ಒಂದು ಬಗೆಯ ರೂಪಕವಾದರೆ ಗುಬ್ಬಚ್ಚಿ, ಆ ಪುಟ್ಟ ಸಂಸಾರಿ, ಒಂದು ಬಗೆಯ ರೂಪಕವಾಗುತ್ತದೆ. ನಾವು ಇಷ್ಟೆಲ್ಲ ಸಂಸಾರ ಮೋಹವನ್ನು ಬೆಳಸಿಕೊಂಡಿರುವೆವಲ್ಲ ಏನು ಕಾರಣವಾಗಿ ? ಅವರು ನನ್ನವರು ಇವರು ನನ್ನವರು, ಅದು ನನ್ನದು ಎಂದೆಲ್ಲ ಭಾವಗಳನ್ನು ಬೆಳೆಸಿಕೊಂಡು ಬಂದಿರುವೆವಲ್ಲ ಯಾವ ಸುರಕ್ಷಿತ ಭಾವದಿಂದ ? ಯಾರು ಯಾರಲ್ಲೊ ನಮ್ಮ ಭಾವಗಳ ಮನೆಕಟ್ಟಿಕೊಳ್ಳುವ ನಾವು ಎಂಥವರು ? ಬೇರೆಯವರಾದರೂ

---

* ಪಂಜರವೆ ಮೃತ್ಯುಬಂಧನವಾದೀತೆಂಬ ದಿವ್ಯಾನುಭವ ಅನುಭವ ಮಾತ್ರ ವೇದ್ಯ. ನಾವು ನಮ್ಮ ಚೇತನದ ರಕ್ಷೆಗಾಗಿ ಕಟ್ಟಿಕೊಳ್ಳುವ ರಕ್ಷಾಮಂತ್ರಗಳಾದ ಪ್ರಾರ್ಥನೆ, ಧ್ಯಾನ, ಸತ್ಕೃತಿ ಪಠಣ ಎಲ್ಲವೂ ಎಚ್ಚರ ತಪ್ಪಿದರೆ ಬರಿಯ ತೋರಿಕೆಯ ತಾಯಿತಗಳಾಗಿ ದುಷ್ಟಶಕ್ತಿಗಳ ಪ್ರವೇಶಕ್ಕೆ ಹಾಗೂ ಪೋಷಣೆಗೆ ಸಾಧನಗಳಾದಾವು. ಕಳ್ಳರ ಭೀತಿಯಿಂದ ರಾತ್ರಿಯ ಕಾವಲಿನವರನ್ನು ನೇಮಿಸಿ ನಿರ್ಭೀತನಾಗಿ ನಿದ್ರೆ ಹೋಗುವ ಶ್ರೀಮಂತ ತನ್ನನ್ನು ಹೆಚ್ಚು ಅಸ್ವತಂತ್ರನನ್ನಾಗಿ ಅರಕ್ಷಿತನನ್ನಾಗಿ ಮಾಡಿ ಕೊಂಡಿರುತ್ತಾನೆ. ಕಾವಲುಗಾರರ ವೇಷದಲ್ಲೆ ಕಳ್ಳರು ಬರಬಹುದು, ಕಾವಲು ಭಟರೆ ಕಳ್ಳರಾದರೂ ಆಗಬಹುದು. ಆತ್ಮವಲಯದಲ್ಲಿ ಎಂತಹ ಪ್ರಮಾದವೂ ಮಾರಕ ವಾದೀತು. ಆದಕ್ಕೋಸ್ಕರವೆ ಬುದ್ಧ ಭಗವಾನ್ ಹೇಳಿದುದು, ಅಪ್ರಮಾದವಶಿಯಾ ಗಿರು ಎಂದು. ಈ ಸಾಧನೆ ಜ್ಞಾನಯೋಗಿಗೇನೊ ಸರಿ. ಆದರೆ ಭಕ್ತನಿಗೆ ಮಾತ್ರ ಕರಕಷ್ಟವಾಗುತ್ತದೆ. ವಿಧಿಯಿಲ್ಲ, ಬಿಡುವಂತಿಲ್ಲ. ಭಗವಂತನನ್ನೇ ಬೇಡಿಕೊಳ್ಳುವುದು, ನೀನೆ ರಕ್ಷಾಮಂತ್ರವನ್ನು ನೀಡು, ನಿನ್ನ ಕಾರುಣ್ಯ ಭಿಕ್ಷೆಯನ್ನು ನೀಡು ಎಂದು. ಆಗ ಭಕ್ತಿಪಂಜರ ರಕ್ಷಾ-ಬಂಧನದೊಳಗಿರುವ ಶುಕಾತ್ಮನಿಗೆ ಶಿವ ಮಂತ್ರರಕ್ಷೆ ಬರುತ್ತದೆ.

ಸಂಪೂರ್ಣ ಸ್ವತಂತ್ರರೆ ? ಅವರಿರುವುದೂ ಬಾಡಿಗೆಯ ಮನೆ; ಅಲ್ಲಿ ನಮ್ಮ ಮನೆಯನ್ನು ಮಾಡಿಕೊಳ್ಳುತ್ತೇವಲ್ಲ ! "ಯಾರಿಗೆ ಯಾರೂ ಇಲ್ಲ, ಕೆಟ್ಟವಂಗೆ ಕೆಳೆಯಿಲ್ಲ. ಜಗದ ನಂಟ ನೀನೆ," ಎಂಬ ಭಾವ ಮತ್ತೆ ಮತ್ತೆ ಬರುತ್ತಿದ್ದೂ ಬುದ್ಧಿ ಬಂದಿಲ್ಲ ?

"ಗುಬ್ಬಿ ಹೆಜಿವರ ಮನೆಯ ತನ್ನ ಮನೆಯೆಂಬಂತೆ
ಧರೆ ಧನ ವನಿತೆ ಎನ್ನವರು ತನ್ನವರೆಂದು
ಹೋರಿ ಹೋರಿ ಸಾವುತ್ತಿದೆ ಈ ಜೀವ
ಸರ್ವಕರ್ತ ಕೂಡಲ ಸಂಗಯ್ಯನೊಬ್ಬನೆ ಎಂದಱಿಯದೆ ಕೆಟ್ಟರು."

ಎಲ್ಲ ಹಕ್ಕಿಗಳೂ ಗಿಡಮರಗಳಲ್ಲಿ ತಮ್ಮ ಗೂಡು ಕಟ್ಟಿದರೆ ಈ ಗುಬ್ಬಚ್ಚಿಗಳು ಯಾರದೊ ಮನೆಯಲ್ಲಿ—ಅದು ಬಾಡಿಗೆಯಾಗಲಿ ಸ್ವಂತದ್ದಾಗಲಿ, ತಾನು ಮಾತ್ರ ಯಾವ ಬಾಡಿಗೆಯೂ ಕೊಡದೆ, ತನ್ನದೆಂಬ ದಿಮಾಕಿನಿಂದಲೆ, ಅಷ್ಟೆ ಏಕೆ ಮನೆಯವನನ್ನೂ ಗಮನಕ್ಕೆ ತೆಗೆದುಕೊಳ್ಳದೆಯೆ ಸಂಸಾರ ಮಾಡುತ್ತದೆಯಲ್ಲ. ಮನೆಯೊಳಗೆ ಚಿಲಿಪಿಲಿಗುಡುತ್ತಾ ಅದು ಹಾರಾಡುವ ಗತ್ತು ನೋಡಬೇಕು; ಅದರ ನಿರಾತಂಕ ಭಾವವನ್ನು ಗಮನಿಸಬೇಕು. ಆದರೆ ಯಾರಿಗೆ ಗೊತ್ತು ಯಾವಾಗ ಮನೆಯಾತ ಬೇಸರಗೊಂಡು ಅವುಗಳ ಗೂಡನ್ನೆಲ್ಲ, ಅವುಗಳ ಅರೆಕಾವುಗೊಂಡ ಮೊಟ್ಟೆಗಳನ್ನು, ಹೊಸ ಮರಿಗಳನ್ನು, ಹಸಿ ಮರಿಗಳನ್ನು—ಎಲ್ಲವನ್ನೂ ಕಿತ್ತು ಕೆಡವಿ ಅವುಗಳಿಗೆ ಅಪೂರ್ವ ಪ್ರಲಯಾನುಭವವನ್ನುಂಟುಮಾಡುತ್ತಾನೊ ? ಗುಬ್ಬಿಗಳಿಗೇನಾದರೂ ಅದು ಗೊತ್ತೆ? ಹಾಗಾಗುವುದನ್ನು ನೋಡಿಲ್ಲವೆ ? ತನ್ನ ಬಂಧುಗಳಿಗೆ ಬೇರೆಡೆಯಲ್ಲಿ ಹಿಂದೆ ಆದುದಾದರೂ ನೆನಪಿಲ್ಲವೆ ? ಅದೆಲ್ಲ ಗೊತ್ತಿದ್ದೂ ಧೈರ್ಯವೆ ? ಸಾಹಸವೆ ? ಮರವೆಯೆ ? ಅನಿವಾರ್ಯತೆಯೆ ? ಏನೊ, ಯಾರು ಬಲ್ಲರು ! ಈ ಗುಬ್ಬಿ ನಮ್ಮ ಕರುಣೆಗೆ ಪಾತ್ರವಾದಂತೆ ತೋರಿದರೆ ಮುಕ್ತಾತ್ಮರ ಕರುಣದೃಷ್ಟಿಗೆ ಸಂಸಾರಿಮಾನವ ಹಾಗೆ ತೋರಿಯಾನು.

ಕುರಿಯು ಎರಡು ಕಡೆ ಎರಡು ಭಾವಕ್ಕೆ ಪ್ರತೀಕವಾಗಿ ಬಂದಿದೆ.

"ಕುಱಿ ವಿಂಡು ಕಬ್ಬಿನ ಉಲಿವ ತೋಂಟವ ಹೊಕ್ಕು
ತೆಱನನಱಿಯದೆ ತನಿರಸದ ಹೊಱಗಣೆಲೆಯನೆ ಮೇದುವು !
ನಿಮ್ಮನಱಿವ ಮದಕರಿಯಲ್ಲದೆ ಕುಱಿ ಬಲ್ಲುದೆ !"

ಮೇಲಾಗಿ, ಶಿವಭಕ್ತಿಯ ಸುಖ ಕುರಿಯ ಚೇತನಕ್ಕೆ ಎಲ್ಲಿ ? ಖಾದ್ಯವಾಗ

ಬೇಕು ? ಅದಕ್ಕೆ ಹೊಟ್ಟೆಯು ಗುರಿಯೆ ಸಾಕು. ಮದಕರಿಜೀತನಕ್ಕೆ ಆ ಗುರಿ ಸಾಕೆ ? ಹಾಗೆಯೆ ಆನೆಯ ದಾರಿಯೆ ಬೇರೆ, ಆಡಿನ ದಾರಿಯೆ ಬೇರೆ. ಆನೆ ಹೋದೆಡೆ ದಾರಿಯಾಗುತ್ತದೆ. ಇದು ಹೋದೆಡೆ !....

"ಆನೆಯು ಆ ದಾರಿಯಲ್ಲಿ ಹೋಯಿತ್ತೆಂದಡೆ,
ಆಡೂ ಆ ದಾರಿಯಲ್ಲಿ ಹೋಯಿತ್ತೆನ್ನಬಹುದೆ ?
ಸಂಗನ ಶರಣರಿಗೆ ಆನು ಸರಿಯೆಂದು ಗಳಹಲುಬಹುದೆ ?"

ಕುರಿಯ ಸ್ವಭಾವ ಬೇರೆ, ಕರಿಯ ಸ್ವಭಾವ ಬೇರೆ. ಹಾಗೆ ಕರಿಯಂತೆ ಬೆಳೆದು ನಿಂತ 'ಸೂಕರಿ' ಕರಿಯಾಗುವುದಿಲ್ಲ. ಅದಕ್ಕೂ ದಂತವಿದೆ. ಆದರೂ ಅದು ಸೂಕರಿಯೆ !

"ಆ ಕರಿಯಾಕೃತಿಯು ಸೂಕರನ ಹೋಲಿಸಿದರೆ
ಆ ಕರಿಯಾಗಲಱುವುದೆ ?
ಭೂನಾಗನಾಕೃತಿಯನು ವ್ಯಾಳೇಶನ ಹೋಲಿಸಿದರೆ
ವ್ಯಾಳೇಶನಾಗಲಱುವುದೆ ?
ನಾನು ಭಕ್ತನಾದರೇನಯ್ಯ ? ನಮ್ಮ ಕೂಡಲಸಂಗಮದೇವನ
ಸದ್‌ಭಕ್ತರ ಹೋಲಲಱಿವನೆ ?"*

ನೆಲದ ಹಾವನ್ನೂ ಅನಂತನನ್ನೂ ಹೋಲಿಸಿದ ಮಾತ್ರದಿಂದಲೆ ಇದು ಅನಂತನಾದೀತೆ ? ತಾವು ಸಾದೃಶ್ಯಮಾತ್ರದಿಂದಲೆ ಹಿರಿಯ ಭಕ್ತರಂತಾಗಲು ಹೇಗೆ ಸಾಧ್ಯ ? ಮೇಲಿನ ಎರಡೂ ವಚನ ಚಿತ್ರಗಳಲ್ಲಿ ಬಸವಣ್ಣನವರು ತಮ್ಮ ಭಕ್ತಿಯನ್ನು ಕಟುವಾಗಿ ಹಳಿದುಕೊಂಡಿದ್ದಾರೆ. ತಮ್ಮನ್ನು ಮೆಚ್ಚಿ ಹೊಗಳಿದ ಭಕ್ತರಿಗೆ ಹೇಳುತ್ತಾರೆ : "ಹೊಗಳಿ ಹೊಗಳಿ ನನ್ನನ್ನು ಹೊನ್ನ ಶೂಲದಲ್ಲಿಡ ಬೇಡಿ. ನಾನು ಯಾವ ಮಹಾಭಕ್ತ ಎಂದು ಮೆಚ್ಚಿ ಹಾಡುತ್ತೀರಿ ? ಆ ಮಹಾತ್ಮರ ಕೂಡೆಲ್ಲ ನನ್ನನ್ನೇಕೆ ಹೋಲಿಸುತ್ತೀರಿ ? ಶಾಂತಂ ಪಾಪಂ ! ಅವರೆಲ್ಲಿ ನಾನೆಲ್ಲಿ ? ನಾನು ಬರಿಯ ನಾಮಧಾರಿಮಾತ್ರ ! ಭಕ್ತ ಎಂಬ ಹೆಸರಿದೆ ; ಅಷ್ಟೆ.

---

* ಈ ಎರಡು ಚಿತ್ರಗಳನ್ನೂ ಪಂಪಕವಿ ಎರಡು ಕಡೆ ಹಿಂದೆಯೆ ಬಳಸಿದ್ದ. ಅವನ್ನು ನೋಡಬಹುದು : "ಈ ಕರಿ ಸೂಕರಿಯತ್ತೆ ?" (ಭಗದತ್ತ ಪ್ರಸಂಗ xi 73) "ವಿಷಮೊಳ್ಳಿಗುಳ್ಳೊಡಮುಡೊಳ್ಳೆಯ ಕಾಳಿಯ ನಾಗನಾಗದು." ಈ ರೂಪಕಗಳು ವಿಡಂಬನಕ್ಕೆ (ಮೇಲೆ ಬಂದಿರುವುದು ಆತ್ಮವಿಡಂಬನಕ್ಕೆ ಇಲ್ಲಿ ಅನ್ಯವಿಡಂಬನಕ್ಕೆ) ದ್ಯೋತಕವಾಗಿ ಬಂದಿದ್ದರೂ ಎರಡರ ಪರಿಣಾಮ, ತೀವ್ರತೆ, ಸನ್ನಿವೇಶಗಳು ತೀರಾ ಬೇರೆ.

ಹೋಲಿಕೆ. ಸೂಕರಿ ಕರಿಯನ್ನ, ಕುರಿ ಕರಿಯನ್ನ ಹೋಲಿತು ಎಂದ ಹಾಗೆ, ಅಷ್ಟೆ! ಅವರು ನಡೆದರು, ನಡೆದೆಡೆ ದಾರಿಯಾಯಿತು. ಅವರು ನುಡಿದರು, ನುಡಿದದ್ದೆ ಅಮೃತವಾಯಿತು. ನಾನೂ ನಡೆದೆ, ನಾನೂ ನುಡಿದೆ ಎಂದೆಲ್ಲ ಏಕೆ ಅನ್ನುತ್ತೀರಿ? ಅವರು ನಡೆದು ಬಿಟ್ಟುಹೋದ ಹಜ್ಜೆ ಗುರುತೆ ನನಗೆ ಹೆದ್ದಾರಿ. ಅಲ್ಲಿ ನನ್ನ ಗುರುತಾವುದೂ ಇಲ್ಲದು. ಮರದಡಿಯ ನೆರಳಲ್ಲಿ ನಿಂತು ತನ್ನ ನೆರಳನ್ನು ಅರಸುವುದೇಕೆ? ನಾನೂ ಕೂಡ ತಪ್ಪಿದ್ದೇನೆ. ಹಾಲ ತೊರೆಯಂತೆ ಅವರ ಮಾತು ಹರಿದಿರಬೇಕಾದರೆ ನಾನು ನನ್ನ ವಚನದ ಬಾವಿ ತೋಡಿ ಉಪ್ಪು ನೀರುಂಡೆ. ಇನ್ನು ಸಾಕು, ನನ್ನನ್ನು ಹೊಗಳಿ ಹೊಗಳಿ ಕೊಲ್ಲಬೇಡಿ." ಎಂದು ಬಸವಣ್ಣನವರು ತಮ್ಮ ಭಕ್ತಿಯನ್ನು ಇಷ್ಟು ಕಠೋರವಾಗಿ ಇಲ್ಲಿ ಚಿತ್ರಿಸಿಕೊಂಡಿದ್ದಾರೆ. ಎಲ್ಲಿ ಸಿಗಬೇಕು ಈ ಆತ್ಮಸ್ಥೈರ್ಯ!

ತಮ್ಮ ಮನಸ್ಸಿನ ಕಲ್ಮಷವನ್ನು ಎಷ್ಟು ರೂಪಕಗಳಿಂದ ಕಂಡರಿಸಿ ಖಂಡಿಸಿಕೊಂಡಿದ್ದರೂ ಅಣ್ಣನವರಿಗೆ ತೃಪ್ತಿಯೆ ಇಲ್ಲ. ನಾನಾ ಪ್ರಾಣಿ ಭಾವಗಳನ್ನು ಆಯಾ ಪ್ರಾಣಿ ರೂಪಕಗಳಲ್ಲಿ ಚಿತ್ರಿಸಿಕೊಂಡಿದ್ದಾರೆ. ಕೆಲವೊಮ್ಮೆ ಒಂದೊಂದೆ ತನಿಯಾದ ಚಿತ್ರದಿಂದ, ಮಗುದೊಮ್ಮೆ ಅಖಂಡ ರೂಪಕದಿಂದ, ಹಲವೊಮ್ಮೆ ಸಂಕೀರ್ಣ ರೂಪಕಗಳಿಂದ ಹಾಗೆ ಪ್ರತಿಮಿಸುತ್ತಾರೆ. ಅಷ್ಟಾದರೂ ಅವರ ಹೃದಯ ಹಗುರಾಗದು. ಮುಂದಿನ ವಚನಗಳಲ್ಲಿ ರೂಪಕದ ಹಿಂಡನ್ನೆ ಕಾಣಬಹುದು:

"ಓತಿ ಬೇಲಿವರಿದಂತೆ ಎನ್ನ ಮನವಯ್ಯ
ಹೊತ್ತಿಗೊಂದು ಪರಿಯಪ್ಪ ಗೋಸುಂಬೆಯಂತೆನ್ನ ಮನವು!
ಬಾವುಲ ಬಾಳುವೆಯಂತೆನ್ನ ಮನವು!
ನಡುವಿರುಳೊಳೆದ್ದ ಕುರುಡಂಗೆ ಅಗಸೆಯಲ್ಲಿ ಬೆಳಗಾದಂತೆ,
ನಾವಿಲ್ಲದ ಭಕ್ತಿಯ ಬಯಸಿದರುಂಟೆ,
ಕೂಡಲಸಂಗಮದೇವಾ!"
"ಉಡುವಿನ ಭಾವದಲ್ಲಿ ಹಡದರೆನ್ನುವರು;
ಊಸರವಳ್ಳಿಯಂತೆನ್ನಿರವು
ಬಾವುಲ ಬಾಳುವೆಯ ತೆಱನಂತೆ
ಹೊತ್ತಾಱೆ ಎದ್ದ ಕುರುಡಂಗೆ
ಅಗಸೆಯಲ್ಲಿ ಅಸ್ತಮಾನವಾದಂತೆ:
ಆನು ಭಕ್ತಿಯ ಬಯಸಿದರಹುದೆ?

ಕೂಡಲ ಸಂಗಮದೇವಾ !"
"ಗೀಜಗನ ಗೂಡು ! ಕೋಡಗದಣಲ ಸಂಚ !
ಬಾವುಮೊಯ ಮಡುವೆ, ಬಾವುಲ ಬಿದ್ದಿನಂತೆ !
ರಾಜಗಾಜಿನ ಮಾತು ! ಬೀದಿಯ ಗಂಡನ ಸೊಬಗು !
ಓಡಿನೊಳಗಗೆಯ ಹೊಯ್ದಂತೆ, ಕಾಣಿರೋ !!
ಶಿವನಾದಿಯಂತವನಜಿಾಯದವನ ಭಕ್ತಿ
ಸುಖಶೋಧನೆಗೆ ಮದ್ದಕೊಂಡಂತೆ
ಕೂಡಲ ಸಂಗಮದೇವಾ !"

ಈ ವಚನಗಳಲ್ಲಿ ಬಂದಿರುವ ಅನೇಕ ಅಜ್ಞಾತ ಪ್ರಾಣಿ ರೂಪಕಗಳೂ, ಅವು ಗಳೊಡನೆ ಸಂವಾದಿಯಾಗಿ ಬಂದಿರುವ ಇತರ ಸಾಮಾನ್ಯ ಲೌಕಿಕ ರೂಪಕ ಗಳೂ ಅತ್ಯಂತ ಜಟಿಲವಾದೊಂದು ಮನೋವ್ಯಾಪಾರವನ್ನೆ ಚಿತ್ರಿಸ ಹೊರ ಟಿವೆ. ಅವುಗಳಲ್ಲಿ ವೈಪರೀತ್ಯವಿರುವಂತೆ ಭಾಸವಾದರೂ, ನಿಜಕ್ಕೂ ಅವೆಲ್ಲ ಒಂದೇ ಸಂಕೀರ್ಣ ಮನಸ್ಸಿನ ಪರಸ್ಪರ ಸಂಬಂಧವುಳ್ಳ ಮನೋಭಾವದ ಚಿತ್ರ ಣಕ್ಕೆ ಬಂದಿರುವುದು ಕಾಣುತ್ತದೆ ; ಊಸರವಳ್ಳಿ-ಗೋಸುಂಬೆ ತನ್ನ ಸುತ್ತಣ ಪ್ರದೇಶದ ಗಿಡಮರಗಳ ಬಣ್ಣಕ್ಕೆ ತಕ್ಕನಾದ ಬಣ್ಣ ಬದಲಿಸುತ್ತಾ ತನ್ನ ಮಿಗ ಗಳಿಗಾಗಿ ಕಾದಿರುವ ಜಂತು. ಅಂದಂದಿನ ಸ್ಥಿತಿಗತಿಗಳಿಗೆ ಹೊಂದಿಕೊಂಡು ಹೋಗುವ ಅನಾಸಕ್ತ ಚೇತನನಿಗೂ ಈ ಗೋಸುಂಬೆಯ 'ರಾಜಯೋಗ'ಕ್ಕೂ ಸಂಬಂಧವೇ ಇಲ್ಲ. ಗೋಸುಂಬೆಗೆ ಹಾಗೆ ಬಣ್ಣ ಬದಲಿಸುತ್ತಾ ಹೋಗುವುದು ಸಹಜವಿರಬಹುದು, ಅದಕ್ಕೆ ಹೊರ ಆವರಣವೂ ಕಾರಣವಿರಬಹುದು. ಆದರೆ, ಅದೆಲ್ಲ ಅದು ತನ್ನ ಆಹಾರ ಜಂತುಗಳನ್ನು ವಂಚಿಸಿ ಎಗರಿಸಿಕೊಳ್ಳಲು ಅದಕ್ಕೆ ಪ್ರಕೃತಿ ನೀಡಿರುವ ಸೌಲಭ್ಯವಷ್ಟೆ. ಬಸವಣ್ಣನವರಿಗೆ ತಮ್ಮ ಸ್ಥಿತಿ ಹಾಗೆ ತೋರುತ್ತದೆ. ತಮ್ಮ ಭಕ್ತಿಜೀವನ ಹಾಗೆ ವಂಚನೆಯಾಗಿ ತೋರಿ ಯಾತನೆ ಯಾಗುತ್ತದೆ.

"ಲೋಕಾಚಾರದವರೊಡನೆಯೂ ಬೆರೆತಿರುವೆ, ಶಿವಾಚಾರದವರೊಡನೆಯೂ ಕೂಡಿರುವೆ ; ಕಾಯಕವನ್ನೂ ಹೇಳುವೆ, ಕೈಲಾಸವನ್ನೂ ಬೋಧಿಸುವೆ ; ಭವ ಸಂಸಾರವನ್ನೂ ಅಪ್ಪುವೆ, ಅಭವ ಸಂಸಾರವನ್ನೂ ಒಪ್ಪುತ್ತಿರುವೆ— ಇದೆಲ್ಲ ಸಮನ್ವಯವೊ ಅಥವಾ ಬರಿ ಗೋಸುಂಬೆಯಾಟವೊ. ಜನ ಏನೆಂ ದಾರು ? ಶಿವ ಏನೆಂದಾನು ?" ಹೀಗೆ ಚಿಂತೆಯಾಗುತ್ತದೆ ಅಣ್ಣನವರಿಗೆ. ಭವ

ದಲ್ಲಿ ಶಿವನನ್ನು ಬೆರೆಸುವ ಪ್ರಯತ್ನದಲ್ಲಿರುವಾಗ ಬಸವಣ್ಣನವರಿಗೆ ಈ ತಾಕಲಾಟವೆಲ್ಲ ಬರುತ್ತದೆ. ಆಗ ಈ ಸ್ವವಿಮರ್ಶೆಯ ವಚನ ಬರುವುದು.

ಮುಂದೆ ಬರುವ ಉಡುವಿನ ಚಿತ್ರದ ವೈಶಿಷ್ಟ್ಯ ಮತ್ತೊಂದು. ಅದಕ್ಕೆ ಎರಡು ನಾಲಗೆಯಿದೆಯಂತೆ. ಬಸವಣ್ಣನವರಿಗೂ ಆ ಭಾವನೆಯಿತ್ತು: 'ಉಡುವಿನ ನಾಲಗೆಯಂತೆ ಎರಡಾದರೆ ಕೂಡಲಸಂಗಯ್ಯ ಮೆಚ್ಚುವನೆ?' ಎರಡು ನಾಲಗೆಯ ಸ್ವಭಾವ ತಮ್ಮಲ್ಲಿದೆಯೆಂದು ತಲ್ಲಣಿಸುತ್ತಾರೆ. ಯಾವುದೊ ಇಬ್ಬಂದಿತನದ ಯಾತನೆ ಅವರಿಗಾಗುತ್ತದೆ. ಹೇಗದನ್ನು ನಿವಾರಿಸಿಕೊಳ್ಳುವುದು? ಆ ಗುಣ ಈಗ ಇತ್ತೀಚೆಗೆ ಬಂದದ್ದೂ ಅಲ್ಲ; ಹುಟ್ಟಿದಾಗಲೆ ಬಂತು. ಅಷ್ಟೆ ಅಲ್ಲ, ಉಡುವಿನ ಭಾವದಿಂದಲೆ ಹಡೆದಿದ್ದಾರೆ ನಮ್ಮವರು! ಮಾಡುವುದೇನು? ಇದಿಷ್ಟೆ ಆಗಿದ್ದರೆ ಸಾಕಾಗಿತ್ತು. ಆದರೆ ಬಾವುಲಭಾವ ಬೇರೆ ಇದೆ. ಇದಕ್ಕೆ ಕಣ್ಣು ಕಾಣುವುದು ಕತ್ತಲಲ್ಲೆ. ಇದರ ತಲೆ ಯಾವಾಗಲೂ ಕೆಳಕ್ಕೆ, ಕಾಲು ಮೇಲಕ್ಕೆ. ಊರ್ಧ್ವಮೂಲರು ಇವರು ಎಂಬ ಭ್ರಾಂತಿ ಉಂಟು ಮಾಡುವ ಎಷ್ಟೋ ಜನರು ಇಂಥವರು. ಈ ಬಾವುಲಹಕ್ಕಿ ವಿಷಯವಾಗಿ ಒಂದು ಭಾವನೆಯಿದೆ—ಅದು ತನ್ನ ಮಲವನ್ನು ಬಾಯಿ ಮೂಲಕವಾಗಿಯೆ ಹೊರ ಹಾಕುತ್ತದೆಯೆಂದು.* ಅಂದರೆ ಅದಕ್ಕೆ ಆಹಾರ ಮಲ ಎಲ್ಲ ಒಂದೆ ಆಗಿದೆ. ಆಹಾರವಿಲ್ಲದಾಗ ಅದಕ್ಕೆ ಅದರ ಮಲವೆ ಬದ್ದಿನವಾಗುತ್ತದೆ. (ಇದಂತೂ ಅವೈಜ್ಞಾನಿಕವಾಗಿದ್ದರೂ ಜನತೆಯಲ್ಲಿ ಆ ಭಾವನೆ, ಅದು ತಲೆ ಕೆಳಗಾಗಿ ಮರಕ್ಕೆ ಜೋತು ಬಿದ್ದಿರುವುದರಿಂದಲೊ ಏನೊ, ಮೂಡಿಕೊಂಡಿದೆ. ಬಸವಣ್ಣನವರೂ ಆ ಕಾಲದ ಜನ ನಂಬಿಕೆಯನ್ನೆ ಅನುಸರಿಸಿ ಅದನ್ನು ರೂಪಕವಾಗಿ ಬಳಸಿಕೊಂಡಿದ್ದಾರೆ.) ಬಸವಣ್ಣನವರಿಗೆ ತಮ್ಮ ಭಕ್ತಿಯ ಸಾಧನೆಯೆಲ್ಲ ಹಾಗೆ ತೋರುತ್ತಿದೆ: ತಾವು ತಲೆಕೆಳಗಾದ ಜೀವ; ಆದರೆ ಊರ್ಧ್ವಮೂಲವಲ್ಲ. ಭಕ್ತನಾಗಿಯೂ ಇರುವೆ, ಲೋಕದ ಅಧಿಕಾರದಲ್ಲೂ ಇರುವೆ; ಇದರಿಂದ ಆಹಾರ ಮಲ ಮಿಶ್ರಣವಾದಂತೆಯೆ ಅಸಹ್ಯವಾಗಿದೆ....ಈ ರೂಪಕ

---

* ಈ ಅಂಶವನ್ನು ನನಗೆ ತಿಳಿಸಿದವರು ಮಿತ್ರ ಚಿದಾನಂದಮೂರ್ತಿ. ಅವರಿಗೆ ಶ್ರೀಮಾನ್ ಎಚ್. ದೇವೀರಪ್ಪನವರು ತಿಳಿಸಿದ್ದರಂತೆ. ಅವರು ನೀಡಿದ ಈ ಸೂಚನೆಗಾಗಿ ಅವರಿಬ್ಬರಿಗೂ ಕೃತಜ್ಞನಾಗಿದ್ದೇನೆ.

ವಂತೂ ಬಹು ಶಕ್ತಿವತ್ತಾಗಿದೆ.

ಗೀಜಗಗೂಡು ಎಂತಹದೆಂದು ತಿಳಿದೆ ಇದೆ. ಕೋಡಗದಣಲ ಸಂಚ, ಎಂಬುದಕ್ಕೂ ಒಂದು ಭಾವನೆ ಕಾರಣವಾಗಿದೆ. ಕಪಿಗಳು ತಮ್ಮ ಆಹಾರವನ್ನು ಒಳಬಾಯೊಳಗೆ ಇಟ್ಟುಕೊಂಡಿರುತ್ತವಂತೆ, ಮಕ್ಕಳು ಎಂಜಲು ಪೆಪ್ಪರಮೆಂಟನ್ನು ಒರಸಿ ಜೇಬೊಳಗಿಟ್ಟು ಮತ್ತೆಮತ್ತೆ ಬಾಯಿಗಿಟ್ಟುಕೊಳ್ಳುವಂತೆ! ಈ ಎಲ್ಲ ಚಿತ್ರಗಳ ಸಂಕೀರ್ಣ ಪರಿಣಾಮದ ಒಂದಂಶವನ್ನು ವಾಚ್ಯವಾಗಿ ಹೇಳುತ್ತದೆ: "ಶಿವನಾದಿ ಅಂತವನರಿಯದವನ ಭಕ್ತಿ" ಎಂಬ ಮಾತು. ಮುಪ್ಪಿನಲ್ಲಿ ಮದ್ದು ತೆಗೆದುಕೊಂಡು ಯೌವನ ಪಡೆದು ಕೊಳಲೆಳಸುವಂತೆ ಅದು ವ್ಯರ್ಥ ಎಂದು ಅವರೆ ಹೇಳುತ್ತಾರೆ. ಆದರೆ ಈ ರೂಪಕ ಮಾಲೆಯ ಧ್ವನಿಯಷ್ಟೆ ಅಲ್ಲ. ಅದು, ಮೊದಲೆ ತಿಳಿಸಿದಂತೆ ಸಂಕೀರ್ಣ. ಬಸವಣ್ಣನವರ ನವ್ಯಕಾವ್ಯವನ್ನು ಇಂತಹ ವಚನಗಳಲ್ಲಿ ಕಾಣಬಹುದು.

ಆತ್ಮವಂತನಾದ ಈ ವ್ಯಕ್ತಿ ತನ್ನ ವಿಚಾರದಲ್ಲಿ ಇಷ್ಟು ಉಗ್ರ ಜಾಗ್ರತರಾಗಿದ್ದಾರೆ. ಅಧಿಕಾರ ಅಧ್ಯಾತ್ಮ ಎಲ್ಲ ವಲ್ಲಯದಲ್ಲೂ ವರಿಷ್ಠ ಸ್ಥಾನದಲ್ಲೂ ಇದ್ದರೂ ಹೀಗೆ ದೈನ್ಯ ತೋರುತ್ತಾರೆ. ಆದರೆ ಲೋಕಜೀವಿ ಏನಾದರೂ ಒಂದಿಷ್ಟು ಅಧಿಕಾರ ಸಿಕ್ಕರೆ ಸಾಕು; ತನ್ನನ್ನು ಮೆರೆಯುವ ರಭಸದಲ್ಲಿ ಉಳಿದೆಲ್ಲವನ್ನೂ ಮರೆಯುತ್ತಾನೆ. ಅಷ್ಟೆ ಅಲ್ಲ, ಉಳಿದೆಲ್ಲವನ್ನೂ ಗೆಲ್ಲುವ ಬಯಕೆಯಿಂದಲೂ ಹೊರಡುತ್ತಾನೆ. ತನಗೆ ತಾನೆ ಅಲ್ಪನಾದರೂ ತಾನು ಏರಿರುವ ಅಹಂ ಮದಗಜ ಅಧಿಕಾರಾಶ್ವಗಳಿಂದಾಗಿ ಎತ್ತರವಾಗಿರುತ್ತಾನೆ. ಕೆಳಗಿಳಿದು ಬಂದರೆ ತಿಳಿಯುತ್ತದೆ.

ಆನೆಯನೇರಿಕೊಂಡು ಹೋದಿರೆ ನೀವು
ಕುದುರೆಯನೇರಿಕೊಂಡು ಹೋದಿರೆ ನೀವು,
..................................
ಕುಂಕುಮ ಕಸ್ತೂರಿ ಪೂಸಿಕೊಂಡು ಹೋದಿರೆ, ಅಣ್ಣಾ!
ಸತ್ಯದ ನಿಲವನರಿಯದೆ ಹೋದಿರಲ್ಲಾ!
ಸದ್ಗುಣವೆಂಬ ಫಲವ ಬಿತ್ತಿ ಬೆಳೆಯದೆ ಹೋದಿರಲ್ಲಾ
ಅಹಂಕಾರವೆಂಬ ಮದಗಜವೇರಿ
ವಿಧಿಗೆ ಗುರಿಯಾಗಿ ನೀವು ಹೋದಿರಲ್ಲಾ"

ಮೇಲಿನ ವಚನದಲ್ಲಿ ಆನೆ ಕುದುರೆಗಳು ಅಧಿಕಾರ ಅಹಂಕಾರ ಮದಗಳಿಗೆ

ಸಂಕೇತವಾದರೆ ಮುಂದಿನ ವಚನದಲ್ಲಿ ಅದೇ ಆನೆ ಭವ್ಯಭಾವಕ್ಕೆ ಪ್ರತೀಕವಾಗಿ ಬರುತ್ತದೆ.

"ಆರು ಮುನಿದು ನಮ್ಮನೇನು ಮಾಡುವರು ?
ಊರು ಮುನಿದು ನಮ್ಮನೆಂತು ಮಾಡುವರು ?"
ನಮ್ಮ ಕುನ್ನಿಗೆ ಕೂಸಕೊಡಬೇಡ!
ನಮ್ಮ ಸೊಣಗಂಗೆ ತಳಿಗೆಯನಿಕ್ಕಬೇಡ !
ಆನೆಯಮೇಲೆ ಹೋಹನ ಶ್ವಾನ ಕಚ್ಚಬಲ್ಲುದೆ ?
ನಮ್ಮ ಕೂಡಲಸಂಗಯ್ಯನುಳ್ಳನ್ನಕ್ಕ !"

ಶಿವದ ನೆಲೆಯಲ್ಲಿ ಬಾಳುತ್ತಿರುವವನಿಗೆ ಭವದ ಕೋಟಲೆ ಕಿರುಕುಳವಾಗ ಬಹುದೇ ವಿನಾ ಮಾರಕವಾಗಲಾರದು. ಆನೆಯಮೇಲೆ ಹೋಗುವವರನ್ನು ನಾಯಿ ಬೊಗಳೀತಷ್ಟೆ; ಬೊಗಳದಿದ್ದರೆ ಅದಕ್ಕೂ ತೃಪ್ತಿಯಿಲ್ಲ; ಅದು ಅದರ ಸ್ವಭಾವ. ಆನೆಯಾದರೂ ಅದನ್ನು ಗಮನಿಸದು. ಒಂದುವೇಳೆ ಗಮನಿಸಿದರೆ ಆ ನಾಯಿಯ ಗತಿ ಏನಾಗುವುದೊ! ಹೇಗಾದರೂ, ಆನೆಯ ಮೇಲೆ ಕುಳಿ ತವನಿಗೇನೂ ಆಗದು; ವಿನೋದ್ಮದೊರೆಯಬಹುದಷ್ಟೆ. ಆದರೆ ಆ ಆನೆಯೆತ್ತರ ದಿಂದ ಕೆಳಕ್ಕಿಳಿದು ಬಂದರೆ ಹಿಂದೆ ಬೊಗಳಿದ ನಾಯಿ ಕಚ್ಚುತ್ತದೊ ಏನೊ, ಅಥವಾ ಅದು ಸುಮ್ಮನಾದರೂ ಆಗಬಹುದು. ಶಿವದ ನೆಲೆಯಲ್ಲಿ ಇದ್ದರೆ ಬಹಳ ಒಳ್ಳೆಯದೆ, ಒಮ್ಮೆ ಏನಾದರೂ ಆ ನೆಲೆಗಟ್ಟಿನಿಂದ ಭವಕ್ಕೆ ಇಳಿದು ಬಂದರೆ ಮೊದಲೆ ಕೆಹಿಗೊಂಡಿದ್ದ ಈ ಭವ ಅಂಥವನ ಮೇಲೆ ಸೇಡುತೀರಿಸಿ ಕೊಳ್ಳಲೂ ಬಹುದು. ಅಲೌಕಿಕವಾಗಿದ್ದಾಗ: 'ಯಾರು ಮುನಿದು ನಮ್ಮ ನೇನ ಮಾಡುವರು ? ಊರು ಮುನಿದು ನಮ್ಮನೆಂತು ಮಾಡುವರು ? ನಮ್ಮ ಕುನ್ನಿಗೆ ಕೂಸ ಕೊಡಬೇಡ! ನಮ್ಮ ಸೊಣಗಂಗೆ ತಳಿಗೆಯನಿಕ್ಕ ಬೇಡ !' ಎಂಬ ಕೆಚ್ಚೆ ಇರುತ್ತದೆ. ಕುನ್ನಿಗೆ ಯಾರೂ ಕೂಸುಕೊಡದಿದ್ದರೂ ಅದು ತಾನೆ ತನ್ನ ಕೂಸನ್ನು ಕಂಡುಕೊಳ್ಳಬಲ್ಲದು! ಕೂಸೆ ಅದನ್ನರಸಿಕೊಂಡೂ ಬರುತ್ತದೆ. ಬಸವಣ್ಣನವರಿಗೆ ನಾಯಿಗಳ ಬೆದೆಯ ಚಿತ್ರ ಚೆನ್ನಾಗಿ ಗೊತ್ತಿರುವುದು ಇಲ್ಲಿ ತೋರೀತು. ಆ ಬೆದೆಗಾಲದಲ್ಲಿ ಅರಸರ ಮನೆನಾಯಿ ಬೀದಿಯ ನಾಯಿಗಳೆಲ್ಲ ಸಮಾನರೆ. ಆದರೆ ಕಾಮಾನಂತರ ಘಳಿಗೆಗಳಲ್ಲಿ ಅವು ಬೇರೆ ಬೇರೆ ವರ್ಗಪ್ರಜ್ಞೆಗೆ ಬಲಿ. ಅವುಗಳನ್ನು ಕಾಯುವ ಒಡೆಯರ ಘನತೆಗೆ ಅನುಗುಣವಾಗಿ ಅವಕ್ಕೂ ಘನತೆ ಬರುತ್ತೆ. ಹಾಗೆಯೆ ನಮ್ಮ ವರ್ಗ ಜಾತಿ ಭಾವನೆಕಚ್ಚಾಟ ಭಕ್ತ ಲೌಕಿಕ

ನಾದಾಗ, ತನ್ನ ಸೊಣಗನಿಗೇಕೆ ತನಗೇ ತಳಿಗೆಯನಿಕ್ಕೆಂದು ಲೋಕವನ್ನು ಕೇಳಬೇಕಾಗುವುದೊ ಏನೊ ; ತನ್ನ ಕುನ್ನಿಗೇಕೆ ತನಗೇ ಕೂಸು ಕೊಡಿರೆಂದು ಕೇಳಿಕೊಳ್ಳಬೇಕಾಗುವುದೊ ಏನೊ. ಒಟ್ಟಿನಲ್ಲಿ ಈ ವಚನ ಧ್ವನಿವತ್ತಾಗಿದೆ. ಕುನ್ನಿ–ಸೊಣಗ–ಶ್ವಾನ ಎಲ್ಲ ಒಂದೇ ಆದರೂ ಬೇರೆ ಬೇರೆ ಪ್ರತೀಕವಾಗಿ ಬಂದಿವೆ.

ಮೃಗಶ್ರೇಷ್ಠವಾದ ಸಿಂಹದ ಚಿತ್ರವು ಒಂದೆರಡು ಬಾರಿ ಬರುತ್ತದೆ. ಸಿಂಹಕ್ಕೆ ನಡು ಬಹಳ ಮುಖ್ಯ. ಅದರಿಂದಲೆ ಅದರ ನಡಿಗೆಗೆ ಗಾಂಭೀರ್ಯ ಶಕ್ತಿ ಲಭಿಸಿದೆ. ಅದೇ ಮುರಿದು ಹೋದರೆ ? ಆನೆಗೆ ಸೊಂಡಿಲೆ ಮುಖ್ಯ. ಅದೇ ಅದರ ಕೈ, ಆಯುಧ. ಅದೇ ಮುರಿದರೆ? ಮೂಗಿಲ್ಲದೆ ಯಾವ ಶೃಂಗಾರ ತಾನೆ ಇದ್ದೀತು ? ಇವುಗಳನ್ನು ಕಲ್ಪಿಸಿಕೊಳ್ಳಲಾಗುತ್ತದೆಯೆ ? ಹಾಗೆಯೆ ಭಕ್ತಿ ತುಂಬಿ ತುಳುಕಾಡದವರ ಸಂಗ. ಅದೆಂತಹ ಬಾಳು ?

> "ಸಿಂಗದ ನಡು ಮುರಿಯಲಾ ಸಿಂಗವೇಸು ಬಾತೆ ?
> ಸುಂಡಿಲು ಮುರಿದರೆ ಗಜವೇಸು ಬಾತೆ ?
> ..............................
> ನಿಜತುಂಬಿದ ಭಕ್ತಿ ತುಳುಕಾಡದವರ ಸಂಗವೇಸು ಬಾತೆ ?
> ಕೂಡಲಸಂಗಮದೇವಾ ?"

ಸಿಂಹ ತನ್ನ ಗಾಂಭೀರ್ಯಕ್ಕೆ, ಅಲಘು ಸ್ವಭಾವಕ್ಕೆ ಹೆಸರಾದದ್ದು. ಕೆಲವು ಜನರು ಮೇಲು ನೋಟಕ್ಕೆ ಹಾಗೆ ಸಿಂಹದಂತೆ ಇರುತ್ತಾರೆ. ಆದರೆ ಅದರಂತೆ ಅವರ ಒಳಗು ಗಂಭೀರವಾಗಿರದು. ಅವರ ಆ ಮೃಗರಾಜಗಾತ್ರ ಗಾಂಭೀರ್ಯದ ಒಳಗೆ ಏನೆಲ್ಲ ಮೃಗಾಲಯ ವಿಹಾರ ನಡೆದಿರುವುದಿಲ್ಲ. ಲೋಕದ ಎಷ್ಟೊ ಜನ ಸಿಂಹಪುರುಷರ ಒಳಮನಸ್ಸಿನಲ್ಲಿ ಯಾವ ಮೃಗಪ್ರಭುತ್ವ ನಡೆದಿರುತ್ತದೆಯೊ. ಅದನ್ನು ಬಹು ಚೆನ್ನಾಗಿ ಈ ವಚನ ಚಿತ್ರಿಸುತ್ತದೆ :

> "ಅಂಗದ ನೋಟವು ಸಿಂಗದ ಗಾತ್ರವು
> ಹಿಂಗದು ಮನದಲ್ಲಿ ನಾನಾ ವಿಕಾರ !"

ಸಾಂಪ್ರದಾಯಿಕವಾಗಿ ಬರುವ ಆನೆ ಸಿಂಹಗಳ ಸಂಬಂಧಚಿತ್ರ ಒಂದೆರಡೆಡೆ ಬಂದಿವೆ. ಸಿಂಹವು ಒಂದೆಡೆಯಾದರೆ ಇಲಿಯ ಚಿತ್ರ ಮತ್ತೊಂದು ಕಡೆ ಬಂದಿದೆ. ಸ್ವಭಾವತಃ ಇಲಿ ಬಿಲಗಮನ ಪ್ರವೃತ್ತಿಯುಳ್ಳದ್ದು, ಕತ್ತರಿಸುವ ವೃತ್ತಿ ಯುಳ್ಳದ್ದು. ಅದನ್ನು ಸಾಯುವ ತನಕವೂ ಬಿಡದು ಅದು.

"ಇಲಿ ಗಡುಹನೊಡ್ಡಿದಲ್ಲಿರ್ಪಂತೆ ಎನ್ನ ಸಂಸಾರ—
ತನು ಕೆಡುವನ್ನಕ್ಕ ಮಾಣದು ;
ಹೆಜಿರ ಬಾಧಿಸುವುದು, ತನು ಕೆಡುವನ್ನಕ್ಕ ಮಾಣದು ;
ಹೆಜಿರ ಛಿದ್ರಿಸುವುದು ತನುಕೆಡುವನ್ನಕ್ಕ ಮಾಣದು.
ಅಕಟಕಟಾ ! ಸಂಸಾರಕ್ಕಾಸತ್ತೆ"

ಗುಡಾಣವನ್ನು ಒಡ್ಡಿದಲ್ಲಿ ಇಲ್ಲಿ ಇರುವಂತೆ ಅನಿಸುತ್ತದೆ ಬಸವಣ್ಣನವರಿಗೆ ಸಂಸಾರ. ಇಲಿ ಯಾವುದನ್ನಾದರೂ ಸರಿ ತೋಡುತ್ತದೆ ಕೊರೆಯುತ್ತದೆ; ಎಂತಹ ಒಳ್ಳೆಯದನ್ನಾದರೂ ಛಿದ್ರಗೊಳಿಸುತ್ತದೆ. ಮಾನವರಲ್ಲಿರುವ ಈ ಮೂಷಕ ಅತ್ಯಂತ ಭಯಂಕರವಾದುದು. ಸಿಂಹ, ವ್ಯಾಘ್ರ, ಗಜ ಇವುಗಳು ಶಕ್ತ ಪ್ರಾಣಿಗಳು ; ಆದರೆ ಹಾವು ಇಲಿಗಳು ? ಯಾರಿಂದ ಅಪಾಯ ಹೆಚ್ಚು ? ದುಷ್ಟರಾದ ಹುಲಿ ಆನೆಗಳು ಶಕ್ತರಾದ್ದರಿಂದ ಅವನ್ನು ಗುರುತಿಸಿ ಓಡಬಹುದು, ಇಲ್ಲವೆ ಎದುರಿಸಿ ಗೆಲ್ಲಬಹುದು. ಸೋತರೂ ಅದು ಗೆಲವೆ. ಆದರೀ ಕಿರುಕುಳರನ್ನು ? ಕೊಲ್ಲಬಾರದವರೇನಲ್ಲ. ನಾವು ಅತ್ತ ಗಮನವೆ ಹರಿಸಿರುವುದಿಲ್ಲ. ಆದರೂ ಈ ಕ್ಷುದ್ರರು ಕಿರುಕುಳಕೊಡುತ್ತಾರೆ. ಮೆಲ್ಲ ಮೆಲ್ಲನೇ ಬಂದು, ಕೊಲ್ಲುವುದಿಲ್ಲ, ಕಚ್ಚುತ್ತಾರೆ, ಕತ್ತರಿಸುತ್ತಾರೆ. ಇಲಿ ಕತ್ತರಿಸುವುದಾದರೂ ಏನನ್ನು—ಬೆಲೆಯುಳ್ಳ ರೇಸಿಮೆಯ ಕಲಾಪತ್ತಿನ ಬಟ್ಟೆಗಳನ್ನೆ, ಪ್ರಿಯವಾದ ಪುಸ್ತಕಗಳನ್ನೆ. ಹೋಗಲಿ ಗುಡಾಣದಲ್ಲಿ ಬಿದ್ದಮೇಲಾದರೂ ತಾನು ಸಾಯುವುದು ಖಂಡಿತ ಎಂಬುದು ಗೊತ್ತಾದಾಗಲೂ ಸುಮ್ಮನಿರುತ್ತದೆಯೆ ? ಪಾಪ ತನ್ನ ಸ್ವಭಾವವನ್ನೆಲ್ಲಿ ಬಿಟ್ಟೀತು, ಹಲ್ಲು ಉಗುರೆಲ್ಲ ಮುರಿದರೂ ಛಿದ್ರಿಸುತ್ತಲೆ ಇರುತ್ತದೆ. ಸಂಸಾರಿ ಮಾನವನಲ್ಲಿರುವ ಮೂಷಕ ಪ್ರವೃತ್ತಿ ಹೀಗೆ ! ಇದು ಕಾಮಕ್ಕೆ ಮಾತ್ರವೆ ಅಲ್ಲ, ನಮ್ಮಲ್ಲಿರುವ ಶಕುನಿ, ಐಯಾಗೊ ಮಹಶಯರಿಗೂ ಪ್ರತೀಕವಾಗಿದೆ.

ಈ ಮುಂದಿನ ವಚನದಲ್ಲಿ ಕುರಿಯ ಅತಿ ದಾರುಣವಾದ ಚಿತ್ರವನ್ನು ಬಸವಣ್ಣನವರು ಕೊಡುತ್ತಾರೆ.

"ಹಬ್ಬಕ್ಕೆ ತಂದ ಹರಕೆಯ ಕುಜಿ
ತೋರಣಕ್ಕೆ ತಂದ ತಳಿರ ಮೇಯಿತ್ತು ;
ಕೊಂದಹರೆಂಬುದನಜಿಯದೆ ಬೆಂದವೊಡಲ ಹೊರೆಯ ಹೋಯಿತ್ತಲ್ಲದೆ

ಅಂದಂದೇ ಹುಟ್ಟಿತ್ತು, ಅಂದಂದೇ ಹೊಂದಿತ್ತು: ಕೊಂದವರುಳಿದರೇ,
ಕೂಡಲಸಂಗಮದೇವಾ ?"

ಈ ಚಿತ್ರ ಮಾನವ ದುರಂತತೆಯನ್ನು ಅತ್ಯಂತ ಪರಿಣಾಮಕಾರಿಯಾಗಿ ಚಿತ್ರಿಸುತ್ತದೆ. ತನ್ನನ್ನು ಕೊಲ್ಲುತ್ತಾರೆ ಎಂಬ ಅರಿವಿಲ್ಲದ ಕುರಿ, ತನ್ನನ್ನು ಬಲಿಗೊಳ್ಳುವ ಮಾರಿಯ ಗುಡಿಯ ತೋರಣಕ್ಕೆಂದು ತಂದಿರುವ ತಳಿರನ್ನೇ ಮೇಯುತ್ತದೆ–ಬೆಂದವೊಡಲನ್ನು ಸಂತೈಸಿಕೊಳ್ಳಲೆಂದು. ನಮ್ಮ ಬದುಕೆಲ್ಲ ಬಹುಮಟ್ಟಿಗೆ ಹೀಗೆಯೇ ಆಗಿದೆ ಏನು ? ಎಷ್ಟು ಮಾರ್ಮಿಕವಾಗಿದೆ ! ಎಷ್ಟು ಕರುಣರಸಪೂರ್ಣವಾಗಿದೆ ಇದು !

ನೂರು ಬಯಕೆಗಳ, ನೂರು ವಿಷಯಗಳ ಮಧ್ಯೆಯಿರುವ ಮಾನವನಿಗೆ ಏನು ಮಾಡಲೂ ತಿಳಿಯುವುದಿಲ್ಲ. ಅವುಗಳು ತನ್ನ ದುರಂತಕ್ಕೆ ಕಾರಣವೆಂದೂ ತಿಳಿಯದು. ಇದೆ ಅವನ ದುರಂತ. ಮತ್ತೊಂದು ವಚನ ಇದೇ ಭಾವವನ್ನು ಬೇರೆಯ ವಿಧಾನದಿಂದ ಚಿತ್ರಿಸಿದೆ.

"ವಿಷಯವೆಂಬ ಹಸುರನೆನ್ನ ಮುಂದೆ ತಂದು ಪಸರಿಸಿದೆಯಯ್ಯ
ಹಸುವೇನಬಲ್ಲುದು ? ಹಸುರೆಂದೆಳಸುವುದು."

ಹಸಿರನ್ನು ತಿನ್ನಬಾರದು ಎನ್ನುವ ವೈರಾಗ್ಯವನ್ನೇನೂ ಹಸುವಿಗೆ ಯಾರೂ ಹೇಳಿಕೊಟ್ಟವರಿಲ್ಲ. ಎಳೆಯ ಜೋಳವಾದರೂ ಸರಿಯೆ–ಅದು ಸೊಕ್ಕು ತರಿಸಿ ಕೊಂದರೂ ಸರಿಯೆ–ಅದನ್ನು ಅದರ ಬಣ್ಣಕ್ಕಾಗಿ ಮೋಸಹೋದ, ನಂಬಿಕೆಗೊಂಡ ಹಸು ಮೇಯುತ್ತದೆ. ಮೇದು ಸಾಯುತ್ತದೆ. ಯಾವುದನ್ನು ಮೇಯಬೇಕು, ಯಾವುದು ಬಾರದು ಎಂಬುದನ್ನು ತಿಳಿದ ಪಶುಪತಿಯೆ ತಿಳುಹಬೇಕು; ಸದಾಹಾರವಿತ್ತು ಕಾಯಬೇಕು. ಆದರೆ ಅವನೆ ವಿಷಯದ ಹಸುರನ್ನು ಮುಂದೆ ಹರಡಿದರೆ ? ತರಗನ್ನೆ ತಿನ್ನುವ ಹಸು ಬಿಡಬೇಕೆ ?

ಇದೇ ಪಶುವಿನ ಚಿತ್ರ ಮತ್ತೆ ಬೇರೆಡೆ ಬರುತ್ತದೆ. ಭವಕರ್ದಮ ನಿಮಗ್ನವಾಗಿ ಸತ್ತೂ ಸಾಯದೆ ಬಡಿದಾಡುತ್ತ ತೊಳಲುವ ಚೇತನವನ್ನು ಈ ಚಿತ್ರ ಬಹು ಶಕ್ತಿಯುತವಾಗಿಯೆ ಚಿತ್ರಿಸಿದೆ :

"ಕೆಸರಲ್ಲಿ ಬಿದ್ದ ಪಶುವಿನಂತಾನು
ದೆಸೆ ದೆಸೆಗೆ ಬಾಯಿಬಿಡುತ್ತಿದ್ದೇನಯ್ಯಾ,
ಅಯ್ಯಾ ! ಅರಯ್ವರಿಲ್ಲ–ಅಕಟಕಟಾ !–

ಪಶುವೆಂದೆನ್ನ ಕೂಡಲಸಂಗಮದೇವ
ಕೊಂಬು ಹಿಡಿದೆತ್ತುವನ್ನಕ್ಕ !”

ಹಸಿರು ಮೇಯಲೆಂದೊ, ನೀರು ಕುಡಿಯಲೆಂದೊ ಹೋದ ಹಸು ಕೆಸರೊಳಗೆ ಸಿಲುಕಿಕೊಂಡು ಕಾಲುಬಡಿಯುತ್ತಿದೆ. ಒಮ್ಮೆ ಮುಂಗಾಲನ್ನು ಎತ್ತಿದರೆ ಹಿಂಗಾಲು ಮತ್ತೂ ಆಳಕ್ಕೆ ಹೋಗಿರುತ್ತದೆ. ಮೇಲೆತ್ತಲೆಂದು ಕಾಲನ್ನು ಬಡಿದಂತೆಲ್ಲ ಶರೀರವೆ ಒಳಗೊಳಗೆ ಹೋಗುತ್ತಿದೆ. ಕ್ಷಣಕ್ಷಣವಾಗಿ ಪ್ರಾಣ ಹೋಗುತ್ತಿರುವಾಗ ಭೀತಿಹತಪ್ರಾಣಿ ದೆಸೆದೆಸೆಗೂ ಬಾಯಿಬಿಡುತ್ತಿದೆ. ಅದಕ್ಕೆ ತಾನು ಸಾಯುತ್ತಿರುವ ಭಯಂಕರವಾದ ಅನುಭವವಾಗುತ್ತಿದೆ. ಆದರೆ ಮೇಲೆತ್ತುವವರಾರು ? ನೀರಿನಲ್ಲಿ ಮುಳುಗುವವರನ್ನು ಮೇಲೆತ್ತುವುದೆ ಎಲ್ಲರಿಗೂ ಸಾಧ್ಯವಿಲ್ಲದಿರುವಾಗ ಈಜಲೂಬಾರದ ನಡೆಯಲೂಬಾರದ ಕೆಸರು ನೆಲದಲ್ಲೆಂತು ನಡೆದು ಹೋಗಿ ಅಲ್ಲಿ ಮುಳುಗುತ್ತಿರುವ ಮತ್ತೊಂದು ಪ್ರಾಣವನ್ನು ಬದುಕಿಸುವುದು ? ಮುಳುಗುವ ಪ್ರಾಣಿಯನ್ನು ನೋಡಿ 'ಅಯ್ಯೋ ಪಾಪ!' ಎಂದು ಮರುಗಿ ಸುಮ್ಮನಾಗುವುದೆ ವಿವೇಕವಾಗುತ್ತದೆ ಸಾಧಾರಣರಿಗೆ. ಹಾಗಾದರೆ ಮೇಲೆತ್ತುವರಾರು ? ಪಶುಪತಿ ಮಾತ್ರನೆ. ಮೇಲೆತ್ತುವ ರಭಸದಲ್ಲಿ ಪ್ರಾಣಹೋದೀತು. ರಕ್ಷಿಸಲೆಂದು ಮೇಲಿಂದ ಬಿಡುವ ಹಗ್ಗವೆ ಕೊರಳ ಉರುಳಾಗಬಹುದು. ಆದ್ದರಿಂದ ಯಾರನ್ನು ಹೇಗೆ ಎತ್ತಬೇಕೆಂಬುದನ್ನು ಉದ್ಧಾರಕ ಅವಶ್ಯವಾಗಿ ತಿಳಿದಿರಬೇಕು. ಅವನು ಕೊಂಬು ಹಿಡಿದು–ಕರವಿಡಿದಲ್ಲ !–ಮೇಲೆತ್ತಬೇಕು. ಈ ರೂಪಕದ ಸಿದ್ಧಿ ಈ ಮಾತಿನಲ್ಲಿ ವ್ಯಕ್ತವಾಗಿದೆ. ಕವಿಗೆ ತನ್ನ ರೂಪಕಾನುಭವದಲ್ಲಿ ತಾದಾತ್ಮ್ಯವಿಲ್ಲದಿದ್ದರೆ ಅಪಸ್ವರವಾಗುವಂತೆ 'ಕೈಹಿಡಿದೆತ್ತು' ಎಂಬ ಮಾತು ಬರುತ್ತಿತ್ತು. ಇಲ್ಲಿ ಬಸವಣ್ಣನವರಿಗೆ ಆ ಭಾವ ತಾದಾತ್ಮ್ಯವಿರುವುದರಿಂದಲೆ, ಆ ಭಾವಜೀವಂತತೆ ಇರುವುದರಿಂದಲೆ ಅವರು 'ಕೊಂಬು ಹಿಡಿದೆತ್ತು' ಎಂದಿದ್ದಾರೆ.

“ತುಡುಗುಣಿಯೆಂದು ಎನ್ನ ಹಿಡಿದು ಬಡಿಯುದ ಮುನ್ನ
ಒಡೆಯ ! ನಿಮ್ಮ ಬಯ್ಯದಂತೆ ಮಾಡು.”

ಕಂಡ ಕಂಡ ಹೊಲದ ಹಸಿರನ್ನು ಮೇಯುತ್ತ ಹೋಗುವ ಪಶುವನ್ನು ಅನ್ಯರು ತುಡುಗುಣಿಯೆಂದು ಹಿಡಿದು ಹೊಡೆದರೆ ಅದಕ್ಕೆ ಪ್ರಾಣಾಪಾಯ ; ಒಡೆಯನಿಗೆ ಅವಮಾನ. ಪಶುಗಳ ಆಗುಹೋಗೆಲ್ಲ ತನ್ನದಾಗಿರುವಾಗ ಬೇಗನೇಕೆ

ಪಶುಪತಿ ಬರಬಾರದು ? ಕೊಂಬುಹಿಡಿದೇಕೆ ಎತ್ತಬಾರದು ?

"ಅಡವಿಯೊಳಗೆ ಹೊಲಬುಗೆಟ್ಟ ಪಶುವಿನಂತೆ
'ಅಂಬೇ' 'ಅಂಬೇ' ಎಂದು ಕರೆಯುತ್ತಲಿದ್ದೇನೆ
'ಅಂಬೇ' 'ಅಂಬೇ' ಎಂದು ಒಱಲುತ್ತಲಿದ್ದೇನೆ
ಕೂಡಲಸಂಗಮದೇವ 'ಬಾಳು, ಬಾಳೆಂ'ಬನ್ನಕ್ಕ !"

"ಆನೊಬ್ಬನು : ಸುಡುವರೈವರು !
ಮೇಲೆ ಕಿಚ್ಚು ಘನ : ನಿಲಲುಬಾರದು !
ಕಾಡಬಸವನ ಹುಲಿ ಕೊಂಡೊಯ್ದರೆ
ಆರಯ್ಯಲಾಗದೆ, ಕೂಡಲಸಂಗಮದೇವ !"

ಈ ಪಶುವಿನ ಮೊರೆಯನ್ನು ಕೇಳಿ ಬಾರನೇನು ಪಶುಪತಿ ? ಹಸುವಿನ ಮೊರೆಯಾದರೆ ಸುಮ್ಮನಿರಬಹುದು. ಆದರದು ಕರುವಿನ ಕರೆತ. ಬಾವಿಯಲ್ಲಿ ಬಿದ್ದ ಕರುವಿನ ಕರುಳಿರಿಯುವ ಮೊರೆತ. ಗುಳಿಯಲ್ಲಿ ಬಿದ್ದವನ ಮೇಲೆ ಒರಳನ್ನು ಹಾಕಿದರು ಎಂಬಂತೆ ಮಾಡದೆ ಆ ಕರುವನ್ನು ಮೇಲೆ ಎತ್ತಿ ಅದಕ್ಕೆ ತಾಯಮೊಗ ತೋರಿಸುತ್ತಾನೆ, ಆ ಪಶುಪತಿ, ಉಳುಹುತ್ತಾನೆ.

"ಹಾಳು ಕುಳಿಯಲ್ಲಿ ಬಿದ್ದ ಪಶುವಿನ ಕಱುವ ಕಿಗೆದು
ತಾಯ ಮುಖವ ತೋಱುವಂತೆ
ಪಾಪಕೂಪದಲ್ಲಿ ಬಿದ್ದವನನೆಬ್ಬಿಸಿ
ಕೂಡಲಸಂಗನ ಶರಣರ ಚರಣವ ತೋಱಿ ಎನ್ನನುಳುಹಿದನು."

ಪಾಪಕೂಪಪತಿತನಾದವನನ್ನು ಹಾಗೆ ಮೇಲೆತ್ತಿ ಆ ತಂದೆ ಕಾಯುತ್ತಾನೆ. ಶರಣರ ಪಾದದರ್ಶನ ಮಾಡಿಸಿ ಆ ಘಾಸಿಯನ್ನೆಲ್ಲ ಮರೆಯುವಂತೆ ಮಾಡುತ್ತಾನೆ. ಕೊನೆಗಾದರೂ, ಇನ್ನೇನು ಬೇಕು ?

ಸಂಸಾರದ ವಿಷಮ ವಿಷಯಸುಖಗಳ ಬಾಹ್ಯರೂಪಿಗೆ ಮೋಹಗೊಂಡು ಮೆಲಹೋಗಿ ಅಡವಿಯಲ್ಲಿ ದಾರಿತಪ್ಪಿ ದುಃಖಕರ್ದಮದಲ್ಲಿ ಮುಳುಗಿ ಬಡಿದಾಡುವ ಪಶು ಜೀವನದ ಚಿತ್ರ ; ಪಂಚ ವಿಷಯೇಂದ್ರಿಯಾಗ್ನಿ ಹತ, ವ್ಯಾಘ್ರಹೃತ ಪಶುವಿನ ಚಿತ್ರ ಮೇಲೆ ಸೊಗಸಾಗಿ ಚಿತ್ರಿತವಾಗಿದೆ.

ವ್ಯರ್ಥ ಭಕ್ತಿಯ ಚಿತ್ರವನ್ನು ಮುಂದಿನ ರೂಪಕದಲ್ಲಿ ಕೊಟ್ಟಿದ್ದಾರೆ

"ಎಳ್ಳಿಲ್ಲದ ಗಾಣವನಾಡಿದ ಎತ್ತಿನಂತಾಯಿತೆನ್ನ ಭಕ್ತಿ"

ಗಾಣದ ಎತ್ತು ತಾನು ನಡೆದ ಹಾದಿಯಲ್ಲೆ ನಡೆದು, ಸುತ್ತಿದ ಗಾಣವನ್ನೆ ಸುತ್ತುತ್ತಿದೆ, ಗಾಣದಲ್ಲಿ ಎಳ್ಳೆ ಇಲ್ಲ. ಕಿಂಯ್ಯೊ ಶಬ್ದಮಾತ್ರ ಅಧಿಕವಾಗಿ ಆಗು

ತ್ತಲೆ ಇದೆ. ಅರಿವಿಲ್ಲದೆ ಮಾಡಿದ, ನಾನು ಮಾಡುವೆನೆಂಬ ಅಹಂಕಾರದಿಂದ ಮಾಡಿದ ಭಕ್ತಿ ಇಂತಹುದು.

ನಿಷ್ಠೆಯಿಲ್ಲದ ಭಕ್ತಿ, ಪ್ರೀತಿಯಿಲ್ಲದ ಸತಿಯ ಒಲುಮೆಯಂತೆ, ಅದಕ್ಕಿಂತ ಮಿಗಿಲಾಗಿ "ಊಡದ ಆವಿಂಗೆ ಉಣ್ಣದ ಕರುವ ಬಿಟ್ಟಂತೆ." ಆ ಭಕ್ತಿ ಭಗವಂತ ನಿಗೂ ಬೇಕಿಲ್ಲ; ಭಕ್ತನಿಗೂ ಬೇಕಿಲ್ಲ. ಈ ಅಭಾವಸ್ಥಿತಿಯನ್ನು ಈ ರೂಪಕ ಬಹು ಮನೋಹರವಾಗಿ ಸಜೀವವಾಗಿ ಚಿತ್ರಿಸಿದೆ. ಭಗವಂತನಿಗೆ ಕರುಣೆ ಯುಂಟಾದರೂ ಸರಿಯೆ, ಭಕ್ತನ ಪ್ರಾರ್ಥನೆಯೆ ಉತ್ಕಟವಾದರೂ ಸರಿಯೆ, ಸಿದ್ಧಿ ದೊರೆತೆ ದೊರೆಯುವುದು. ತನ್ನ ಕರುವಿಗೆ ಹಾಲೂಡಬೇಕೆಂಬ ತುಡಿತ ಹಸುವಿಗೆ ಬಂದರೆ ಆಗ ತಾಯಿಯೆ ಕರುವಿನೆಡೆಯನ್ನರಸಿಕೊಂಡು ಬರುತ್ತದೆ. ಹುಲಿರಾಯನ ಅಡ್ಡಿಯನ್ನೂ ದಾಟಿಕೊಂಡು, ಗಿರಿದರಿಗಳನ್ನೂ ಹಾರಿಬಂದು, ಕರುವಿಗೆ ಹಾಲು ಬೇಡದಿದ್ದರೂ ಅದೇ ಆ ಮಗುವಿನ ಮೈಯನ್ನು ನಾಲಗೆ ಯಿಂದ ನೆಕ್ಕುತ್ತ ನೆಕ್ಕುತ್ತ ಅದಕ್ಕೆ ಹಾಲಿನಾಸೆಯನ್ನುಂಟುಮಾಡುತ್ತದೆ. ಹಾಗೆ ಮಾಡಿ ತನ್ನ ಕೊರೆದ ಕೆಚ್ಚಲನ್ನು, ಅದರ ಬಾಯಿಗೆ ಊಡುತ್ತದೆ. ಹೀಗಿರದೆ ಕರುವಿಗಾದರೂ ಹಸಿವೆ ಇದ್ದರೆ, ತನ್ನ ಅಂಬೆಯ ಹಂಬಲವಿದ್ದರೆ 'ಅಂಬಾ, ಅಂಬಾ' ಎಂದು ಕರುಳಿರಿಯುವಂತೆ ಅರಚಿ ಅರಚಿ ಎಷ್ಟೆ ದೂರದಲ್ಲಿ ತನ್ನ ತಾಯಿದ್ದರೂ ಎಡೆತಡೆಯನ್ನೆಲ್ಲ ದಾಟಿಹೋಗಿ, ಇಲ್ಲವೆ ತನ್ನೆಡೆಗೇ ಆಕೆಯನ್ನು ಸೆಳೆದುಕೊಂಡು, ಗೌಳಿಗನ ಕೃಪಣತೆಯನ್ನೂ ಹಿಳಿದು ಹಾಲನ್ನು ಸವಿಯಬಲ್ಲದು; ಹಸು ತನ್ನನ್ನು ಒದೆ ಒದೆದರೂ ಅದನ್ನು ಬಿಡದೆ ಕಾಡಿ ಬೇಡಿ ಹಾಲನ್ನು ಹೀರಬಲ್ಲದು. ಆದರೆ, ಆದರೆ....ಹಸುವೂ ಅಲ್ಲೆ ಇದ್ದು, ಕರುವೂ ಆ ಬಳಿಯೇ ಇದ್ದು ಅದಕ್ಕೂ ಬೇಡ ಇದಕ್ಕೂ ಬೇಡ ಎಂಬಂತಾದರೆ? ಗೌಳಿಗನ ಪಾಡೇನಾಗಬೇಕು. ಹಾಲು ಕರೆದುಕೊಳ್ಳಲೆಂದು ತಂಬಿಗೆ ಹಿಡಿದು ನಿಂತ ಮುಗ್ಧ ಗೃಹಿಣಿಯ ಪಾಡೇನಾಡಬೇಕು? ಹಾಲಿಗಾಗಿ ಕಾದು ಕುಳಿತ ಮಕ್ಕಳ ಪಾಡೇನಾಗಬೇಕು? ಆ ದೃಶ್ಯವಾದರೂ ಹೇಗಿರುತ್ತೆ!....ಮರ್ಕಟ ಶಾಬಕ ನ್ಯಾಯವಾದರೂ ಸರಿಯೆ, ಮಾರ್ಜಾಲ ಶಾಬಕ ನ್ಯಾಯವಾದರೂ ಸರಿಯೆ—ಭಕ್ತ ಭಕ್ತವಂತ ಸಮಾಗಮವಾಗುತ್ತದೆ ಎನ್ನುತ್ತಾರೆ. ಆದರೆ ಈ 'ಊಡದ ಆವು ಉಣ್ಣದ ಕಱು' ನ್ಯಾಯವಾದರೆ? ಎಷ್ಟು ಚೇತನಗಳ ಗತಿ ಇದೆ ಆಗಿಲ್ಲ? ಭಕ್ತ ಭಗವಂತರ ಮಾತೇಕೆ? ಸಂಸಾರದಲ್ಲಿ ಗಂಡಹೆಂಡಿರಾಗಿರು

ವರ ಮಾತೇನು ? ಎಷ್ಟು ನಿರ್ಭಾಗ್ಯರ ಬದುಕು ಹೀಗಿಲ್ಲ !

ಭಗವತ್ ಕೃಪಾಸಾನ್ನಿತರಾಗಿದ್ದ ಬಸವಣ್ಣನವರು ಬಿಜ್ಜಳನ ಮಂತ್ರಿಯಾಗಿದ್ದ ಮಾತ್ರದಿಂದಲೇ ಅವನ ಹಂಗಿಗೇಕೆ ಪಕ್ಕಾಗುತ್ತಾರೆ ? ಹಣಕ್ಕಾಗಿ ಅವನನ್ನು ಏಕೆತಾನೆ ಗೋಗರೆದಾರು ? ಯಾರೊ ಹಾಗೆ ಹಂಗಿಸಿರಬೇಕು. ಅದಕ್ಕೆ ಅವರ ನಿಶಿತವಾದ ಉತ್ತರವಿದು !

"ಊರಮುಂದೆ ಹಾಲಹಳ್ಳ ಹರಿಯುತ್ತಿರಲು
ಓಜೆಯಾವಿನ ಬೆನ್ನಲ್ಲಿ ಹರಿಯಲೇಕೆ !"

ಊರಮುಂದೆ ಹಾಲುಹೊಳೆಯೆ—ಕೆರೆಯಲ್ಲ, ಬಾವಿಯಲ್ಲ—ಹರಿಯುತ್ತಿರುವಾಗ ಹಾಲಿಗಾಗಿ ಓರೆ ಆವಿನ ಬೆನ್ನಲ್ಲಿ ಹರಿಯುವುದಾದರೂ ಏಕೆ ? ಭಗವಂತನ ಕಾರುಣ್ಯ ಸಾಗರದ ವೀಚೀಮಾಲೆಗಳು ಅನಂತವಾಗಿ ಅಪಾರವಾಗಿ ಸೇವಿಸುತ್ತಿರುವಾಗ ರಾಜ ಬಿಜ್ಜಳನ ದರಿದ್ರ ಕೃಪೆಯ ಗುಡ್ಡ ಹಸುವಿನ ಹಿಂದೆ ಅದರ ಹಾಲಿಗಾಗಿ ಪಾತ್ರೆ ಹಿಡಿದು ಅದರ ಕೆಚ್ಚಲು ಸೊರವು ಬಿಡುವುದನ್ನೆ ಕಾಯುತ್ತ, ಅದರ ಒತ್ತಗಳನ್ನೂ ಹಾಲಿಗಾಗಿ ತಾಳಿಕೊಳ್ಳುತ್ತ ಹೋಗಬೇಕಾದುದೇಕೆ? ಒತ್ತನ್ನವನ್ನೆ ಹಾಲೆಂದು ಭಾವಿಸಿಕೊಳ್ಳಬೇಕಾದ ದುರಂತವೇಕೆ ?

ಭಕ್ತ ಮೇಲಾಗಲು ಬಯಸದೆ "ಕೀಳಾಗಲು" ಪ್ರಯತ್ನಿಸುತ್ತಾನೆ. ಕೀಳಾಗದಿದ್ದರೆ ಶಿವಕೃಪಾಧೇನು ಹಾಲುಕೊಡದು :

"ಮೇಲಾಗಲೊಲ್ಲೆನು, ಕೀಳಾಗಲಲ್ಲದೆ ;
ಕೀಳಿಂಗಲ್ಲದೆ ಪಯನ ಕರೆಯವುದೆ !"

ನಿಂತುಕೊಂಡವರಿಗೆ ಹಾಲೆಲ್ಲಿ ಬಂದೀತು. ಬಾಗಿಕುಳಿತು ಕರೆದವರೆ ಮಾತ್ರ ದೊರೆಯುತ್ತದೆ. ಕೀಳಾಗಬೇಕು, ಆದರೆ ಎಂತಹ ಕೀಳು ? ಹಾಲೂಡುವ ಹಸುವಿನ ಬಳಿ ಬಾಗುವ ಕರುವಿನ 'ಬಾಗು,' ಹಾಲು ಕರೆದುಕೊಳ್ಳುವ ಗೌಳಿಗನ 'ಕೀಳು,' ನೀರು ತುಂಬಿಕೊಳ್ಳಲು ತನ್ನ ಬಾಯನ್ನು ಅಡಿಮಾಡಿಕೊಳ್ಳುವ ಬಿಂದಿಗೆಯ 'ಕೀಳು.' ಶಿವಕಾಮಧೇನುವಿನ ಮುಂದೆ 'ಕೀಳಾದರೂ' ಮೇಲಾಗುತ್ತಾರೆ; 'ಕೀಳಾದರೇ' ಮೇಲಾಗುವುದಾದರೂ ಕೂಡ. ಆದರೆ ಬಾಗುವುದು ಯಾರಮುಂದೆ ಎಂಬುದರ ಬಗ್ಗೆ ತಪ್ಪು ತಿಳುವಳಿಕೆ ಇರುವ ನಾವು ಎಲ್ಲೆಲ್ಲೊ ಮಂಡಿಗಾಲಿಟ್ಟು ಬೆನ್ನು ಬಾಗುತ್ತಿದ್ದೇವೆ. ಶಿವದ ಬಳಿ ಬಾಗದೆ ನಾವು ಉಳಿದೆಲ್ಲೆಡೆಯೂ ಬಾಗುತ್ತಿದ್ದೇವೆ. ಅಲ್ಲಿ ಬಾಗಿದ ತಲೆ ಮತ್ತೆಲ್ಲೂ ಬಾಗಬೇಕಿಲ್ಲ "ಇಲ್ಲಿ

ಬಾಗಿದ ಮುಡಿಯು ಮತ್ತೆಲ್ಲು ಬಾಗದು" ಎಂಬ ಶ್ರೀ ಪುತಿನ ಮಾತನ್ನು ಇಲ್ಲಿ ನೆನೆಯಬಹುದು.

ಪಶುರೂಪಕದಲ್ಲಿ ಕೊನೆಯದಾಗಿ ಬಸವಣ್ಣನವರು ತಮ್ಮನ್ನು ಶಿವನ 'ಧರ್ಮದ ಕವಿಲೆ' 'ಉಂಡಿಗೆಯ ಪಶು' ಎಂದುಕೊಂಡಿರುವುದನ್ನು ಕಾಣುತ್ತೇವೆ. ಪ್ರಾರಂಭದಲ್ಲಿ ಕೇವಲ ಪಶುವಾಗಿದ್ದ ಈ ಭಕ್ತ ಪಶುಪತಿಯ ಕೃಪೆಯಿಂದ ಕಡೆ ಕಡೆಗೆ ಅವನ 'ಧರ್ಮದ ಕವಿಲೆ' ಯಾಗುತ್ತಾನೆ, ಅವನ 'ಉಂಡಿಗೆಯ ಪಶು' ವಾಗುತ್ತಾನೆ. ಇವನೆ ಅವನ ಗುರುತು ; ಅವನಿರುವೆಡೆಯಲ್ಲಿ ಇವನಿರಬೇಕು ; ಇವನ ಗುರುತಿನಿಂದಲೆ ಅವನನ್ನು ಕಾಣುತ್ತೇವೆ. ಹೀಗೆ ಪಶುಚಿತ್ರ ಎಂತಹ ಉನ್ನತೋನ್ನತ ಶಿಖರವನ್ನು ಏರಿದೆ ಇಲ್ಲಿ !

ಸೃಷ್ಟಿಕರ್ತನಾದ ಕೂಡಲಸಂಗನನ್ನು ಪೂಜಿಸಿಯೂ ಅನ್ಯದೈವಕ್ಕೆ ಎರಗುವವರನ್ನು ಬಸವಣ್ಣನವರು ಹತ್ತಾರು ರೂಪಕಗಳಲ್ಲಿ ತೀವ್ರವಾಗಿ ಟೀಕಿಸಿದ್ದಾರೆ. ಇಲ್ಲಿ ಅದಕ್ಕೆ ಮತ್ತೊಂದು ನಿದರ್ಶನವನ್ನು ತೋರಿಸಬಹುದು.

"ಕರ್ತಾರನ ಪೂಜಿಸಿ ಕ್ಷು[ಚ್ಛಿ]ತ ದೈವಕ್ಕೆರಗುವರು :
ಕತ್ತೆ ಕುದುರೆಗೆ ಹುಟ್ಟಿದ ಹೇಸರನಂತೆ !
ಭಕ್ತರೆಂತೆಂಬೆ, ಭೃತ್ಯರೆಂತೆಂಬೆ, ಶರಣರೆಂತೆಂಬೆನವರ ?
ಎರಡುಳ್ಳ ಪ್ರಪಂಚಿಗಳ ಮೆಚ್ಚ ಕೂಡಲಸಂಗಮದೇವ !"

ಈ ರೂಪಕಕ್ಷರಕ್ಕೆ ಯಾವ ವ್ಯಾಖ್ಯಾನವೂ ಸಪ್ಪೆ ! ನವ್ಯಕಾವ್ಯದ ಪ್ರತಿಮೆಗಳೂ ಸಪ್ಪೆ !

ಲಿಂಗಧಾರಿಗಳಾದ ಮಾತ್ರದಿಂದಲೆ ಜಂಗಮರಾದಂತಾಗುವುದಿಲ್ಲ ಎಂಬ ಭಾವವನ್ನು ಹೇಗೆ ಶಕ್ತಿಶಾಲಿಯಾಗಿ ಹೇಳಿದ್ದಾರೆಂದು ಹಿಂದಿನ ಕೆಲವು ರೂಪಕಗಳಲ್ಲಿ ಕಂಡಿದ್ದೇವೆ. ಇಲ್ಲಿ ಮತ್ತೊಂದು ಪ್ರಾಣಿಯ ಹೆಸರನ್ನು ನೋಡುವ ಸಲುವಾಗಿ ಅಷ್ಟೇನೂ ಪರಿಣಾಮಕಾರಿಯಲ್ಲದ ರೂಪಕವನ್ನು ನೋಡಬಹುದು.

"ಕೊಳನ ತಡಿಯಲ್ಲೊಂದು ಹೊಳಸು ಕುಳ್ಳಿರ್ದರೇನು
ಗಳಹಂಸೆಯಾಗಬಲ್ಲುದೆ ?"

ಈ ಚಿತ್ರವೆ ಸಜೀವವಾಗಿ ಮತ್ತೊಂದೆಡೆ ಬರುತ್ತದೆ :

"ಮೀಂಬುಲಿಗನ ಹಕ್ಕಿಯಂತೆ ನೀರ ತಡಿಯಲ್ಲಿದ್ದು
ಮೂಗುಹಿಡಿದು ಧ್ಯಾನವ ಮಾಡುವರಯ್ಯಾ.
ಬಿಟ್ಟಮಂಡೆವೆರಸಿ ಬಾಯಿಮಿಡುಕಿಸುತ

ಕಣ್ಣ ಮುಚ್ಚಿ ಬೆರಳನೆಣಿಸುವರಯ್ಯಾ—
ನಿಮ್ಮ ಕೈಯಲ್ಲಿ ಕಟ್ಟಿದ ದರ್ಭೆಯಹುಲ್ಲು
ಕೂಡಲಸಂಗನನಱಿಯದೆ ಮೊಱೆಯಿಡುವಂತೆ !”

ನೀರತಡಿಯಲ್ಲಿ ಮೆಲ್ಲಮೆಲ್ಲಗೆ ಒಂದು ಕಾಲನ್ನು ಮೇಲೆತ್ತುತ್ತ ಮುಂದಿಡುತ್ತಾ ಮತ್ತೊಂದರ ಮೇಲೆ ನಿಂತು ‘ಧ್ಯಾನ’ ಮಾಡುತ್ತ, ಜುಳಕ್ಕೆಂದೊಡನೆಯೆ ಕಂಡ ಮೀನನ್ನು ‘ಗೊಳಕ್ಕ’ನೆ ನುಂಗಿಕೊಳ್ಳುತ್ತಾ ಹೋಗುವ ಬಕಪಕ್ಷಿಯ ಚಿತ್ರ ಬಹು ಸುಂದರವಾಗಿದೆ. ನೀರತಡಿಯಲ್ಲಿ ಕುಳಿತು ಒಳಗೇನನ್ನೊ ಧ್ಯಾನಿಸುತ್ತ ಕಾಣುತ್ತ, ಹೊರಗೇನೊ ಜಪಿಸುತ್ತ ಗೊಣಗುತ್ತ ಕಣ್ಣುಮುಚ್ಚಿ ಬೆರಳೆಣಿಸಿ ‘ಬಕಧ್ಯಾನ’ ಮಾಡುವ ಜನರನ್ನು ಮೇಲಿನ ಚಿತ್ರಕ್ಕಿಂತ ಸುಂದರವಾಗಿ ಬೇರೊಂದು ಬಗೆಯಿಂದ ಮನದಟ್ಟು ಮಾಡಿಕೊಡಬಹುದೆ ?

ಹಂದಿಯ ಚಿತ್ರ ಹಿಂದೆ ಸ್ವಲ್ಪ ಪರಿಚಯವಾಗಿದೆ. ಇಲ್ಲಿ ಇನ್ನೊಂದು ವಚನದಲ್ಲಿ ಅದರ ಪ್ರಸಿದ್ಧ ಗುಣವನ್ನು ರೂಪಕವಾಗಿ ಬಳಸಿಕೊಂಡಿರುವುದನ್ನು ಕಾಣಬಹುದು :

“ಅವ್ರುಂಡುದನುಣಬಂದ ಹಂದಿಯ ಬಾಳುವೆಯವರ ಕಂಡು
ಅಸು ಮಱುಗುವೆನಯ್ಯಾ, ಕೂಡಲಸಂಗಮದೇವಾ.”

ಉಂಡುದು ತಮ್ಮೊಡನೆ ಬರುತ್ತದೆ ಎಂದು ಸಂದೇಹಪಡುವ ಮಾನವರನ್ನು ಮೇಲಿನ ಮಾತಿನಿಂದ ಚುಚ್ಚುತ್ತಾರೆ. ಉಂಡುದು “ಅವ್ಯಯ”ವಾಗಿ ಹೋಗುತ್ತದೆ. ಅದನ್ನೇ ಚಿಂತಿಸುವ ಚೇತನರು ಉಂಡುದನ್ನು ಉಣಬಂದ ಹಂದಿಯಂತೆ. ಹಾಗೂ ಭವಿ ಮಾಡಿದ ಪಾಕವನ್ನು ಲಿಂಗಕ್ಕೆ ಅರ್ಪಿಸುವುದಾಗಲಿ, ಸಂಗನ ಶರಣರು ಒಕ್ಕುದನುಂಡು ಅನ್ಯವನ್ನಾಚರಿಸಿದರಾಗಲಿ ಬಸವಣ್ಣನವರಿಗೆ ಸಹಿಸಲಾಗುವುದಿಲ್ಲ. ಹಾಗೆ ಮಾಡುವುದು ‘ಸೂಕರ ಶುಚಿರ್‌ಭೂತತೆ’ಯಂತಾಗುತ್ತದೆ ಎನ್ನುತ್ತಾರೆ. ಮೈಯೆಲ್ಲ ಮಿಂದರೂ ಹೇಸಿಗೆ ತಿನ್ನುವುದು ತಪ್ಪುವುದಿಲ್ಲವಲ್ಲ !

ಭಗವಂತನ ಕರುಣೆ ತಪ್ಪಿದ ಭಕ್ತನ ಸ್ಥಿತಿಯನ್ನು “ಜಲವ ತಪ್ಪಿದ ಮತ್ಸ್ಯದಂತೆ” ಎಂಬ ಸಾಂಪ್ರದಾಯಿಕವಾದ, ಆದರೂ ಸೊಗಸಾದ ರೂಪಕದಿಂದ ಚಿತ್ರಿಸುತ್ತಾರೆ. ಮೀನಿನ ರೂಪಕ ಬಂದಿರುವುದು ಇವರಲ್ಲಿ, ನನಗೆ ತಿಳಿದಂತೆ, ಇಲ್ಲೊಂದೆ ಕಡೆ. ಭಕ್ತಿಯನ್ನು ಮಾಡುವ ಭಕ್ತನ ಮನಸ್ಸು ಒಂದಿನಿತು ಊನ

ವಾದರೂ ಹಾಳಾಗುತ್ತದೆ. ಅದು ಹೇಗೆಂದರೆ :

ಚೀಳಿಂಗೆ ಬಸಿರಾಯಿತ್ತೆ ಕಡೆ;
ಬಾಳೆಗೆ ಫಲವಾಯಿತ್ತೆ ಕಡೆ, ನೋಡಾ !
...........................
ಮಾಡುವ ಭಕ್ತಂಗೆ ಮನಹೀನವಾದರೆ ಆದೆ ಕಡೆ..."

ಎಂದು ಹೇಳುತ್ತಾರೆ. ಅಷ್ಟಾಗಿ ಸಾದೃಶ್ಯಶ್ರೀ ಇಲ್ಲವೆಂದು ಕಂಡರೂ ಆಗ ಬೇಕಾದ ಪರಿಣಾಮವಂತು ಈ ರೂಪಕದಿಂದ ಬಹು ಸುಂದರವಾಗಿಯೇ ಆಗುತ್ತದೆ. ಪ್ರಾಯಶಃ ಭಕ್ತರಲ್ಲದವರಿಗೆ ಮನಹೀನತೆ ಶೋಭಾಯಮಾನವೇ ಆಗ ಬಹುದು, ಉಳಿದ ಗಿಡಮರಕ್ಕೆ ಹಣ್ಣು ಬಂದಂತೆ; ಉಳಿದ ಪಶುಪ್ರಾಣಿಗಳಿಗೆ ಬಸಿರೊದಗಿದಂತೆ. ಆದರೆ ಭಕ್ತರಿಗೆ ಅದು ಸಾವು ; ಸುಖದ ರೂಪದ ಮರಣ.

ಭಕ್ತಿಯ ಪ್ರಪಂಚದಲ್ಲಿ ಎಲ್ಲಕ್ಕಿಂತಲೂ ಮುಖ್ಯವಾಗಿ ಶ್ರದ್ಧೆ ಅತ್ಯವಶ್ಯ. ಅದೊಂದಿದ್ದರೆ ಏನಾದರೂ ಆಗುತ್ತದೆ. ಕುಂಡಲಿಗ ಕೀಟವನ್ನು ತಂದು ಅದನ್ನು ತನ್ನಂತೆ 'ಮಾಡು'ತ್ತದೆ. ಆದರೆ, ಮನುಷ್ಯ ಯಾವುದರಲ್ಲೂ ನಂಬದೆ ಯಾವ ದಿವ್ಯ ಸ್ಪರ್ಶದಿಂದಲೂ ತನ್ನ 'ಮುನ್ನಿನ ರೂಪವನ್ನು' ಬಿಡದೆಯೆ ಇದ್ದಾನೆ.

"ಕುಂಡಲಿಗನೊಂದು ಕೀಡೆಯ ತಂದು ತನ್ನಂತೆ ಮಾಡಿತಲ್ಲ !
ಎಲೆ ಮಾನವ, ಕೇಳಿ ನಂಬಯ್ಯ, ನೋಡಿ ನಂಬಯ್ಯ, ಎಲೆ ಮಾನವ !"

ಈ ಕೀಟಕುಂಡಲಿಗಳಾದರೂ ಆದರ್ಶವಾಗಬಾರದೆ ಈ ಪರಿಷ್ಕೃತ ಪ್ರಾಣಿಗೆ ? ನಂಬದಿದ್ದರೂ ಬೇಡ, ಅಪನಂಬಿಗೆಯಾದರೂ ಇರಲಿ. ಅಂದರೆ, 'ನೇತಿ' 'ನೇತಿ' ಎನ್ನುವ ಅನ್ವೇಷಣಮಾರ್ಗ, ಯಾವುದರಿಂದ ದೂರ ಹೋಗಬೇಕೆಂದು ಪ್ರಯತ್ನಿಸುವುದರಲ್ಲೆ ಅದರ ಹತ್ತಿರವೆ ಹೋಗುತ್ತೇವೆಯೋ ಅಂತಹ ಮಾರ್ಗ— ಅದಾದರೂ ಇದ್ದರೆ ಉತ್ತಮ. ಭಗವಂತನಿಂದ ದೂರ ಹೋಗಬೇಕು, ಅವನಿಂದ ತಪ್ಪಿಸಿಕೊಳ್ಳಬೇಕು ಎನ್ನುವ ನಿರಂತರ ಧ್ಯಾನದಿಂದ ಅವನ ಹತ್ತಿರವೆ ಹೋಗಿರುತ್ತೇವೆ, ಇಲ್ಲವೆ ಅವನೆ ನಮ್ಮ ಹತ್ತಿರ ಬಂದುಬಿಟ್ಟಿರುತ್ತಾನೆ, ಭ್ರಮರವನ್ನು ನಿವಾರಿಸಲು ಮಾಡುವ ಸತತ ಪ್ರಯತ್ನದಿಂದಲೆ ಅಥವಾ ಅದು ಪಡುವ ಭೀತಿಯಿಂದಲೆ ಕೀಟವು ಭ್ರಮರನಾಗುವಂತೆ. ಸಿದ್ಧಿಯು ಬಂದೆ ಬರುವುದಾದರೆ ಹೇಗೆ ಬಂದರೇನಂತೆ ? ಭಗವನ್ನಿವಾರಣಯತ್ನವೆ ಅನ್ವೇಷಣವಾಗುತ್ತದೆ.

"ಎನ್ನಯ್ಯಾ, ನಿಮ್ಮನರಸುತಲಿದ್ದೇನೆ;
ಎನ್ನಯ್ಯಾ, ಕೀಟಧ್ಯಾನದಲ್ಲಿ ನಿಮ್ಮನರಸುತಲಿದ್ದೇನೆ!
ಎನ್ನಯ್ಯಾ, ಕೂಡಲಸಂಗಮದೇವಾ,
ಭ್ರಮರನ ಲೇಸಿನಂತೆ ಕಾರುಣ್ಯವ ಮಾಡು;
ತಪ್ಪೆನ್ನದು ಶಿವಘೋ, ಶಿವಘೋ!"

'ನಾನೇನೊ ಕೀಟದಂತೆ ಭೀತನಾಗಿ ಓಡುತ್ತಿರುವೆ; ಅದೂ ಧ್ಯಾನವೆ, ಪ್ರೀತಿಯೆ, ಅರಸಾಟವೆ. ಆದರೆ ನೀನು ಮಾತ್ರ ಭ್ರಮರದ ಲೇಸನ್ನು ಕರುಣಿಸಬಾರದೆ? ತಪ್ಪು ನನ್ನದು; ತಪ್ಪನ್ನೆ ಅಪ್ಪಿಕೊಳ್ಳುವ ಒಪ್ಪಿಕೊಳ್ಳುವ "ಭ್ರಮರನ ಲೇಸ ಕಾರುಣ್ಯ" ಎಲ್ಲಿ ಹೋಯಿತು? ಶಿವಘೋ, ಶಿವಘೋ!!' ಎಂದು ಅಣ್ಣನವರು ಮೊರೆಯಿಡುತ್ತಾರೆ.

ಬಸವಣ್ಣನವರ ಆರ್ದ್ರಹೃದಯ-ಭೂತದಯೆಯನ್ನು ಚಿತ್ರಿಸುವ ಹಸು ಕರು ಕಳ್ಳರ ಪ್ರಸಂಗ ನಮಗೆಲ್ಲ ತಿಳಿದೆ ಇದೆ (—ಬಸವರಾಜದೇವ ರಗಳೆಯಲ್ಲಿ ಹರಿಹರ ಚಿತ್ರಿಸಿರುವುದು). ಅದಕ್ಕೆ ಪೂರಕವಾಗುವ ಒಂದು ಚಿತ್ರ ಇದೆ ಇಲ್ಲಿ:

"ಕಱುವನಗಲಿಸಿ ತಾಯ ಮಱುಗಿಸಿ
ಮೊಲೆಹಾಲ ಕಱೆದುಣಬೇಡವೊ."

ಕೊನೆಯದಾಗಿ, ಬಸವಣ್ಣನವರ ವಚನಗಳಲ್ಲಿ ಹಾವಿನ ರೂಪಕ ಬಂದಿರುವ ಹಲವು ಬಗೆಗಳನ್ನು ಕಾಣಬಹುದು. ಆದಿಶೇಷನಿಂದ ಹಿಡಿದು ನೀರುಹಾವಿನ ತನಕ ನೂರಾರು ಬಗೆಯಿರುವಂತೆ ರೂಪಕಸೃಷ್ಟಿಯಲ್ಲೂ ಸರ್ಪವು ಹಲವಾರು ಬಗೆಯ ವಸ್ತುವಾಗಬಲ್ಲುದು. ಅವರ ವಚನಗಳಲ್ಲಿ ಹಾವಿನ ಹತ್ತಾರು ಬೇರೆ ಬೇರೆಯ ರೂಪಕಗಳನ್ನು ಕಾಣುತ್ತೇವೆ. ಆದರೂ ಒಂದೊಂದೂ ಸುಂದರವಾಗಿದೆ.

ತಿಳಿಯದವರನ್ನು ಮೋಸಗೊಳಿಸುವುದು ಬಹು ಸುಲಭ. ಅಂತಹವರು ಡಾಂಭಿಕ ಭಕ್ತರನ್ನು ಕಂಡರೆ ಮೋಸಗೊಳ್ಳದೆ ಇರುತ್ತಾರೆಯೇ? ಅವರು ಆ ಭಕ್ತರ ವೇಷಘೋಷಗಳನ್ನು ಕಂಡು ಬೆಬ್ಬಳಿಸಿ ಹೋದಾರು. ಆದರೆ ಚೆನ್ನಾಗಿ ಅರಿತವರು ಬಲ್ಲರು ಅವರನ್ನು. ಅದನ್ನು ವ್ಯಕ್ತಗೊಳಿಸಲು ಬಸವಣ್ಣನವರು ಈ ರೂಪಕವನ್ನು ಕೊಡುತ್ತಾರೆ:

"ಅಱಿಯದವರಿಗೆ ಒಳ್ಳೆ ಹೆಡೆಯೆತ್ತಿ ಆಡುವಂತೆ ಬೊಳ್ಳೆಗನ ಭಕ್ತಿ."

ನೀರುಹಾವು ಮಾರಕವೇನೂ ಅಲ್ಲ. ಆದರೂ ಹೆದರಿಸಬಲ್ಲದು; ಅಲ್ಲ, ಅದನ್ನೂ ಕಂಡು ಹೆದರಬಲ್ಲರು—ಹುಲುಸರವಿಯಲ್ಲಿ ಹಾವನ್ನು ಕಾಣುವ ಜನ!

ಒಳ್ಳೆ–ಬೊಳ್ಳೆಗನ ಭಕ್ತಿ ಲೋಗರನ್ನು ಹೆದರಿಸಬಲ್ಲದು ; ಗಾರುಡಿ ಜಂಗಮ ನನ್ನಲ್ಲ ! ಆದರೆ ಯಾರು ಹಾವು ಯಾರು ಒಳ್ಳೆ–ಯಾರಿಗೆ ಗೊತ್ತು ? ಒಬ್ಬೊಬ್ಬರು ಒಂದೊಂದು ಒಳ್ಳೆಗೆ ಹೆದರುತ್ತಿದ್ದಾರೆ !

ಆದರೂ ಹಾವಿನೊಡನೆ ಸರಸವುಂಟೆ ? ಯಾವ ಹಾವಾದರೇನು ; ವಿಷ ಮಾತ್ರ ಬೇರೆಯಲ್ಲ ; ಅಷ್ಟೇ ಅಲ್ಲ ವಿಷವಿಲ್ಲದಿಲ್ಲ.

"ಸಾರ : ಸಜ್ಜನರ ಸಂಗವ ಮಾಡುವುದು ;
ದೂರ : ದುರ್ಜನರ ಸಂಗ ಬೇಡವಯ್ಯ
ಆವ ಹಾವಾದರೇನು ? ವಿಷವೊಂದೆ :
ಅಂತವರ ಸಂಗ ಬೇಡವಯ್ಯ !"

ಎಲ್ಲಾ ದುಷ್ಟರೂ ಒಂದೆ, ಸ್ವಲ್ಪ ಹೆಚ್ಚು, ಸ್ವಲ್ಪ ಕಡಿಮೆ, ಅಷ್ಟೆ—ಹೀಗೆ ಅನಿಸುತ್ತದೆ. ಇದ್ದಕ್ಕಿದ್ದಂತೆ ಹಾವು ದುಷ್ಟತನದ ಸಂಕೇತವಾಗುತ್ತದೆ.

ಈ ವಚನದ ಮಾತಿನ ಧೋರಣೆಯಲ್ಲಿ ವ್ಯಕ್ತವಾಗಿರುವ ಅತಿಶಯತೆಯನ್ನು ಗಮನಿಸಬಹುದು. ಸಜ್ಜನರ ಸಂಗ ಸಾರ, ದುರ್ಜನರ ಸಂಗ ದೂರ ಎಂದಷ್ಟೆ ಹೇಳಿದ್ದರೆ ಸೂಕ್ತಿಯಾಗಬಹುದಿತ್ತು. ಕಾವ್ಯತ್ವ ಒದಗುತ್ತಿರಲಿಲ್ಲ. ಇಲ್ಲಿಯ ಮಾತಿನ ಧಾಟಿಯಲ್ಲೆ ಒಂದು ವಿಶೇಷ ಶಕ್ತಿಯಿದೆ. 'ಸಾರ !' 'ದೂರ !' ಎಂದು ತಮ್ಮ ಹೇಳಿಕೆಯನ್ನು ಮೊನಚು ಮಾಡಿ ಅವಕ್ಕೆ ಶಕ್ತಿ ತಂದಿದ್ದಾರೆ. ಮಾತಿಗೆ ಮೊನಚು ಬಂದಿದೆ.

ಭಗವಂತನ ಭಕ್ತರು ಎಲ್ಲರೂ ಒಂದೇ ಬಗೆಯಾಗಿರುವುದಿಲ್ಲ. ಒಬ್ಬೊಬ್ಬರ ಸ್ವಭಾವ ಬೇರೆ ಬೇರಿರುವಂತೆಯೆ ಭಕ್ತ ಭಕ್ತರಲ್ಲೂ ಅಂತರವಿದೆ. ಕೆಲವರು ಮೌನಿಗಳು, ಮತ್ತೆ ಕೆಲವರು ಕೋಡಂಗಿಯಾಟವಾಡುವಂತೆ ತೋರುವವರು; ಒಬ್ಬರು ಅನಾಸಕ್ತರು, ಮತ್ತೊಬ್ಬರು ಆರ್ತರು. ಆದರೆ ಭಗವಂತ ಯಾವಾಗಲೂ ನಿಷ್ಕಪಟವಾಗಿರುವ ಭಕ್ತನಿಗೆ ಒಲಿಯುತ್ತಾನೆ. ಅಂತವರು ಕೋಡಂಗಿಯಾಟವಾಡುತ್ತಾರೆ ; ಅದೆ ಮೆಚ್ಚು ಅವನಿಗೆ. ಕಾರಣ ಅವರು ತಮ್ಮ ವಿಕಾರವನ್ನು, ಬಾಲವನ್ನು ಯಾವ ಪಿತಾಂಬರದಿಂದಲೂ ಮುಚ್ಚಿಕೊಳ್ಳುವುದಿಲ್ಲ.

"ಶಿವಶರಣರ ಮುಂದೆ ಆ(ಡಿ)ರಯ್ಯಾ ಹಾ(ಡಿ)ರಯ್ಯಾ !
ಕೋಡಂಗಿಯಾಟವನಾಡಿದ ಭಕ್ತಂಗೆ
ಬೇದಿತ್ತನೀವ ನಮ್ಮ ಕೂಡಲಸಂಗದೇವ !"

ಆದರೆ ಈ ಮುಗ್ಧ ಕೋಡಂಗಿಯಾಟವನ್ನು ಮರ್ಕಟಬುದ್ಧಿಯಾಗಿ ಲೋಕ

ತಪ್ಪು ತಿಳಿಯುವುದು ಸಾಧ್ಯ. ನಿಜಕ್ಕೂ ಅವೆರಡೂ ಒಂದಲ್ಲ. ಈ ಕೋಡಂಗಿ ಮಾಟ ಕೊಂಕಲ್ಲ, ಡೊಂಕು; 'ವಕ್ರತೆ' (ಕಾವ್ಯ ಮೀಮಾಂಸೆಯಲ್ಲಿ ಬಳಸುವ ಅರ್ಥದಲ್ಲಿ). ಆ ಡೊಂಕಿನ ಮೂಲಕವೆ ಲಿಂಗಯ್ಯನಲ್ಲಿಗೆ ದಾರಿ.

"ಹಾವಿನ ಡೊಂಕು ಹುತ್ತಕ್ಕೆ ಸಸಿನ,
ನದಿಯ ಡೊಂಕು ಸಮುದ್ರಕ್ಕೆ ಸಸಿನ :
ನಮ್ಮ ಕೂಡಲ ಸಂಗನ ಶರಣರ ಡೊಂಕು ಲಿಂಗಕ್ಕೆ ಸಸಿನ !"

ಮೇಲಿನ ವಚನದಲ್ಲಿ ಎರಡು ಚಿತ್ರಗಳೂ ಹೇಗೆ ಒಂದು ಘನ ಭಾವನೆಯನ್ನು ಸರಳವಾಗಿ ಧ್ವನಿಸುತ್ತವೆ ನೋಡಬಹುದು. ಈ ವಚನಕ್ಕೆ ಪ್ರಾಯಶಃ ಕಾರಣ ಇದಿರಬಹುದು: ಶರಣರಲ್ಲಿ ನಾನಾ ಜಾತಿಯ ನೀತಿಯವರಿದ್ದರು. ನಂಬಿಯಂತಹ ಭೋಗಿ, ಕಣ್ಣಪ್ಪನಂತಹ ಶೂದ್ರಮುಗ್ಧ ಭಕ್ತ ಎಲ್ಲ ಇದ್ದರು. ನಿಯಮ ಬದ್ಧರಿಗೆ ಅವರೆಲ್ಲ ವಕ್ರ. ಆದರೆ ಆ ವಕ್ರತೆಯೆ ಅವರ ಅನಿವಾರ್ಯ ಸಾಧನ ಮಾರ್ಗವಾಗಿರುತ್ತದೆ. ಡೊಂಕು ಡೊಂಕಾದ ಹಾವು ಹುತ್ತ ಹೊಗದು ; ಸರಳ ರೇಖೆಯಂತೆ ಹರಿದರೆ ನದಿ ಸಾಗರ ಸೇರದು. ಹೀಗೆ ಆ ಎಲ್ಲ ಭಕ್ತವರ್ಗವನ್ನು ಬಸವಣ್ಣನವರು ಸಮರ್ಥಿಸುತ್ತಾರೆ ತುಂಬಾ ಶಕ್ತನಾಗಿ ಅರ್ಥೈಸುತ್ತಾರೆ.

ಆದ್ದರಿಂದ ಭಗವಂತನ ಶರಣರೊಡನೆ—ಅವರು ಹೇಗೆ ಹೇಗೊ ಕಾಣುತ್ತಾರೆ ಎಂಬ ಭಾವನೆಯಿಂದ–ಮರೆತಾದರೂ ಸರಸವಾಡಲು ಬರುತ್ತದೆಯೆ ? ಹಾಗೆ ಮಾಡುವುದು :

"ಹಾವಿನ ಹೆಡೆಗಳ ಕೊಂಡು ಕೆನ್ನೆಯ ತುರಿಸಿದಂತೆ
ಉರಿವ ಕೊಳ್ಳಿಯ ಕೊಂಡು ಮಂಡೆಯ ಸಿಕ್ಕಬಿಡಿಸಿದಂತೆ
ಹುಲಿಯ ಮೀಸೆಯ ಹಿಡಿದುಕೊಂಡು ಒಲಿದುಯ್ಯಾಲೆಯಾಡುವಂತೆ
ಕೂಡಲಸಂಗನ ಶರಣರೆಂದು ಮುಳಿದು ಸರಸವಾಡಿದರೆ
ಸುಣ್ಣ ಕಲ್ಲಮುಡಿಲಲ್ಲಿ ಕಟ್ಟಿಕೊಂಡು ಮಡುವ ಬಿದ್ದಂತೆ !"

ಮೇಲಿನ ಬೆಂಕಿ ರೂಪಕ ಮಾಲೆಯಲ್ಲಿ ಒಂದು ಮೃತ್ಯು ಭಯಂಕರತೆಯನ್ನೆ ಸೃಷ್ಟಿಸಿದ್ದಾರೆ. ಹಾವಿನ ಹೆಡೆಗಳಕೊಂಡು ಕೆನ್ನೆಯ ತುರಿಸಿಕೊಳ್ಳುವುದು ! ಅಬ್ಬ ! ಮುಂದಿನೆರಡು ರೂಪಕ ಚಿತ್ರಗಳಿಗಿಂತಲೂ ಇದು ಒಂದು ರೀತಿಯಿಂದ ಭಯಾನಕವಾಗಿದೆ. ಹಾಗೆಯೆ ಸುಣ್ಣದ ಕಲ್ಲನ್ನು ಮಡಿಲೊಳಗೆ ಕಟ್ಟಿಕೊಂಡು ಮಡುವಿಗೆ ಬೀಳುವುದೂ ಅಷ್ಟೆ, ಮೈಯೆಲ್ಲ ಕುದಿನೀರಿನಲ್ಲಿದ್ದಂತಾಗುತ್ತದೆ. ಈ ರೂಪಕಗಳನ್ನು ಪರಿಭಾವಿಸುವಾಗ, ಕುಮಾರವ್ಯಾಸ ದ್ರೌಪದೀ ಮಾನ

ಭಂಗಕ್ಕೆ ಕೌರವ ಚಿಂತಿಸುತ್ತಿದ್ದಾಗ ವಿದುರನ ಬಾಯಿಂದ ಹರಿಸಿರುವ ರೂಪ ಕಾಗ್ನಿಧಾರೆಯನ್ನು ನೆನೆದುಕೊಳ್ಳುವುದು ಸೂಕ್ತ :

"ಸಿಡಿಲ ಪೊಟ್ಟಣ ಕಟ್ಟಿ ಸೇಕವ
ಕೊಡುವರೇ ?! ಹರನೇತ್ರ ವಹ್ನಿಯೊ
ಳಡಬಳವ ಸುಡಬಗೆದಲಾ ! ಮರುಳೆ ! ಮಹೀಪತಿಯೆ !!
ಹೆಡತಲೆಯ ತುಳಿಸುವರೆ ಹಾವಿನ
ಹೆಡೆಯೊಳಕಟಾ ! ಪಾಂಡುಪುತ್ರರ
ಮಡದಿ ತೊತ್ತಹಳೇ ! ಶಿವಾ !" ಎಂದಳಲಿದನು ವಿದುರ.
"ಕಾಲಕೂಟದ ತೊಟ್ಟಿಗಳಲಿ ಜಲ
ಕೇಳಿಯೇ ! ಕಾಲಾಂತಕನ ದಂ
ಷ್ಟ್ರಾಳಿಯಲಿ ನವಿಲುಯ್ಯಲೆಯ ನೀವಾಡಲಾಪಿರೆ ?
ಕಾಲರುದ್ರನ ಲಳಿಯ ನಾಟ್ಯದ
ಕೇಳಿಕೆಗೆ ನೀವರ್ತಿಕಾಜಿರೆ ?
ಹೋಲದೋ ಶಿವ !" ಎನುತ ಕಂಬನಿದುಂಬಿದನು ವಿದುರ

ಕುಮಾರವ್ಯಾಸನ ಈ ರೂಪಕಮಾಲೆಯಲ್ಲಿನ ಒಂದೆರಡು ಶ್ರೇಷ್ಠ ಚಿತ್ರ ಬಸವಣ್ಣನವರ ವಚನಗಳಲ್ಲಿ ಬಂದಿರುವ ರೂಪಕಗಳನ್ನು ಹೋಲುತ್ತವೆ. ಅವರಿಬ್ಬರ ಭಾವತೀವ್ರತೆ ಉಕ್ತಿಶಕ್ತಿ ಪರಸ್ಪರ ಸಮಾನವಾದದ್ದು, ಭಾವಸಾಹೋದರ್ಯದಿಂದ ಬಂದದ್ದು.*

ಹಾವನ್ನೊ ಹಿಡಿದು ಹಲ್ಲು ಕಳೆದು ಪಳಗಿಸಿ ಹಾವಾಡಿಗರಾಡಿಸುತ್ತಾರೆ. ಅವರು ಅದನ್ನು ಬೀದಿ ಬೀದಿಯಲ್ಲಿ ಆಡಿಸಿ, 'ನಾಗಪ್ಪನಿಗೆ ಏನಾದರೂ ಹಾಲು ಹೊಟ್ಟೆ ಕೊಡಿ' ಎಂದುಕೊಂಡು ಹೋಗುತ್ತಾರೆ. ಇವರು 'ಹಾವತೋಟು ಹವಿಯಬೇಡ' ತಕ್ಕ ಜನ ಎಂದು ತಿಳಿದಿದ್ದೇವೆ. ಸಾಮಾನ್ಯರೂ ಹಾವು ಕಂಡೊಡನೆಯೆ ಭಯಭಕ್ತಿಯಿಂದ ಹಾವಾಡಿಗರಿಗೆ ಕಾಣಿಕೆ ಸಲ್ಲಿಸಿ ಅದಕ್ಕೆ ತನಿಯೆರೆದಂತೆ ಭಾವಿಸುತ್ತಾರೆ. ಅದರಿಂದ ಹಾವಾಡಿಗನ ಹೊಟ್ಟೆ ತುಂಬುತ್ತದೆ. ಪಾಪ ಅವರೆಂಥ ಹವಿಸ್ಸನ್ನು ತಾನೆ ಬೇಡುತ್ತಾರೆ. ಆದರೆ ಭಾಷೆಯನ್ನು ರಾಷ್ಟ್ರೀಯತೆಯನ್ನು, ಧರ್ಮವನ್ನು, ದೇವರನ್ನು, ಅಧ್ಯಾತ್ಮವನ್ನು ಹಿಡಿದಾಡಿಸಿ ಜನದ ಮುಂದೆ ತೋರಿಸಿ ಸ್ವಲಾಭ ಪಡೆಯುವ ಹೀನ ಭಯಂಕರ ಜನ ಯಾವಾಗಲೂ

*'ಬಸವಣ್ಣನವರ ಭಾವಸಹೋದರ ನಾರಣಪ್ಪ' ಎಂಬ ಲೇಖನದಲ್ಲಿ ಈ ಅಂಶವನ್ನು ವಿವರವಾಗಿ ನಿರೂಪಿಸುವೆ.

ಉಂಟು. ಬಸವಣ್ಣನವರು ತಮ್ಮನ್ನೆ ಅಂಥ ಜನರ ಗುಂಪಿಗೆ ಸೇರಿಸಿಕೊಂಡು ಕಟುವಾದ ಔಷಧ ತೆಗೆದುಕೊಂಡಿದ್ದಾರೆ.

“ಮಜ್ಜನಕ್ಕೆರೆವನಲ್ಲದಾನು ಸಜ್ಜನವೆನ್ನಲ್ಲಿಲ್ಲವಯ್ಯ !
ಎನ್ನಲ್ಲೇನನರಸುವೆ ? ನಂಬಿಯೂ ನಂಬದ ಡಂಭಕ ನಾನಯ್ಯ !
ಹಾವ ತೋರಿ ಹವಿಯ ಬೇಡುವಂತೆ,
ಕೂಡಲ ಸಂಗಮದೇವಾ !”
“ಮೂಗಿಲ್ಲದ ವೇಷಕ್ಕೆ ಶೃಂಗಾರವೆ ? ವಿಕೃತವೇಷಧಾರಿಯಾನು !
ಭಂಡನು ಲಜ್ಜೆ ಭಂಡನು !
ಕೂಡಲಸಂಗನ ಶರಣರಲ್ಲಿ ಹಾವತೋರಿ ಹವಿಯ ಬೇಡುವಂತೆ !
“ನೋಡುವರುಳ್ಳರೆ ಮಾಡುವೆ ದೇಹಾರವ !
ಎನಗೊಂದು ನಿಜವಿಲ್ಲ, ಎನಗೊಂದು ನಿಷ್ಪತ್ತಿಯಿಲ್ಲ !
ಲಿಂಗವ ತೋರಿ ಉದರವ ಹೊರೆವ
ಭಂಗಗಾರ ನಾನು ! ಕೂಡಲಸಂಗಮದೇವ !”

ಬಸವಣ್ಣನವರ ಮಹಾಜಾಗ್ರತ ಪ್ರಾಮಾಣಿಕತೆಗೆ ತಮ್ಮ ಭಗವದ್ ರತಿಯೂ ಆಧ್ಯಾತ್ಮಿಕತೆಯೂ ಜನವಂಚನೆಯೆಂಬಂತೆ ಕಂಡು ಬರುತ್ತದೆ. ಅವರಿಗೇ ಹಾಗಾದಲ್ಲಿ ಉಳಿದವರ ಪಾಡೇನು ? ಯಾರೆ ಆಗಲಿ ಅತಿಶಯ ಶಕ್ತಿಗಳನ್ನು ದುರುಪಯೋಗ ಪಡಿಸಿಕೊಳ್ಳುವುದಕ್ಕೆ ನಾಚದಿದ್ದಲ್ಲಿ ಅವರಿಗೆ ಆ ಮಹಾ ಸತ್ತ್ವವೇ ತಕ್ಕ ಶಾಸ್ತಿಯನ್ನು ಮಾಡುತ್ತದೆ ; ಬಸವಣ್ಣನವರೇ ಹೇಳುತ್ತಾರೆ: ಕರಸ್ಥಲದ ಲಿಂಗವೆ ಘಟಸರ್ಪವಾಗುವುದೆಂದು.

ಈ ಲಿಂಗ, ಈ ದಿವ್ಯಸತ್ತ್ವ ದಿಟಕ್ಕೂ ದಿಬ್ಯವೆ–ಪಡೆದವನಿಗೂ, ನೋಡುವವನಿಗೂ. ಆದ್ದರಿಂದ ಮೋಸಗಾರನಾದಾಗ ಭಕ್ತನಿಗೂ ಅದು ಯಮ ಭಯಂಕರ ; ತುಚ್ಛವಾಗಿ ಕಂಡಾಗ ಅನ್ಯನಿಗೂ ಮಾರಕ. ಆದ್ದರಿಂದಲೆ:

“ಸಂಗಸಹಿತ ಶರಣರು ಬಂದರೆ ನಂಬುವುದೆನ್ನ ಮನವು,
ನಚ್ಚುವುದೆನ್ನ ಮನವು !
ಹಾವು ನೇಣೆಂಬ ಭ್ರಾಂತುಳ್ಳನಕ್ಕ ನಾನು ಭಕ್ತನೆಂತೆಪ್ಪೆನಯ್ಯಾ”

ಎಂದು ಹೇಳುತ್ತಾರೆ.

ಹಾವು ಎಲ್ಲೂ ಇಲ್ಲ, ನಮ್ಮಲ್ಲಿಯೆ ಇದೆ ; ವಿಷ ಎಲ್ಲೂ ಇಲ್ಲ ನಮ್ಮೊಳಗೆ ಇದೆ. ಅದರಿಂದ ಪಾರಾಗುವ ದಾರಿಯೆಂದರೆ ಆ ಹಾವು ವಿಷವಮನ ಮಾಡು

ನಂತೆ ಸಾಧಿಸಬೇಕಷ್ಟೆ. ಆದರೆ ನೆನಪಿರಬೇಕು, ಮೊದಲು ಶಿವನಾಮದ ಗಾರುಡಮಂತ್ರವನ್ನು ಕೈಯಲ್ಲಿ ಹಿಡಿದೆ ಇರಬೇಕು ; ಆಮೇಲೆ ಹಲ್ಲು ಕೀಳು ವುದು ; ಅದೂ ಆಗಿ ಶಕ್ತಿ ಇದ್ದರೆ ಅದರ ವಿಷ ಕಾರಿಸುವುದು. ಆದರೆ ಶಿವಕೃಪೆ ಯಿಲ್ಲದೆ ಅಂತರಂಗ ಆತ್ಮಶುದ್ಧಿಗಳಿಲ್ಲದೆ ಬರಿಯ ಕಾಯಕ್ಲೇಶ ಮಾತ್ರವಾದ ತಪಸ್ಸಿನಿಂದ ಆಗಬಹುದಾದ ಸಿದ್ಧಿ ಹೆಚ್ಚೇನೂ ಇಲ್ಲ.

"ಹುತ್ತವ ಬಡಿದೊಡೆ ಹಾವು ಸಾಯಬಲ್ಲುದೆ ಅಯ್ಯಾ ?"
ಅಘೋರತಪವ ಮಾಡಿದೊಡೇನು ?
ಅಂತರಂಗ_ಆತ್ಮಶುದ್ಧಿಯಿಲ್ಲದವರನೆಂತು ನಂಬುವನಯ್ಯ ಕೂಡಲ
ಸಂಗಮದೇವ

ಬಡಿಗೆ ಮುರಿಯುತ್ತದೆ ; ಕೈ ಬೊಬ್ಬೆಯೇಳುತ್ತದೆ ; ಹೆಚ್ಚೆಂದರೆ ಹುತ್ತಕ್ಕೆ ಬಾಸುಂಡೆ ಬಂದೀತು ! ಅಷ್ಟೆ ! ಹಾವು ಸಾಯದು. ಈ ಹಾವು ಒಬ್ಬೊಬ್ಬರ ಸ್ವಭಾವದ ಒಂದೊಂದು ಹುತ್ತದಲ್ಲಿ ಒಂದೊಂದು ರೂಪದಿಂದ ಇರುತ್ತದೆ. ಸಿರಿಗರ ಹೊಡೆದವನಲ್ಲಿ ಅದು ಸಾಧಾರಣ ಹಾವಾಗಿರುವುದಿಲ್ಲ. ತಕ್ಕ ಮಂತ್ರ ವಾದಿ—ಬಡತನ ಎಂಬ ಮಂತ್ರವಾದಿ—ಹೋದರೆ ಪಕ್ಕನೆ ಅವನು ನುಡಿಯು ತ್ತಾನೆ.

"ಹಾವು ತಿಂದವರ ನುಡಿಸಬಹುದು :
ಗರಹೊಡೆದವರ ನುಡಿಸಬಹುದು :
ಸಿರಿಗರ ಹೊಡೆದವರ ನುಡಿಸಲುಬಾರದು ನೋಡಯ್ಯಾ !
ಬಡತನವೆಂಬ ಮಂತ್ರವಾದಿ ಹೋಗಲು ಒಡನೆ ನುಡಿವರಯ್ಯ."

ಹೀಗೆ ಒಬ್ಬೊಬ್ಬರು ಒಂದೊಂದು ರೀತಿ ಸರ್ಪದಷ್ಟರಾಗಿರುತ್ತಾರೆ. ಸಂಸಾರ ಯಾರನ್ನೂ ಬಿಡದೆ ಮುಟ್ಟುವ ಸರ್ಪ. ಒಮ್ಮೆ ಬಸವಣ್ಣನವರೂ ಹೊರತಾಗಿರ ಲಿಲ್ಲ ? ಆದರೆ ಅವರು ಶಿವಗಾರುಡ ಮಂತ್ರ ಜಪಿಸಿ ಬದುಕುತ್ತಾರೆ.

*"ಸಂಸಾರವೆಂಬ ಸರ್ಪ ಮುಟ್ಟಲು
ಪಂಚೇಂದ್ರಿಯ ವಿಷಯವೆಂಬ ವಿಷದಿಂದೆ
ಆನು ಮುಂದುಗೆಟ್ಟೆನಯ್ಯಾ ; ಆನು ಹೊರಳಿ ಬೀಳುತಿರ್ದೆನಯ್ಯ
'ಓಂ ನಮಃಶಿವಾಯ' ಎಂಬ ಮಂತ್ರವ ಜಪಿಸುತ್ತಿರ್ದೆನಯ್ಯಾ !"

---

*"ಸಂಸಾರವೆಂಬ ಶ್ವಾನನಟ್ಟಿ ಮಾಸಲ ಬೇಸರ ಮಾಡದಿರಯ್ಯ" ಎಂಬ ರೂಪಕ ವನ್ನು ಇದರೊಡನೆ ಹೋಲಿಸಬಹುದು. ಒಂದು ವಸ್ತು ಎಷ್ಟು ಭಾವಗಳಾಗಿ ಎಷ್ಟು ರೂಪಕಗಳಾಗಿ ಅನುಭವವಾಗಿದೆ ಎಂಬುದನ್ನೂ ನೋಡಬಹುದು.

ಈ ಹಾವು ಎಷ್ಟು ಜನರನ್ನು ನುಂಗಿದೆಯೊ ತಿಳಿಯದು. ನುಂಗಿ ನುಂಗಿ ಅದರ ತಲೆಬಾಲವೆಲ್ಲ ಕಳಚಿಹೋಗಿರಬೇಕು, ಇಲ್ಲವೆ ಅದಕ್ಕೆ ಆ ಯಾವುದೂ ಇಲ್ಲದಿರಬೇಕು. ಆದ್ದರಿಂದಲೆ ಇದು ಅತಿ ಭಯಂಕರವಾಗಿದೆ. ಇದನ್ನು ಗೆಲ್ಲಲು ಬರಿಯ ಗಾರುಡಿಗತನವೂ ಸಲ್ಲದು. ಗಾರುಡಿಗ ಅಹಂಕಾರಿ ಆದರಂತೂ ಕೇಳು ವಂತೆಯೆ ಇಲ್ಲ.

"ಹಲುಬರ ನುಂಗಿದ ಹಾವಿಂಗೆ ತಲೆಬಾಲವಿಲ್ಲ ನೋಡಾ:
ಕೊಲುವುದು ತ್ರೈಜಗವೆಲ್ಲವ: ತನಗೆ ಬೇಙೆ ಪ್ರಳಯವಿಲ್ಲ;
ನಾಕಡಿಯನೈದುವುದು: ಲೋಕದ ಕಡೆಯನೆ ಕಾಣ್ಬುದು;
ಸೂಕ್ಷ್ಮಪಥದಲ್ಲಿ ನಡೆವುದು; ತನಗೆ ಬೇಙೆ ಓಡಲಿಲ್ಲ:
ಅಹಂ ಎಂಬ ಗಾರುಡಿಗನ ನುಂಗಿತ್ತು,
ಕೂಡಲಸಂಗನ ಶರಣರಲ್ಲದುಳಿದವರ!

ಈ ಸೂಕ್ಷ್ಮಪಥಗಾಮಿಯಾದ ತಲೆ ಬಾಲಗಳಿರದ ಸರ್ಪದಿಂದ ತಪ್ಪಿಸಿಕೊಳ್ಳುವು ದಾದರೂ ಹೇಗೆ? ಇದು ಪ್ರಾಯಶಃ ಕಾಮಕ್ಕೆ ಸಂಕೇತವಾಗಿರಬಹುದು. ಇದಕ್ಕೆದರು ಯಾವ ಗಾರುಡಿಗತನವೂ ರಕ್ಷೆಗೆ ಬಾರದು. ಏಕೆಂದರೆ ಇದು ಅಹಂ ಗಾರುಡಿಗನನ್ನೂ ನುಂಗಿದೆ. ಆದ್ದರಿಂದಲೆ ಇದನ್ನು ಬರಿಯ ಬುದ್ಧಿ ಅಹಂ ಗಳಿಂದಲೂ ನಿಯಂತ್ರಿಸ ಬರುವುದಿಲ್ಲ. ಶಿವಮಂತ್ರ ಬೇಕು, ನಿರಹಂಕಾರ ಬುದ್ಧಿ ಬೇಕು. ಇದು ದೊರೆಯುವುದು ಹೇಗೆ? ಶಿವಕರುಣೆ, ಭಕ್ತಿ, ಶ್ರದ್ಧೆ, ಶರಣ ಸೇವೆಗಳೆ ಬೇಕು. ಶ್ರದ್ಧಾಭಕ್ತಿ ಇದ್ದವರು ಈ ಸರ್ಪದಿಂದ ದಷ್ಟರಾದರೂ ಬದುಕುತ್ತಾರೆ, ಶಂಕಿತರು ಅದು ಕಚ್ಚುವುದಿರಲಿ, ಬರಿಯ ಹುತ್ತದ ಮೇಲಣ ಹಗ್ಗವನ್ನು ಕಂಡೆ ಹೆದರಿ ಸಾಯುತ್ತಾರೆ:

"ಹುತ್ತದ ಮೇಲಣ ರಜ್ಜು ಮುಟ್ಟಿದರೆಯೂ
ಸಾವರು: ಶಂಕಿತರಾದವರು.
ಸರ್ಪದಷ್ಟವಾದರೆಯೂ
ಸಾಯರು: ನಿಶ್ಶಂಕಿತರಾದವರು.
ಕೂಡಲ ಸಂಗಮದೇವಯ್ಯಾ,
ಶಂಕಿತಂಗೆ ಪ್ರಸಾದ ಸಿಂಗಿ ಕಾಳಕೂಟವಿಷವು."

ಶ್ರದ್ಧಾಭಕ್ತರು, ಶಿವಕರುಣೆಯು ಕಂದರು ಸಂಸಾರದಲ್ಲಿದ್ದೂ ಬದುಕುತ್ತಾರೆ. ಶಂಕಿತರು ಪ್ರಸಾದಸೇವಿಸಿಯೂ ಸಾಯುತ್ತಾರೆ.

ಹುಟ್ಟಿದ ಮನುಷ್ಯ ಸಾಯಲೇಬೇಕು. ಸಾಯುವುದು ಸಿದ್ಧವಾಗಿದ್ದೂ

ಏಕಿನ್ನೂ ಅವನು ಇಹವ್ಯಾಮೋಹವನ್ನು ಒಂದಿನಿತೂ ಕುಗ್ಗಿಸಿಕೊಂಡಿಲ್ಲ ? ಬಯಕೆ ಯನ್ನೇ ನೂತು, ನೇದು, ಹಾಸಿ ಹೊದೆದುಕೊಳ್ಳುತ್ತಿದ್ದಾನಲ್ಲ ? ಹೀಗೆಂದು ಭವಮುಕ್ತರೆಲ್ಲ ಚಿಂತಿಸುತ್ತಲೆ ಇದ್ದಾರೆ. ಈ ಮಾನವನ ದುರಂತತೆಯನ್ನು ಕೊನೆಗಾಣಿಸಲೆಂದು ಸಂಸಾರದ ಅಸಾರತೆಯನ್ನು ಅನಿತ್ಯತೆಯನ್ನು ಸುಖ ಘೋರ ಭಯಂಕರತೆಯನ್ನು ಜೈನರೇ ಮೊದಲಾದವರೆಲ್ಲ ಸಾರಿದ್ದಾರೆ; ನೂರಾರು ವೈರಾಗ್ಯಶತಕಗಳನ್ನು ಹಾಡಿದ್ದಾರೆ. ಹತ್ತಾರು ರೂಪಕಗಳನ್ನು ಕಡೆದಿದ್ದಾರೆ. ಬಸವಣ್ಣನವರು ಮುಂದಿನ ಎರಡು ರೂಪಕಗಳಲ್ಲಿ ಹತ್ತಾರು ವೈರಾಗ್ಯ ಶತಕ ಗಳೂ ಉಂಟುಮಾಡಲಾರದ ಪರಿಣಾಮವನ್ನು ತಂದಿದ್ದಾರೆ.

"ಕಪ್ಪೆ ಸರ್ಪನ ನೆಳಲಿನಲ್ಲಿಪ್ಪಂತೆನಗಾಯಿತ್ತಯ್ಯ"
"ಹಾವಿನ ಬಾಯ ಕಪ್ಪೆ ಹಸಿದು
ಹಾರುವ ನೊಣಕ್ಕೆ ಆಸೆ ಮಾಡುವಂತೆ—"

ಹಾವಿನ ಹೆಡೆಯ ಕೊಡೆಯಡಿಯ ನೆಳಲಲ್ಲಿ ಮಲಗಿರುವ ಕಪ್ಪೆಯ ಚಿತ್ರ ವೊಂದು ಕಡೆ. ಅದರ ಬಾಯೊಳಗೆ ಸಿಲುಕಿದ್ದರೂ ಹಸಿವಾದ ಕಾರಣ ತನ್ನ ಮುಂದೆ ಹಾರುವ ನೊಣಕ್ಕೆ ಆಸೆಪಡುವ ಕಪ್ಪೆಯ ಚಿತ್ರ ಮತ್ತೊಂದು ಕಡೆ– ಒಂದಕ್ಕಿಂತ ಮತ್ತೊಂದು ಭಯಂಕರವಾಗಿದೆ. ಎರಡನ್ನೂ ಸಮೀಕರಿಸಿದ್ದಿದ್ದರೆ ಮತ್ತೂ ಸುಂದರವಾಗಿರುತ್ತಿತ್ತು, ಈ ರೂಪಕ. ಆದರಿಲ್ಲಿ ಎರಡು ಪ್ರತ್ಯೇಕ ಚಿತ್ರಗಳು ದೊರೆತಿವೆ ; ಕಣ್ಣಿಗೆ ಕಟ್ಟಿದಂತೆ, ಚಿತ್ರಕಲಾವಿದನ ಕುಂಚಕ್ಕೆ ರಸ ವಸ್ತುವಾಗಿ ಸಿದ್ಧವಾಗಿರುವಂತೆ ನಿಂತಿವೆ. ಆ ನೆಳಲು, ಆ ಶೀತ ಶರೀರಿಯು ನೀಡಿದ ಹರಕೆಯ ಅಂಗೈ ಅಡಿಯ ನೆಳಲು ಎಷ್ಟು ತಂಪು ! *ಅಲ್ಲಿ ಮಲಗಿದೆ ಕಪ್ಪೆ. ಇಲ್ಲ, ಅದರ ಬಾಯೊಳಗಿದೆ. ಅಲ್ಲಿ ಅದಕ್ಕೆ ಹಸಿವಾಗಿದೆ ! ತನ್ನ ಮುಂದೆ ಹಾರುವ ತನ್ನ ಉಣಿಸಿನ ಕಡೆ ಹಾರಲೆಳಸಿದೆ ! ಹಾರಲೆಳಸುವುದೆ ಅದನ್ನು ಹಾವಿನ ಮೊನಚಾದ ಬಾಗುಹಲ್ಲಿಗೆ ಬಲಿಯಾಗಿಸುತ್ತದೆ. ಆದರೂ ಮೃತ್ಯು

---

*ಕಪ್ಪೆಗೆ ಸೆಕೆಯನ್ನು ತಾಳುವುದಕ್ಕಾಗುವುದಿಲ್ಲ. ಬೇಸಿಗೆಯ ಕಾಲದಲ್ಲಿ ನೋಡ ಬೇಕು ಅವುಗಳ ಕಷ್ಟವನ್ನು. ನಲ್ಲಿ ನೀರು ಬೀಳುವೆಡೆಯಲ್ಲೇ ಮಲಗಿರುತ್ತವೆ. ಮೊದಲ ಮಳೆ ಬಂತೆಂದರೆ ಸಾಕು, ರೈತರಿಗಿಂತ ಹೆಚ್ಚು ಹಿಗ್ಗು ಅವಕ್ಕೆ. ಅಂಥ ಕಪ್ಪೆ ಶೀತಲವಾದ ನಾಗರಹಾವಿನ ಹೆಡೆಯ ತಂಪು ನೆರಳಿನಲ್ಲಿ ಹೊಂಪೇರಿ ಮಲಗಿದರೇನು ಆಶ್ಚರ್ಯ !

ಛತ್ರದಡಿ ತಂಪುರ್ಷೋಂಪು. ಮೃತ್ಯುದಂಷ್ಟ್ರದಲ್ಲಿ ಹಸಿವಿನ ಅನುಭವ, ಆಹಾರದ ಬೇಟೆ ! ದುರಂತವಾದರೂ ದುರಂತದಂತೆ ಕಾಣದೆ ರಮಣೀಯವಾಗಿ ತೋರುವುದೆ ಈ ದುರಂತತೆಯ ತಿರುಳು. ಮಾನವ ದುರಂತತೆಯನ್ನು ಇದಕ್ಕಿಂತಲೂ ಪರಿಣಾಮಕಾರಿಯಾಗಿ ಚಿತ್ರಿಸಬಹುದೆ ? ಮುಂದಿನ ವಚನ ಬೇರೊಂದು ಬಗೆಯಾಗಿ ಸಾಹಸಮಾಡಿದೆ.

"ನಾನಾ ವರ್ಣದ ಸಂಸಾರ ಹಾವು ಹಾವಾಡಿಗನ ಸ್ನೇಹದಂತೆ."

ಸಂಸಾರ ನಾನಾರಾಗಗಳ ಸಂಗಮಸ್ಥಾನ. ಎಲ್ಲ ರಾಗಗಳೂ ಸರಾಗವಾದಾಗ ಸಂಸಾರ ಸಸಾರವಾಗುತ್ತದೆ ; ಅವು ಕೆರಳಿದಾಗ ವಿಷಾದವಾಗುತ್ತದೆ ; ವಿಷಸಾರವಾಗುತ್ತದೆ. ಮಾನವ ಹೃದಯದ ಒಂದೊಂದು ರಾಗವೂ ಒಂದೊಂದು ಬಣ್ಣದ ಹಾವು. ಈ ಸಹಸ್ರವರ್ಣದ ಹಾವಿನೊಡನೆ ಹಾಡುವುದೆ ಆಡುವುದೆ ಸಂಸಾರ. ನಾವೇನೊ ಆಡುತ್ತೇವೆ. ಕೈಯಲ್ಲಿ ಪುಂಗಿಯುದೆಯೆಂಬ, ನಮ್ಮ ಹಾಡಿಗೆ ಹಾವುಗಳು ತಲೆದೂಗುತ್ತಿವೆ ಎಂಬ ಭ್ರಮೆಯಿಂದ. ಎಷ್ಟು ಹೊತ್ತು ತಾನೆ ಅದೇರಾಗ ಅದೇತಾನ ಅವುಗಳನ್ನು ಸೆರೆಹಿಡಿದಿಟ್ಟುಕೊಂಡಿದ್ದಾವು ? ಎಷ್ಟು ಗಳಿಗೆ ತಾನೆ ಅಪರಾಗವಲ್ಲದಂತೆ ನಾವೂ ನುಡಿಸಿಯೇವು ? ಯಾವಾಗಲೊ ಯಾರಿಗೆ ಗೊತ್ತು, ಬುಸ್ಸೆಂದು ಹೆಡೆಯೆತ್ತಿ ಅಪ್ಪಳಿಸಬರುತ್ತವೆ. ಗರುಡಮಣಿಯಿದ್ದವರು ಮಾತ್ರ, ಗರುಡಮಂತ್ರ ಬಲ್ಲವರು ಮಾತ್ರ, ಅಮೃತರಾಗುತ್ತಾರೆ. ಉಳಿದವರು ಬೇಯುತ್ತಾರೆ.

ಅದರೆ ಈ ವರ್ಣನಾಗರಗಳೊಡನಾಟ ಎಷ್ಟು ರಮ್ಯ ! ಬರಿಯ ನಾಗರವಲ್ಲ. ಬಣ್ಣ ಬಣ್ಣದ ನಾಗರಗಳು ! ನಾಗರಹಾವು ತನಗೆ ತಾನೆ ಬಹು ಸುಂದರ. ನಮ್ಮ ಕಣ್ಣಿಗೆ ಈಗ ಅವು ಹಾಗೆ ಕಾಣದಿರಬಹುದು. ಅವುಗಳ ವಿಷಯವಾಗಿ ಏನೂ ತಿಳಿದಿಲ್ಲದ ಅವುಗಳನ್ನು ಕಂಡಿಲ್ಲದ ಜನರಿಗೆ ಅವು ಹೊಸದಾಗಿ ಕಂಡಾಗ ಕಾಣುವ ಬಗೆಯೆ ಬೇರೆ. ಇಂತಹ ಸುಂದರ ಸಹಸ್ರವರ್ಣದ ನಾಗರಗಳು ಸುತ್ತಲೂ ಪುಂಗಿಯ ನಾದಕ್ಕೆ ನರ್ತಿಸುತ್ತಿರುವಾಗ, ನೆರೆದ ಜನ ಮುಗ್ಧರಾಗಿರುವಾಗ ಯಾವ ಹಾವಾಡಿಗನಿಗೆ ತಾನೆ ತನ್ನ ಪುಂಗಿಯನಾದ ತನಗೇ 'ಮತ್ತು' ಬರಿಸದು ; ಆ ನರ್ತನ ಸೊಕ್ಕು ತರಿಸದು ? ಹಾಗೆ ಸಾಗಿದೆ ಈ ಆಟ.

ಇಲ್ಲಿ ಒಂದೊಂದು ವರ್ಣದ ನಾಗರವೂ ಒಂದೊಂದು ರಾಗಕ್ಕೆ ಸಂಕೇತವಾಗಿರುವುದು ವೇದ್ಯವಾಗದಿರದು. ಪ್ರೀತಿ ಎಂಬುದು ನೀಲ ; ಕೋಪ ಕೆಂಪು ;

ತ್ಯಾಗ ವೈರಾಗ್ಯಗಳು ಕಾವಿ; ಸಮೃದ್ಧಿ ಹಸಿರು; ಶುಭ್ರತೆ ಧವಳ, ಇತ್ಯಾದಿ ಭಾವನೆಗಳು—ಅಷ್ಟೇ ಏಕೆ ಮನೋವಿಜ್ಞಾನದ ಪ್ರಕಾರವಾಗಿಯೂ ಸತ್ಯವಾದ ಭಾವನೆಗಳು—ನಮ್ಮಲ್ಲಿವೆ. ಈ ವರ್ಣನಾಗರಗಳೆ ಸಂಸಾರಿ ಹಾವಾಡಿಗನ ಬುಟ್ಟಿಯಲ್ಲಿರುವ ಆಟದ ವಸ್ತು; ಒಬ್ಬೊಬ್ಬನ ಬುಟ್ಟಿಯಲ್ಲಿ ಒಂದೊಂದು ವರ್ಣದ ನಾಗರ ಪ್ರಧಾನ; ಹೇರಳ. ಅವರ ಬುಟ್ಟಿಯ ವಸ್ತು ಇವರಿಗೆ, ಇವರ ಬುಟ್ಟಿಯ ನಾಗರ ಅವರಿಗೆ ಚೋದ್ಯವಾಗಿ ತೋರುವುದರಿಂದ ಎಲ್ಲರೂ ಪರಸ್ಪರ ನಾಗರ ಕ್ರೀಡೆಗೆ ಮುನ್ನುಗ್ಗುತ್ತಿದ್ದಾರೆ; ಪುಂಗಿಯೊಂದನ್ನೆ ಹಿಡಿದು (ಅದನ್ನು ಹಿಡಿಯದವರೂ ಇದ್ದಾರು!) ಶಿವ ಗರುಡ ಮಂತ್ರವನ್ನು ಮರೆತವರೆ ಎಲ್ಲ!

ಈ ಹಾವುಗಳು ಎಲ್ಲೋ ಹೊರಗಿದ್ದಿದ್ದರೆ ಅವುಗಳಿಂದ ದೂರವೇ ಇರಬಹುದಾಗಿತ್ತು. ಆದರೆ ಹೊರಗಿರಲು ಅವು ತಾನೆ ಯಾವು, ನಮ್ಮ ರಾಗಭಾವಗಳೆ ಆ ವರ್ಣ ನಾಗರ ಸಮೂಹವಾಗಿರುವಾಗ. ಅಷ್ಟೆ ಏಕೆ, ಸಮಸ್ತ ಭಾವರಾಗಗಳಿಗೂ ಕಾರಣವಾದ ಮನಸ್ಸೆ ಹಾವಾಗಿದೆ; ಸಾವಿರ ಹೆಡೆಯ ಆದಿಶೇಷನಾಗಿದೆ. ಅದನ್ನು ಈ ದೇಹದ ಹೇಳಿಗೆ ಮುಚ್ಚಿದೆ. ಆಗಾಗ ಅದು ಮುಚ್ಚಳ ತಳ್ಳಿ ಹೊರಕ್ಕೆ ಚಾಚಿಕೊಂಡು ಹೆಡೆಯಾಡಿಸುತ್ತದೆ. ತತ್‌ಕ್ಷಣವೆ ಒಂದಷ್ಟು ಪುಂಗಿಯನಾದ, ಒಂದಷ್ಟು ಅದಕ್ಕೆ ಬೇಕಾದ ಆಹಾರ ಕೊಟ್ಟರೆ ಸಾಕು. ಹೀಗೆ ನಡೆದಿದೆ ಈ ವ್ಯಾಪಾರ, ಹಾವನ್ನು ಸಾಂತ್ವನಗೊಳಿಸಿಟ್ಟುಕೊಳ್ಳುವ ವ್ಯಾಪಾರ. ಆದರೆ ಇದರಲ್ಲಿ ಯಾವ ಸುರಕ್ಷಣಭಾವ ತಾನೆ ಇದೆ. ಹಾಗೆಂದು ಬಿಡುವಂತಿದೆಯೆ? ಇಲ್ಲವೆ ಇಲ್ಲ. ಬಾಳಲೇಬೇಕು, ಹುದುವಾಳಲೇಬೇಕು ಆ ನಾಗನ ನೊಡನೆ. ಯಾವಾಗ ಕಚ್ಚುವುದೊ?

ಮನವೇ ಸರ್ಪ, ತನುವೇ ಹೇಳಿಗೆ:
ಹಾವಿನೊಡತಣ ಹುದುವಾಳಿಗೆ!
ಇನ್ನಾವಾಗ ಕೊಂದಹುದೆಂದಱಿಯೆ!
ಇನ್ನಾವಾಗ ತಿಂದಹುದೆಂದಱಿಯೆ!
ನಿಚ್ಚಕ್ಕೆ ನಿಮ್ಮ ಪೂಜಿಸಬಲ್ಲೊಡೆ
ಅದೇ ಗಾರುಡ, ಕೂಡಲಸಂಗಮದೇವ!

ಆ ಶಿವಮಂತ್ರದ ಗಾರುಡ ಕೈಲಿದ್ದರೆ ಹಾವಿನೊಡಬಾಳುವ ಕಷ್ಟವೇಕೆ. ಅಕ್ಕ ಮಹಾದೇವಿ ಹೇಳುತ್ತಾರೆ 'ಹಲ್ಲ ಕಳೆದು ಹಾವ ಆಡಿಸಬಲ್ಲರೆ ಹಾವಿನ ಸಂಗವೇ ಲೇಸು ಕಂಡಯ್ಯ' ಎಂದು. ಸಂಸಾರದಲ್ಲೆ ಕಾಮಾದಿ ರಾಗಗಳ ಮಧ್ಯೆ ಇರ

ಬಹುದು. ಇರಬೇಕು ಹೇಗಿರಬೇಕೆಂದರೆ ಆ ಹಾವಿನ ಹಲ್ಲ ಕಳೆದು ಅದರೊಡ ನಿರಬೇಕು. ಅದು ಬುಸ್ಸೆಂದರೂ ಆಗ ಅದಕ್ಕೆ ನೋವೆ ಹೊರತು ನಮಗಾವ ಸಾವೂ ಇಲ್ಲ. ತಿಳಿಯದ ಇತರರಿಗೆ ನಾವು ಸತ್ತೆವೆಂಡೆ ಭ್ರಮೆ....ಆದರೆಚ್ಚರ! ಹಲ್ಲಷ್ಟೆ ಕಳೆಯಬಹುದು; ಹಾವಿನ ವಿಷಕೋಶವನ್ನಲ್ಲ! ಹಾಗೂ ಆ ಹಲ್ಲು ಮತ್ತೆ ಬೆಳೆಯದೆಂಬ ಅಭಯವಿಲ್ಲ. ಅಥವಾ ಕಿತ್ತವರಾದರೂ ಬುಡಮಟ್ಟ ಕಿತ್ತಿರುತ್ತಾರೆಂಬ ನಿಶ್ಚಯವಿಲ್ಲ. ಅದರಿಂದ ಸದಾ ಜಾಗೃತನಾಗಿಯೆ ಇರ ಬೇಕು....ಹಾಗೂ ಆ ಹಾವಿನ ಹಲ್ಲನ್ನು ಕಳೆಯುವ ಶಕ್ತಿ ಎಷ್ಟು ಜನಕ್ಕಿದೆ, ಗಾರುಡ ಮಂತ್ರ ಇದ್ದರೆ ತಾನೆ?

ಭಾವಿಸುತ್ತ ಭಾವಿಸುತ್ತ ಹೋದಂತೆಲ್ಲಾ ನಿಸ್ಸೀರವಾಗುತ್ತ ಹೋಗುತ್ತವೆ, ಈ ರೂಪಕಗಳು. ಹೀಗೆ ಬಸವಣ್ಣನವರಲ್ಲಿ ನೂರಾರು ಪ್ರಾಣಿ ರೂಪಕಗಳನ್ನು ಆನಂದಿಸುವಾಗ ಅಲ್ಲಿ ಸ್ಪಂದಿಸಿರುವ ಅವರ ಹೃದಯದ ನೂರಾರು ಅವಸ್ಥೆ ಗಳನ್ನೂ ಕಂಡು ಭಾವಶ್ರೀಮಂತರಾದಂತೆ ಆಗುತ್ತೇವೆ. ಬಸವಣ್ಣನವರ ವಚನ ಗಳಲ್ಲಿ ಬರುವ ರೂಪಕಕ್ಕೆ ವಸ್ತು ಇಂಥದೆ ಎಂದೇನೂ ಮಿತಿಯಿಲ್ಲ. ಅವರ ಚೇತನದ ದರ್ಶನವನ್ನು ಪಡೆಯಬೇಕಾದರೆ ಅವರ ವಚನಗಳಿಗೆ ಶರಣುಹೋಗ ಬೇಕು. ಸಿಕ್ಕಿರುವ ವಚನಗಳು ಸುಮಾರು ಒಂದು ಸಾವಿರ. ಏಕಾಂತದಲ್ಲಿ ಅರಳಿ ಯಾರ ಕಣ್ಣಿಗೂ ಕಾಣದೆ ಉದುರಿಹೋದ ವನಕುಸುಮಕೋಟಿ ಯೆಷ್ಟೋ! ಅವರ ಶ್ರೀಮಂತ ಚೇತನವನ್ನು 'ಸಂಪೂರ್ಣ'ವಾಗಿ ಈಗಿರುವ ವಚನ ಕಾಣಿಸುತ್ತವೆಯೆಂದಲ್ಲ. ಆದರೆ ಅವು ಅವರ ಹೃದಯದ ವ್ಯಕ್ತಲೋಕದ ಒಂದು 'ಖಂಡ' ವನ್ನಿಲ್ಲಿ ಮಾತ್ರ ಕಾಣಿಸುತ್ತವೆ. ಅಷ್ಟರಿಂದಲೆ ಆ ಲೋಕ ಎಷ್ಟು ಶ್ರೀಮಂತ ಎಂದು ತಿಳಿಯುತ್ತದೆ!

ಪ್ರಾಣಿರೂಪಕಗಳು ಪ್ರಧಾನತಃ ಅಂತರಂಗದ "ತಿರ್ಯಜ್‌ಮಾನವ ಸ್ವಭಾವ"ದ ಸಂಘರ್ಷಣವನ್ನು ಹೆಚ್ಚಾಗಿ ಚಿತ್ರಿಸುತ್ತವೆ. ಈ ಘರ್ಷಣೆ ಸಾಧ ನೆಯ ಪ್ರಾರಂಭಾವಸ್ಥೆಯಲ್ಲಿ ಅಥವಾ, ಮನಸ್ಸಿನ ವಿಷಮಸ್ಥಿತಿಯಲ್ಲಿ ತೀವ್ರತರ ವಾಗಿ ಇರುವುದರಿಂದ ಆ ಸ್ಥಿತಿಯ ಅಭಿವ್ಯಕ್ತಿ ಆ ಮಾಧ್ಯಮದಿಂದಲೆ ಪ್ರಧಾನ ವಾಗಿ ವ್ಯಕ್ತವಾಗಿದೆ. ಮುಂದೆ, ಅಥವಾ, ಆ ಮಧ್ಯೆ ಮಧ್ಯೆ ಈ ಹೋರಾಟ ಶಮಗೊಳ್ಳುತ್ತ ಹೋದಂತೆ, ಅನುಭವಗಳು ತೀವ್ರ ಮಧುರವಾಗುತ್ತ ಹೋದಂತೆಲ್ಲಾ ಪ್ರಧಾನವಾಗಿ ಆಗ ಬೇರೆ ರೂಪಕಗಳು ಬರುತ್ತವೆ.

ಈ ತನಕವೂ ವಿವರಿಸಿಕೊಂಡು ಬಂದ ರೂಪಕಗಳೆಲ್ಲವೂ ಒಂದೇ ವರ್ಗದವು ಎಂದು. ಯಾರೂ ಭಾವಿಸರು. ಸಾದೃಶ್ಯಮಾತ್ರವಾಗಿ ಬರತಕ್ಕ ರೂಪಕಗಳುಂಟು, 'ಸಾದೃಶ್ಯಶ್ರೀ' ಆಗತಕ್ಕವೂ ಉಂಟು; ಪ್ರತಿಮೆಗಳಾಗುವ ರೂಪಕಗಳೂ ಉಂಟು. ಹಾಗೂ ಬಸವಣ್ಣನವರದೆ ಅಲ್ಲದ 'ಸಾಮಾನ್ಯ'ವಾದ ರೂಪಕಗಳೂ ಉಂಟು. ಹೀಗಿದ್ದರೂ ಪ್ರಾಣಿಗಳನ್ನು ಪ್ರಧಾನತಃ ಮಾನವನ ವಿವಿಧ ಪ್ರಾಣಿ ಸ್ವಭಾವಗಳನ್ನು ವ್ಯಕ್ತಗೊಳಿಸಲು ವಿಶೇಷವಾಗಿ ಬಳಸಿಕೊಳ್ಳಲಾಗಿದೆ. ಉದಾಹರಣೆಗೆ ನಾಯಿ, ಹಾವು. ಇವೆರಡೂ ಕೂಡ ಬಹಳ ಉನ್ನತ ಗುಣಕ್ಕೆ ರೂಪಕಗಳಾಗಿ ಬಂದಿಲ್ಲ. ಆದರೆ ಆಧ್ಯಾತ್ಮಿಕ ಪ್ರಪಂಚದಲ್ಲಿ ನಾಯಿಗೆ ಜಾಯಾಲ, ಧರ್ಮದ ಪ್ರತಿನಿಧಿ ಎಂಬೆಲ್ಲ ವಿಶೇಷ ಭಾವಾರ್ಥಗಳಿವೆ. ನಾಗರ ಹಾವು ಕುಂಡಲಿನೀ ಶಕ್ತಿಯ ಸಂಕೇತವಾಗುತ್ತದೆ ; ಅನಂತತೆಯ ಸಂಕೇತವಾಗುತ್ತದೆ. (ಈ ನಾಗಾರಾಧನೆಯೆ ಒಂದು ಆಚರಣೆಯಾಗಿದೆ ಎಂಬುದನ್ನೂ ನೆನೆಯಬಹುದು.) ಒಟ್ಟಿನಲ್ಲಿ ಹೇಳುವುದೇನೆಂದರೆ ಪ್ರಾಣಿಗಳನ್ನೂ ದಿವ್ಯಾನುಭವಗಳ ಪ್ರತೀಕ, ಪ್ರತಿಮೆಗಳನ್ನಾಗಿಯೂ ಮಾಡಿಕೊಳ್ಳಬಹುದು ಎಂದು. ಆದರೆ ಈ ವಚನಗಳ ವಲಯವೇ ಬೇರೆ. ಇಲ್ಲಿ ಪ್ರಾಣಿಗಳು ಮುಖ್ಯವಾಗಿ ಪ್ರಾಣಿತನದ ಪ್ರತೀಕವಾಗಿ ಬಂದಿವೆ. ಹಾಗೆ ಈ ರೂಪಕಗಳಲ್ಲಿ ಸೂಕ್ಷ್ಮಹೃದಯದ ಒಳತೋಟಿಯ ಚಿತ್ರಣ ಸ್ಪಷ್ಟವಾಗಿದೆ.

ಮತ್ತೊಂದು ದೃಷ್ಟಿಯಿಂದಲೂ ಈ ರೂಪಕಗಳನ್ನು ನೋಡುವುದು ಉಚಿತವಾದೀತು. ನಾನು ತಿಳಿದಿರುವಂತೆ ಪ್ರಾಣಿಗಳನ್ನು ರೂಪಕವಾಗಿ ಪರಿವರ್ತಿಸಿಕೊಂಡು ಹೀಗೆ ಬಳಸಿರುವ ಕವಿಯೆ ಕನ್ನಡದಲ್ಲಿ ವಿರಲ. ರೂಪಕ ಚಕ್ರೇಶನಾದ ಕುಮಾರವ್ಯಾಸನಲ್ಲಿ ಅವು ವಿಶೇಷವಾಗಿ ಬಂದಿದ್ದರೂ ಈ ವೈವಿಧ್ಯವಾಗಲಿ ಪರಿಣಾಮತೀವ್ರತೆಯಾಗಲಿ ಅವನಲ್ಲೂ ಕಂಡುಬರುವುದಿಲ್ಲ. ಈ ಅಂಶ ಚಿಂತನಾರ್ಹವೆಂದೇ ತೋರುತ್ತದೆ.

ಪ್ರಾರಂಭದಲ್ಲೇ ಹೇಳಿದಂತೆ ಇಂದ್ರಿಯ ಪರಿಮಿತ ಚೇತನವು ಸಾಗರದ ತೆರೆಯ ಮೇಲೆ ನೊರೆಯನ್ನು ಸಂಗ್ರಹಿಸುತ್ತ ಅದರ ಮೇಲೆ ಮಿಂಚಿ ಮಿರುಮಿರುಗುವ ಬೆಳಕಿಗಷ್ಟೆ ಮೋಹಗೊಳ್ಳುತ್ತ ಇರುತ್ತದೆ. ರತ್ನಾನ್ವೇಷಕಚೇತನ ಇಷ್ಟರಿಂದಲೆ ತೃಪ್ತವಾಗದೆ ಒಳ ಮುಳುಗಬೇಕಾಗುತ್ತದೆ. ಮೊದಲ ಬಾರಿಗೆ ನೀರು ಅದನ್ನು ಮೇಲೆತ್ತುತ್ತದೆ, ಎತ್ತಿಸೆಯುತ್ತದೆ, ಉಸಿರು ಕಟ್ಟುತ್ತದೆ.

ನೀರಿನ ಅಪಾರವಾದ ಒತ್ತಡ ಅವರ ನೈವೃಯನ್ನು ಹಿಸುಕಿ ಹಿಪ್ಪೆಯಂತೆ ಮಾಡಿಬಿಡುತ್ತದೆ. ಇವನ್ನೂ ಒತ್ತಿಕೊಂಡು ಮುಂದೆಹೋದರೆ 'ಝಷ ವಿಕೃತಭಾವಗಳು' ಭಯಂಕರ ರೂಪದಿಂದ ಹೆದರಿಸುತ್ತವೆ. ಆ ಅವಸ್ಥೆಯಲ್ಲಿ —ಅಂತರ್ಮುಖತೆಯ ಪ್ರಾರಂಭಾವಸ್ಥೆಯಲ್ಲಿ—ಸಾಧಕನಿಗೆ ಅನಿಸುತ್ತದೆ: 'ಈ ಎಲ್ಲಾ ನನ್ನೊಳಗಿದ್ದವರೆ?' ಎಂದು. ಅಲ್ಲಿ ಸುಪ್ತ ಆಕಾಂಕ್ಷೆಗಳು, ಹತಾಶೆಗಳು ವಿವಿಧ ರಾಗಗಳು ಎಲ್ಲಾ ಜೆವರಿಸುತ್ತವೆ. ಅವುಗಳಿಗೆ ಬಲಿಯಾಗುವ ಭಯವೂ ಉಂಟು. ಆದರೆ ಧೀರ ನಿರ್ಭಯವಾಗಿ ಇನ್ನೂ ಮುಂದೆ ಹೋದರೆ ಒತ್ತಡ ಹೆಚ್ಚುತ್ತ ಹೆಚ್ಚುತ್ತ ಹೋಗುತ್ತದೆ. ಅಲ್ಲಿ ಸಹಸ್ರವರ್ಣದ ಮೀನುಗಳು—ಭಾವ ಮೀನಗಳು—ಶಾಂತವಾಗಿ ಈಜುತ್ತಿರುತ್ತವೆ. ಭಯಂಕರ ನಕ್ರ ತಿಮಿಂಗಿಲ ಗಳಿಗೆ ಹೆದರಿದ್ದ ಚೇತನ ಅವುಗಳ ಪ್ರಥಮದರ್ಶನದಿಂದ ಅಪಾರ ಶಾಂತಿ ಪಡೆಯುತ್ತದೆ. ಅವುಗಳೇ ಪರಮವೆಂದು ಭ್ರಮಿಸಿ ಸುಖಿಸುತ್ತದೆ. ಆದರೆ ಅವು ರತ್ನಲೋಕದ ಕಾವಲಿನವರು ಮಾತ್ರ ಎಂದು ಹೊಳೆದಾಗ, ಅರಿವಾದಾಗ, ಮುಂದೆ, ಇನ್ನೂ ಮುಂದೆ ಮುಳುಗಿದಾಗ ಕತ್ತಲೋ ಕತ್ತಲು; ಹೆದರಿಸಿ ಉಸಿರುಕಟ್ಟುವ ಕತ್ತಲು. ಆ ಮಹಾಕಾಳರಾತ್ರಿಯನ್ನು ದಾಟಿದಾಗ ಕಾಣು ತ್ತದೆ: ಅದೋ! ರತ್ನಾಕರ ಅರುಣೋದಯ! ಶ್ರೀಮಂತ ರತ್ನ ಸೂರ್ಯೋದಯ! ಅದನ್ನು ಕಂಡವರು ಎಷ್ಟು ಜನ? ಕಂಡರೂ ಮುತ್ತನ್ನು ಎಲ್ಲರಿಗೂ ತಂದವ ರೆಷ್ಟು ಜನ? ಅಂಥವರಲ್ಲಿ ಬಸವಣ್ಣನವರೊಬ್ಬರು. ಅವರ ಹೃದಯ ರತ್ನಾ ಕರಾನ್ವೇಷಣದ ಪ್ರಾರಂಭ ಸ್ಥಿತಿಯ, ಪ್ರಥಮಸ್ತರದ ಚಿತ್ರಣವನ್ನು ಈ ಪ್ರಾಣ ರೂಪಕಗಳಲ್ಲಿ ಹೆಚ್ಚಾಗಿ ಕಾಣುತ್ತೇವೆ, ಅಷ್ಟೆ!

## ಮಹಾಭಾರತದಲ್ಲಿ

# ಅವರು ಯಾರೂ ಕಾಯಲಿಲ್ಲ

ಮಹಾಭಾರತದ ಪ್ರಾರಂಭದ ಕಥೆಯೆಲ್ಲವೂ ಆತುರಕ್ಕೆ ಆಹುತಿಯಾದ ಅನಾಹುತ ಪರಂಪರೆಯಾಗಿದೆ. ಆದಿಯ ಈ ಅನಾಹುತಗಳ ಪರಿಣಾಮ ತತ್ಕಾಲೀನವಾದುದಾಗಿರದೆ ಸಮಸ್ತ ಕುರುಕುಲವನ್ನೇ, ಅಷ್ಟೆ ಏಕೆ, ಮಹಾಭಾರತ ಸಮಸ್ತವನ್ನೂ, ದ್ವಾಪರ ಮಹಾಯುಗವನ್ನೂ ಮಹಾದುರಂತಕ್ಕೊಡ್ಡುವಂತಹ ಸುದೀರ್ಘ ಅಘೋರ ಪರಿಣಾಮವುಳ್ಳ ಪರಮಾಣುಸ್ಫೋಟದಂತಾಗಿದೆ. ಅಕಾಲದಲ್ಲಿ, ಕಾಲ ಪೂರ್ವದಲ್ಲಿ, ಬಯಕೆ ಕೈಗೂಡಲೆಂಬ ಆತುರ-ಕಾತರ-ಕುತೂಹಲ ಅಸಹನೆಗಳೆ ಈ ಅಸೂಹ್ಯ ಅನಂತ ದುರಂತಕ್ಕೆ ಹೇತುವಾಗಿವೆ. ಇದಕ್ಕೆಲ್ಲ ಮೂಲ ಕಾರಣವಾಗಿ ಇಲ್ಲಿನ ತಾಯಂದಿರ ವರ್ತಿಸುವುದನ್ನು ನೆನೆದಾಗಲಂತೂ ಈ ವಿಷಾದ ಅಸೀಮವಾಗುತ್ತದೆ. ಮಹರ್ಷಿ ವ್ಯಾಸರಂತಹವರೂ ತಮ್ಮ ತಾಯಿಯ ಅಕಾಲಸಿದ್ಧಿಯ ಬಯಕೆಯನ್ನು ತಡೆಗಟ್ಟಲಾಗದೆ ಅದನ್ನನುಗ್ರಹಿಸಿ ಈ ದುರ್ದುರಂತ ಘಟನಾವಳಿಗೆ ಗುದ್ದಲಿ ಪೂಜೆ ಮಾಡುತ್ತಾರೆ. ಕುಂತಿ ಗಾಂಧಾರಿಯರು ಆ ದುರಂತ ವೇಗವನ್ನು ಅತಿತ್ವರೆಗೊಳಿಸಿ ಆ ಅನಾಹುತ ವಕ್ರ ರೇಖಾಮಾರ್ಗವನ್ನು ವಿಷಾದ ಚಕ್ರವ್ಯೂಹವಾಗಿ ಪರಿವರ್ತಿಸುತ್ತಾರೆ. ಧೃತರಾಷ್ಟ್ರ ಕುರುಡನಾದದ್ದು ಪಾಂಡು ಪಾಂಡುರೋಗಿಯಾದದ್ದು ಎಲ್ಲವೂ ಆ ಹಿರಿಯರ ಆತುರ-ಕಾತರ-ಅವಿವೇಕದ ಫಲವಾಗಿಯೆ_ಸತ್ಯವತಿಯ ಆತುರದಿಂದಾಗಿ ಹಾಗೂ ಅಂಬಿಕೆ ಅಂಬಾಲಿಕೆಯರ ಕ್ಷನ್ಯವಿಷಾದ ಪ್ರಮಾದದಿಂದಾಗಿಯೆ. ಕರ್ಣನ ದುರಂತತಮ ದಾರುಣ ಜೀವನಕ್ಕೆ ಕುಂತಿಯ ಸಹಜ ಕೌಮಾರೀ ಕುತೂಹಲ ಕಾರಣವಾದರೆ, ದುರ್ಯೋಧನಾದಿ ದುಸ್ ಸಹೋದರರ ವಕ್ರ ದುರಂತಕ್ಕೆ ಗಾಂಧಾರಿಯ ವಿಷಯ ಸಹಜ ಈರ್ಷೆಯಿಂದಾದ ಗರ್ಭಪಾತ ವಿಷಬೀಜವಾಗುತ್ತದೆ. ಇದರ ಫಲವೆಂದರೆ ಇಡೀ ಮಹಾಭಾರತ ಘೋರದುರಂತವ್ಯೂಹವಾಗುವುದೆ. ಆ ಚಕ್ರವ್ಯೂಹದಿಂದ ಯಾರೂ ತಪ್ಪಿಸಿಕೊಂಡು ಹೊರಬರಲಾಗಲಿಲ್ಲ–ಕೃಷ್ಣಾರ್ಜುನ ಧರ್ಮಾದಿಗಳಂತಹ ಕೆಲವರು

ವಿನಾ. ಹಾಗೆ ನೋಡುವುದಾದರೆ ಯುದ್ಧಾನಂತರದ ದುರಂತಛಾಯೆ, ಕೃಷ್ಣನನ್ನುಳಿದು, ಅವರನ್ನೂ ಆಕ್ರಮಿಸಲಿಲ್ಲವೆಂದು ಯಾರುತಾನೆ ಹೇಳಬಲ್ಲರು.

'ಕಾಯುವುದೂ ಒಂದು ಕರ್ಮ,' 'ಕಾಯುವುದು ತಪಸ್ಸೂ ಆಗಬಲ್ಲದು,' ಎಂಬ ಬಲವತ್ತರವಾದ ಅರಿವು ಆ ಯಾವ ತಾಯಂದಿರಿಗಾದರೂ ಇದ್ದಿದ್ದರೆ, ಅವರ ಆತುರ ಬುದ್ಧಿಗೇನಾದರೂ ಕಡಿವಾಣವೊಂದು ಎಲ್ಲಿಂದಲಾದರು ಬಂದಿದ್ದರೆ, ಕಾಲಪೂರ್ವದ ಸಿದ್ಧಿಯ ಬಯಕೆ ವಿಷಘೋರವಾದೀತೆಂಬ ಎಚ್ಚರವಿದ್ದಿದ್ದರೆ ಮಹಾಭಾರತಕ್ಕಿಂತಲೂ ಮಂಗಲಮಯ ಸಾಮ್ರಾಜ್ಯವಿನ್ನೊಂದಿರುತ್ತಿರಲಿಲ್ಲ. ಮಾನವ ಸಾಮಾನ್ಯಕ್ಕಿರುವ ಈ ಆತುರಾಕಾಂಕ್ಷೆಯೆ ಶೀಘ್ರ ಫಲೇಚ್ಛೆಯೆ ಆ ತಾಯಿಯರನ್ನೂ ದುರ್ಮೋಹಕ್ಕೊಡ್ಡುತ್ತದೆ. ಆದರೆ ಅದರ ಪರಿಣಾಮ ಪರಿಮಿತವಾಗಿದ್ದಿರದೆ ಅಸೀಮಿತವಾಗುತ್ತ ಹೋಗುತ್ತದೆ. ಮಹರ್ಷಿ ವ್ಯಾಸರ ಅನ್ಯಾದೃಶ ದಿವ್ಯ ಪ್ರತಿಭೆ ಈ ದರ್ಶನವನ್ನು ಅತ್ಯಂತ ಧ್ವನಿಪೂರ್ಣವಾಗಿ ಅತ್ಯಂತ ಸರಲ ಸಾಮಾನ್ಯವಾಗಿ ಮಹಾಭಾರತ ಕಥೆಯ ಆದಿಯಲ್ಲೆ ಅದೃಶ್ಯ ರೇಖೆಯಿಂದ ಚಿತ್ರಿಸಿದೆ. ಇದರ ಅತಿಶಯತೆಯೆಂದರೆ, ವ್ಯಾಸ ಮಹರ್ಷಿಗಳೂ ಈ ಅನಾಹುತ ಸಂಭವವನ್ನು ತಪ್ಪಿಸಲಾಗದೆ, ಕರ್ಮಸಾಕ್ಷಿಯಂತೆ, ದಿವ್ಯನಿರ್ಲಕ್ಷ್ಯೆಯ ಕರ್ಮಯೋಗಿಯಂತೆ, ತಾವೆ ಆ ಅನಿವಾರ್ಯ ಘಟನೆಗಳಲ್ಲಿ ಪಾತ್ರಧಾರಿಯಾಗುವುದನ್ನು ಕಂಡಾಗ ಆಗುವ ಮಹಾರುದ್ರ ದರ್ಶನದ ಅನುಭವ.

ಇಲ್ಲಿ ಈ ಮಹರ್ಷಿ ಅನೇಕ ಬಗೆಯ ಆತುರ ಕಾತರಗಳನ್ನು ದರ್ಶನ ಮಾಡಿಸಿದ್ದಾರೆ. ಹಾಗೂ ಒಬ್ಬೊಬ್ಬರ ಆತುರಕ್ಕೂ ಒಂದೊಂದು ಸ್ವಭಾವ ಕಾರಣವಾಗಿರುವುದನ್ನೂ ನಮಗಿಲ್ಲಿ ಕಾಣಿಸಿದ್ದಾರೆ. ಮಕ್ಕಳಿಲ್ಲದೆ ರಾಜ್ಯ ಅರಾಜಕವಾಗುತ್ತದಲ್ಲ ಎಂಬ ಸದುದ್ದೇಶದಿಂದಲೆ ಆದರೂ ಅಕಾಲ ಫಲ ಪಡೆಯಲು ಕಾತರಿಸುವಂತೆ ಆತುರಿಸುವಂತೆ ಸತ್ಯವತಿಯನ್ನು ಪ್ರೇರಣೆಮಾಡುವ ಅವಳ ಸ್ವಭಾವವೇ ಸನ್ನಿವೇಶವೇ ಬೇರೆ ; ದೂರ್ವಾಸರಿಂದ ಬಂದ ಮಂತ್ರಗಳನ್ನು ಪರೀಕ್ಷಿಸಬೇಕೆಂದು ಕುಂತಿಗೆ ಬಂದ ಸಹಜಕೌಮಾರೀ ಕುತೂಹಲ ಆಸಕ್ತಿ--ಕರ್ಣನ ದುರಂತ ಜೀವನ ಗೋಪುರದ ನಡುಗಲ್ಲಾಗುವಂತಹ ಹಾಗೂ ಅಡಿಗಲ್ಲಾಗುವಂತಹ ಆ ಅವಳ ವರ್ತನವೇ—ಬೇರೆ ಬಗೆಯದು; ದುರ್ಯೋಧನಾದಿಗಳ ದುರ್ವಿಧಿಗೆ ಮೂಲಬೀಜವಾದ, ಗಾಂಧಾರಿಯ ಅಸಹನೆ ದುಡುಕಿನಿಂದಾದ ಗರ್ಭ

ಮಂಥನವೆ ಬೇರೆಯ ವಿಧವಾದದ್ದು. ಇವೆಲ್ಲ, ಪ್ರಾರಂಭದಲ್ಲೇ ಭದ್ರದುರಂತ ವೇದಿಕೆಯನ್ನು ರಚಿಸಿದ ಮೇಲೆ ಮುಂದೆ ಅದರ ನೆಲಗಟ್ಟಿನಮೇಲೆ ಕಟ್ಟಿಕೊಳ್ಳುವ ಸೌಧವಾದರೂ ಎಂತಹದು, ಅರಗಿನರಮನೆಯಲ್ಲದೆ ? ಕಟ್ಟಕಡೆಯಲ್ಲಿ ಕರ್ಣ ಉತ್ಸಾಹವೀರ-ಸ್ವಾಮಿವಿಜಯಾಕಾಂಕ್ಷೆ-ಸ್ವಲ್ಪ ಅಹಂಭಾವ–ಇವುಗಳಿಂದಾಗಿ ತೋರಿದ ಆತುರವೇ ಬೇರೆ ರೀತಿಯದು. ವೈಶಂಪಾಯನ ಸರೋವರದಲ್ಲಿ ಜಲಸ್ತಂಭನ ಮಂತ್ರ ಜಪಿಸುತ್ತಿದ್ದ ದುರ್ಯೋಧನ ತನ್ನ ಆಜನ್ಮವೈರಿಗಳ ಕರ್ಕಶ ಆರ್ಭಟವನ್ನು ಕೇಳಿ ಕಿಂಚಿತ್‌ಕಾಲ ಕಾಯದೆ ನೀರೊಳಗಿಂದ ಮೇಲ್ಸಿಡಿದಂತೆ ಮುನ್ನುಂಕಿದ, ಮೃತ್ಯುವಿಗೆ ದೂಡಿದ ಆತುರ-ಸ್ವಭಾವಗಳೆ ಬೇರೆ. ಅಂತೂ ಬಗೆಬಗೆಯ ಆತುರ, ಬಗೆಬಗೆಯ ಅನಾಹುತ ಪರಂಪರೆಯನ್ನಿಲ್ಲಿ ಮಹಾಭಾರತದಲ್ಲಿ ದರ್ಶನ ಮಾಡುತ್ತೇವೆ.

ಈಗಿಲ್ಲಿ, ಸತ್ಯವತಿಯ ಪ್ರಸಂಗವನ್ನು ನೋಡಬಹುದು : ಶಂತನುರಾಜನನ್ನು ಕೈಹಿಡಿದ ಸತ್ಯವತಿ ವಿಚಿತ್ರವೀರ್ಯ ಚಿತ್ರವೀರ್ಯರೆಂಬ ಮಕ್ಕಳನ್ನು ಪಡೆಯುತ್ತಾಳೆ ; ಗಂಡ ತೀರಿಹೋದ ಹಿಂದೆಯೆ ಒಬ್ಬ ಮಗನೂ ಯುದ್ಧ ಹತನಾದ. ಉಳಿದೊಬ್ಬನಿಗೆ ರಾಜ್ಯಾಭಿಷೇಕಮಾಡಿ ಇಬ್ಬರು 'ಅಪ್ಸರೆಯಂತಹ'ರಾದ ರಾಜಕನ್ಯೆಯರನ್ನು ತಂದು ಮದುವೆ ಮಾಡುತ್ತಾರೆ, ಭೀಷ್ಮ. ಹಾಗೆ ಮಾಡುವ ಮಹಾತ್ಯಾಗ ಸತ್ಯನಿಷ್ಠೆಯ ಉತ್ಸಾಹದಲ್ಲಿ ಅವರು ತಮ್ಮ ಮೇಲೆ ದೂರದುರಂತವೊಂದನ್ನು ತಂದುಕೊಳ್ಳುತ್ತಾರೆ, ಅಂಬೆಯ ಪ್ರಣಯ ತಿರಸ್ಕಾರದಿಂದಾಗಿ. ಇತ್ತಕಡೆ ವಿಚಿತ್ರವೀರ್ಯ ರಾಜಯಕ್ಷ್ಮದಿಂದ ಸಾಯುತ್ತಾನೆ. ರಾಜ್ಯಕ್ಕೆ ಅಭಿಷಿಕ್ತ ರಾಜನಿಲ್ಲ. ಉಳಿದಿರುವ ದಾರಿಯೇನು ? ದುಃಖದಲ್ಲಿ ಮುಳುಗಿದ ಸತ್ಯವತಿ ಚೇತರಿಸಿಕೊಂಡು ಭೀಷ್ಮರನ್ನು ಬೇಡಿಕೊಳ್ಳುತ್ತಾಳೆ : ತನ್ನ ಮಗನ ಸತಿಯರಲ್ಲಿ ಮಕ್ಕಳನ್ನು ಪಡೆ, ಎಂದು. ಅದು ಅಂದಿನ ಧರ್ಮವಾಗಿರುತ್ತದೆ. ಭೀಷ್ಮರೂ ಆ ತಾಯ ಮಾತನ್ನು ಧರ್ಮವೆಂದು ಒಪ್ಪಿದರೂ ಸತ್ಯವನ್ನು, ತಮ್ಮ ಪ್ರತಿಜ್ಞೆಯನ್ನು ಭಂಗಗೊಳಿಸಲಿಚ್ಛಿಸುವುದಿಲ್ಲವಾಗಿ ಮತ್ತೆ ಶಪಥಗೊಳ್ಳುತ್ತಾರೆ. ಆ ರಾಜಮಾತೆಗೆ ಉಳಿದಿರುವ ದಾರಿ ಒಂದೆ: ತನ್ನ ಮೊದಲೊಲ್ಮೆಯ ಮಗನನ್ನು, ವ್ಯಾಸರನ್ನು ಕೇಳಿಕೊಳ್ಳುವುದಷ್ಟೆ. ಭೀಷ್ಮರ ಸಮ್ಮತಿಯಂತೆ ಅವರನ್ನೂ ನೆನೆದುಕೊಳ್ಳುತ್ತಾಳೆ. ಆ ಮಹರ್ಷಿ ಬಂದು ತಾಯ ಆಜ್ಞಾಪನೆಯನ್ನು ಕೇಳುತ್ತಾರೆ. ಅದಕ್ಕೆ ಕಣ್ಣೀರು ತಂದುಕೊಂಡು ಆ ತಾಯಿ ಹೇಳಿದ ಮಾತಿನ ಕಡೆಯ ಭಾಗ

ವಿದು :*"ಓ ಕಂದ ! ತಮ್ಮನ ಸಂತತಿಗಾಗಿ, ಕುಲದ ಸಂತಾನಕ್ಕಾಗಿ—ಆವಶ್ಯಕತೆಯಿಂದಾಗಿ—ಈ ಭೀಷ್ಮನ ಮಾತಿಗಾಗಿ, ನನ್ನ ನಿಯೋಗದಂತೆ, ಭೂತಾನುಕಂಪೆಯಿಂದ, ಸರ್ವರಕ್ಷಣೆಗಾಗಿ ಕರುಣೆಯಿಂದ, ಓ ಕಂದ, ನಾ ಹೇಳುವುದನ್ನು ಕೇಳಿ ನೀನು ಅದರಂತೆ ಮಾಡಲನುವಾಗು. ನಿನ್ನ ಚಿಕ್ಕ ತಮ್ಮನ ಹೆಂಡಿರು ಸುರಸುತೋಪಮರಪ್ಪ ! ಧರ್ಮದಿಂದ ಮಕ್ಕಳಾಗಬೇಕೆಂದು ಬಯಸುತ್ತಾರೆ. ಆ ಪುತ್ರಕಾಮಿಯರಲ್ಲಿ ಮಕ್ಕಳನ್ನು ಪಡೆಯಲು ಸಮರ್ಥನಾಗಿರುವೆಯಪ್ಪ ನೀನು, ಮಗು ! ಈ ಕುಲದ ಸಂತತಿಗೊಪ್ಪುವಂತಹ, ಪ್ರಸವಕ್ಕೆ ಅನುರೂಪವಾದಂತಹ ಮಕ್ಕಳನ್ನು ಪಡೆ !"

ಹೀಗೆ ಆ ರಾಜಮಾತೆ ಕೇಳಿದುದಕ್ಕೆ ಮಹರ್ಷಿಯು ಉತ್ತರವಿದು : "ಪರಾಪರ ಧರ್ಮಗಳನ್ನೆಲ್ಲ ತಿಳಿದೆ ಇರುವೆ ನೀನು, ಸತ್ಯವತೀ ! ಹಾಗೆಯೆ ನಿನ್ನ ಬುದ್ಧಿ ಧರ್ಮದಲ್ಲಿ ನೆಲಸಿದೆ, ಮಹಾ ಪ್ರಜ್ಞಾವತಿ ! ಆ ಕಾರಣದಿಂದಾಗಿ, ನಿನ್ನ ನಿಯೋಗದಂತೆ ಧರ್ಮವನ್ನೆ ಕಾರಣವನ್ನಾಗಿ ಭಾವಿಸಿ ನಿನ್ನ ಇಷ್ಟವನ್ನು ನೆರವೇರಿಸುವೆ. ಇದು ಸಂಪ್ರದಾಯವಾಗಿ ಕಂಡಿದೆಯಲ್ಲವೆ ? **ತಮ್ಮನಿಗೆ, ಮಿತ್ರಾ ವರುಣ ಸಮಾನರಾದ ಮಕ್ಕಳನ್ನೆ ಕೊಡುವೆ. ಆ ದೇವಿಯರು ನಾನು ನಿರ್ದೇಶಿಸಿದ ವ್ರತವನ್ನ ಯಥಾನ್ಯಾಯವಾಗಿ ಒಂದು ವರ್ಷಕಾಲ ಆಚರಿಸಲಿ. ವ್ರತವಿಲ್ಲದೆ ಯಾವೊಬ್ಬ ಅಂಗನೆಯೂ ನನ್ನನ್ನು ಹೊಂದುವುದಿಲ್ಲ."**

ಮಗನ ಸಾಧಾರಣ ಸಮ್ಮತಿಗೆ ತಾಯಿ ಹಿಗ್ಗುತ್ತಾಳೆ. ಆದರೆ ನಿಯಮಕ್ಕೆ ಕುಗ್ಗಿ ಹೀಗೆಂದು ಮಗನನ್ನೆ ಮತ್ತೆ ಒತ್ತಾಯಪಡಿಸುತ್ತಾಳೆ :

**"ಈಗಲೇ, ಆ ದೇವಿಯರು ಹೇಗೆ ಗರ್ಭಧಾರಣ ಮಾಡಬಹುದೊ ಹಾಗೆ ನಡೆ !** ಅರಾಜಕವಾದ ರಾಜ್ಯಗಳಲ್ಲಿ ಪ್ರಜೆ ಅನಾಥವಾಗಿ ನಶಿಸುತ್ತದೆ. ಕ್ರಿಯೆಗಳೆಲ್ಲ ನಶಿಸುತ್ತವೆ. ಅಲ್ಲಿ ಮಳೆಯಿಲ್ಲ, ದೇವತೆಗಳಿಲ್ಲ, ಪ್ರಭೋ ! ಅರಾ

---

*ಇನ್ನು ಮುಂದೆ ಉದ್ಧರಿಸಿರುವ ಕಥಾ ಭಾಗವನ್ನು ವ್ಯಾಸ ಮಹಾಭಾರತದಿಂದಲೆ ನೇರವಾಗಿ ಖಚಿತವಾಗಿ ಅನುವಾದಮಾಡಲಾಗಿದೆ. ಇದರ ಬಹುಭಾಗವನ್ನು ಸನ್ಮಾನ್ಯ ಶ್ರೀ ಪಾಠಣಕರ ಚಂದ್ರಶೇಖರಭಟ್ಟರ ನೆರವಿನಿಂದ ಮಾಡಲಾಗಿದೆ. ಮಿತ್ರರಾದ ಶ್ರೀ. ಸಿ. ರಾಮಾಚಾರ್ ಅವರೂ ಈ ಕೆಲಸದಲ್ಲಿ ತಕ್ಕ ನೆರವಿತ್ತಿದ್ದಾರೆ. ಅವರಿಬ್ಬರಿಗೂ ನನ್ನ ಹೃತ್ಪೂರ್ವಕ ಕೃತಜ್ಞತಾ ನಮಸ್ಕಾರಗಳು.

ಜಕ ರಾಷ್ಟ್ರ ಹೇಗೆ ತಾನೆ ಬದುಕಬಲ್ಲದು ? ಆದ್ದರಿಂದ ಗರ್ಭದಾನಮಾಡು : ಭೀಷ್ಮ ರಕ್ಷಿಸುತ್ತಾನೆ."

ಮೇಲಿನ ಸತ್ಯವತಿಯ ಮಾತಿನಲ್ಲಿ ಸ್ಪಷ್ಟವಾಗುತ್ತದೆ-ಅವಳಿಗಿದ್ದ ಆತುರ. ಆದರೀ ಆತುರಕ್ಕೆ ಸ್ವಸುಖವಲ್ಲ, ರಾಜ್ಯದ ವಂಶದ ಸಂತಾನದ ಹಿತವೆ ಮುಖ್ಯ ವಾಗಿವೆ. ಕಾರಣ ಯಾವುದಾದರೇನಂತೆ, ಅದರಿಂದಾಗುವ ಅನಾಹುತ ಅಷ್ಟೊ ಇಷ್ಟೊ ಆಗಲೆಬೇಕಲ್ಲ. ತಾಯ ಸದಾಶಯವನ್ನರಿತ ಮಹರ್ಷಿ ಹೀಗೆನ್ನುತ್ತಾರೆ, ಆಗುವ ಅನಾಹುತವನ್ನು ಒಂದಷ್ಟಾದರೂ ಸಂಯಮಗೊಳಿಸಬೇಕೆಂದು :

**"ತಮ್ಮನಿಗೆ ಅಕಾಲದಲ್ಲಿ ಮಕ್ಕಳನ್ನು ನೀಡಬೇಕಾದರೆ, ನನ್ನ ವಿರೂಪ ವನ್ನವರು ಸಹಿಸಬೇಕು ! ಅವರಿಗದೇ ಮುಖ್ಯವ್ರತ ! ನನ್ನ ಗಂಧ, ರೂಪ, ವೇಷ ಹಾಗೂ ವಪುವನ್ನು ಸಹಿಸುವಳಾದರೆ ಆ ಕೌಸಲ್ಯೆ (ಕೋಸಲರಾಜನ ಮಗಳು ಅಂಬಿಕೆ) ಈ ಇಂದೇ ಶ್ರೇಷ್ಠ ಗರ್ಭವನ್ನು ಧರಿಸಲಿ !"**

ತಾಯಿಯ ಆತುರಕ್ಕೆ ಮಗ ಹಾಕುವ ಶರತ್ತು ಬಹಳ ಸೂಕ್ಷ್ಮ, ಹಾಗೂ ಕಷ್ಟತರವಾಗಿಯೆ ಇದ್ದವು. ಒಂದು ವರ್ಷದ ವ್ರತ ನಿವಾರಣಗೊಂಡರೂ ಅಂದೇ ಅನುಸರಿಸಬೇಕಾದ, ವರ್ಷವ್ರತಕ್ಕೂ ಕಷ್ಟ ಸಾಧ್ಯವಾಗಬಹುದಾದ ಆ ಅವನ ವಿರೂಪ, ಗಂಧ, ವೇಷ, ವಯಸ್ಸುಗಳನ್ನು ಸಹಿಸಿಕೊಳ್ಳಬೇಕಾದ ಮುಖ್ಯ ವ್ರತ ಬಂದೇ ಬರುತ್ತದೆ. ತಾನಿನ್ನೂ ಕನ್ಯೆಯಾಗಿದ್ದಾಗ ತನ್ನ ಮತ್ಸ್ಯಗಂಧವನ್ನು ಪರಿಹರಿಸಿ ತನಗೆ ಯೋಜನ ಗಂಧಿತ್ವವನ್ನು ದಯಪಾಲಿಸಿ ತನ್ನೊಡನೆ ರಮಿಸಿದ ಆ ಪರಾಶರ ಮುನಿಗಳು-ಇದೇ ವ್ಯಾಸರ ತಂದೆ-ಹಾಗೆ ನೋಡುವುದಾದರೆ ಆತುರಪಡಲಿಲ್ಲವೆ ? ಅವರಿಗೆ ಆ ದಿವ್ಯ ಶಕ್ತಿಯಿದ್ದಂತೆ ತನ್ನ ಮಗನಿಗೂ ಇದ್ದಿರುವಾಗ ಅವನೇಕೆ ತಾನೆ ತನ್ನ ವಿರೂಪಾದಿಗಳನ್ನು ಸುರೂಪ ಗೊಳಿಸಿಕೊಂಡು ಆ ಸೊಸೆಯರನ್ನು ಎದುರುಗೊಳ್ಳುವುದಿಲ್ಲ—ಎಂದೇನೊ ಆ ರಾಜಮಾತೆ ಭಾವಿಸಿದ್ದಿರಬೇಕು, ಪಾಪ ! ಆದರೆ ವ್ಯಾಸರು ಸ್ವಸುಖಕ್ಕಾಗಿ ಧಾವಿಸಿ ಬಂದಿಲ್ಲ ; ಧರ್ಮಕ್ಕಾಗಿ ಕರ್ತವ್ಯಕ್ಕಾಗಿ ಬಂದಿದ್ದಾರೆ. ಆದ್ದರಿಂದ ಅವರು ಯಾವ ಮಾಯಾ ಮಂತ್ರಗಳನ್ನೂ ಮಾಡುವುದಿಲ್ಲ. ತಾಯಿಗೆ ಅದು ತಿಳಿಯಿತೊ ಇಲ್ಲವೊ. ಅವಳಿಗಿದ್ದ ಮತ್ತೊಂದು ಧೈರ್ಯವೆಂದರೆ ತನ್ನ ಸೊಸೆ ಯರು 'ಪುತ್ರಕಾಮಿ'ಯರಾದ್ದರಿಂದ ಅಂತಹ ಮಹರ್ಷಿಯನ್ನು ಸಂತೋಷ

ದಿಂದಲೆ ಸ್ವಾಗತಿಸಿಯಾರೆಂಬ ಭಾವನೆಯಾಗಿತ್ತೊ ಏನೊ. ರಾಜ್ಯದ ಹಿತಾಕಾಂಕ್ಷೆಯ ಭರದಲ್ಲಿ ಆ ತಾಯಿ ತನ್ನ ಎಳೆವಯಸ್ಸಿನ ಸೊಸೆಯರ ಮನಸ್ಥಿತಿಯನ್ನು ಗಮನಿಸಲೆ ಇಲ್ಲ. ಪಾಪ, ಅವಳ ಪಡೆದ ಎರಡೂ ಪ್ರಣಯ ಸಂಬಂಧವೂ ಅನುರೂಪವಾದದ್ದೇನೂ ಆಗಿಯೆ ಇರಲಿಲ್ಲ. ಅಂದು ಆ ವೃದ್ಧ ಋಷಿ ಪರಾಶರರ ಸಂಗವಾಯಿತು; ಅದೇನು ಅನುರೂಪವೆ, ಪ್ರಿಯವೆ? ಋಷಿಗಳ ದಿವ್ಯ ತೇಜಸ್ಸಿಗೆ ಹೆದರಿದಳು, ತನ್ನನ್ನು ಸುಗಂಧಿಯನ್ನಾಗಿ ಅವರು ಪರಿವರ್ತಿಸಿದ್ದರಿಂದ ಅವರ ಬಗ್ಗೆ ಕೃತಜ್ಞತಾ ಭಾವ ತಾಳಿಕೊಂಡಳು, ಅಷ್ಟೆ. ಅವರ ಸಂಗವಾದ ನಂತರವೂ 'ಕನ್ಯತ್ವ' ಬಂತು ಆ ಹೆಣ್ಣಿಗೆ. ಮುಂದೆ ರಾಜ ಶಂತನುವನ್ನು ಕೈಹಿಡಿಯಬೇಕಾಯಿತು. ಅವನೇನೊ ತನ್ನನ್ನು ಮೆಚ್ಚಿಬಂದ ಸರಿ. ಆದರೆ ತನಗೆ ಆಸೆಯಾಯಿತೆ? ಭೀಷ್ಮನಂತಹ ತರುಣ ಪುತ್ರನಿರುವ ಆ ರಾಜನನ್ನು ತಾನು ಸೂಕ್ಷ್ಮವಾಗಿ ನಿವಾರಿಸಿದ್ದರೂ ಮದುವೆ ಆಗಲೇಬೇಕಾಯಿತಲ್ಲ. ತಾನು ಅವನೊಡನೆ ಬಾಳಿದುದಾದರೂ ಎಷ್ಟು ದಿನ....ಇಷ್ಟೆಲ್ಲ ಅಹಿತ ಸುಖವನ್ನನುಭವಿಸಿದ್ದ ಈ ಸತ್ಯವತಿ ತನ್ನ ವಿಧವೆ ಸೊಸೆಯರ ಇಂಗಿತವನ್ನು ತನ್ನಂತೆಯೆ ಎಂದುಕೊಂಡಳೊ ಏನೊ. ಆದ್ದರಿಂದಲೇ ಆಕೆಗೆ ಮಗನ ಷರತ್ತಿನ ಮೇಲೆ ಲಕ್ಷ್ಯವೆ ಹೋಗಲಿಲ್ಲ. ಮಗ ಹೇಳಿದ್ದ ಕಡೆಯ ಮಾತಿನಿಂದಷ್ಟೆ ತೃಪ್ತಳಾಗುತ್ತಾಳೆ: "ಆ ಕೌಸಲ್ಯೆ ಶುಚಿವಸ್ತ್ರಾಲಂಕೃತಳಾಗಿ ಶಯನದಲ್ಲಿ ನನ್ನ ಸಮಾಗಮನವನ್ನು ನಿರೀಕ್ಷಿಸುತ್ತಿರಲಿ!" ಆಕೆಗೆ ಸ್ವಸುಖರುಚಿಗಳಿಗಿಂತ ರಾಜಧರ್ಮ ರಕ್ಷೆ, ಕರ್ತವ್ಯ ನಿರ್ವಹಣ ಮುಖ್ಯವಾಗಿದೆ. ಆದರೆ ಇದನ್ನೆ ಮಾಡುವಾಗಲೂ, ಆತಂಕದಿಂದಾಗಿ, ಅಂದರೆ ರಾಜ್ಯ ಅನಾಯಕವಾಗಿ ಅನ್ಯವಾದೀತೆಂಬ ಕಾರಣದಿಂದಾಗಿ ಆತುರ ಪಡುತ್ತಾಳೆ.

ಮಗನ ಮಾತಿನಿಂದ ತೃಪ್ತಳಾದ ಈ ತಾಯಿ ತನ್ನ ಮೊದಲ ಸೊಸೆಯೊಡನೆ 'ಧರ್ಮಾರ್ಥಯುತವಾದ ಮಾತನ್ನಾಡುತ್ತಾಳೆ' : "ಕೌಸಲ್ಯೆ! ನಾ ಹೇಳುವ ಧರ್ಮಮಂತ್ರವನ್ನು ತಿಳಿ! ನನ್ನ ಭಾಗ್ಯಕ್ಷಯದಿಂದ ಭರತ ರಾಜರಿಗೆ ಕೊನೆ ಬಂದಿದೆ. ವ್ಯಥೆಗೊಂಡ ನನ್ನನ್ನ, ಪೀಡೆಗೊಂಡ ಈ ವಂಶವನ್ನ ನೋಡಿ ಭೀಷ್ಮ ಈ ವಂಶದ ಅಭಿವೃದ್ಧಿಗೆಂದು ನನಗೊಂದು ಬುದ್ಧಿವಾದ ನೀಡಿದ್ದಾನೆ. ಅದು ನಿನ್ನ ಅಧೀನ! ಮಗಳೆ! ನನ್ನನ್ನು ಹಾಗೆ ದಡ ಮುಟ್ಟಿಸಿಬಿಡಮ್ಮ! ಅಳಿಸಿ ಹೋದ ಭಾರತವನ್ನು ಉದ್ಧಾರಮಾಡು! ಸುಶ್ರೋಣಿ! ದೇವರಾಜ ಸಮ

ಪ್ರಭನಾದ ಮಗನನ್ನು ಪಡೆ! ಅವನು ನಮ್ಮ ವಂಶದ ಅತಿಭಾರವಾದ ನೊಗವನ್ನು ಹೊರುತ್ತಾನೆ!" ಹೀಗೆ 'ಧರ್ಮಚಾರಿಣಿಯಾದ ತನ್ನ ಸೊಸೆಯನ್ನು ಹೇಗೋ ಧರ್ಮ ಬದ್ಧಳನ್ನಾಗಿ ಮಾಡಿ ಸಂತೈಸಿ, ವಿಪ್ರ ದೇವರ್ಷಿ ಅತಿಥಿಗಳಿಗೆಲ್ಲ ಸಮಾರಾಧನ ಮಾಡುತ್ತಾಳೆ.'

ಮಹಾಕವೀಶ್ವರ ವ್ಯಾಸರು ಮೇಲಿನ ಪ್ರಸಂಗವನ್ನು ಎಷ್ಟು ಗಂಭೀರವಾಗಿ ಗೂಢವಾಗಿ ನಿರ್ವಹಿಸುತ್ತಾರೆ! ಸೊಸೆಯನ್ನು ಭೀಷ್ಮರ ಹೆಸರು ಹೇಳಿ ಧರ್ಮ ಬದ್ಧಗೊಳಿಸುವ ಸತ್ಯವತಿ ಎಷ್ಟು ಎಚ್ಚರವಾಗಿದ್ದಾಳೆ. ಅವಳ ಎಚ್ಚರವೇ ಮಹಾ ಪ್ರಮಾದವಾಯಿತು. ಪಾಪ; ಆ ಎಳೆಯ ವಿಧವೆಯ ಮನಸ್ಸು ಧರ್ಮ ಬದ್ಧವಾಯಿತೇನೊ ಸರಿ ; ಭೀಷ್ಮರ ಹೆಸರು ಕೇಳಿಯೆ ಸಮಾಧಾನಗೊಂಡಿತು. ಆದರೆ ಅವರ ಹೆಸರು ಏತಕ್ಕಾಗಿ ಬಂತು ಎಂಬುದನ್ನು ತಿಳಿಯದೆ ಧರ್ಮಬದ್ಧ ವಾಗುತ್ತಾಳೆ. ಭೀಷ್ಮರು ಗೆದ್ದು ತಂದ ಮೂವರು ಸೋದರಿಯರಲ್ಲಿ ಇವಳು ಒಬ್ಬಳಷ್ಟೆ. ಮೊದಲವಳು, ಅಂಬೆ, ಕಣ್ಣೀರು ಸುರಿಸಿ, ಕೋಪಿಸಿ, ಯುದ್ಧ ಮಾಡಿಸಿ, ಶಪಿಸಿ ಸಾಯುತ್ತಾಳೆ; ಭೀಷ್ಮನನ್ನೇ ಭಯಂಕರವಾಗಿ ಪ್ರೀತಿಸುತ್ತಾಳೆ. ಅಂಥ ಅಕ್ಕನ ತಂಗಿಯೀವಳು ; ಆ ಚಲ ಬಲವಿಲ್ಲದ ತರುಣ ರಾಜ ಪುತ್ರನನ್ನೆ ಕೈ ಹಿಡಿದಿರುತ್ತಾಳೆ. ಆದರೆ ಅವನೂ ಸತ್ತ. ಆದರೆ ಭೀಷ್ಮರ ಬಗ್ಗೆ ಇದ್ದ ಬಯಕೆಯೂ ಸತ್ತಿತೆ? ಅಯ್ಯೋ! ಅದೀಗ ಮರುಕೊಳಿಸಿತೇನೋ! ಅದರಿಂದಲೇ ಅವನ ಹೆಸರನ್ನು ಕೇಳಿದೊಡನೆಯೆ ಸಮ್ಮತವಾಗುತ್ತಾಳೆ; ಒಳಗೊಳಗೆ ಸಮ್ಮುದವಾಗಿಯೂ ಇದ್ದಿರಬೇಕು. ಆದರೆ ಮುಂದೆ ಭಯಂಕರ ವಿಪರ್ಯಾಸ ಕಾದಿರುತ್ತದೆ.

"ಬಳಿಕ, ಸತ್ಯವತಿ, ಸೊಸೆ ಋತುಸ್ನಾನಗೊಂಡಿದ್ದ ಸಮಯದಲ್ಲಿ ಅವಳನ್ನು ಶಯನ ಗೃಹಕ್ಕೆ ಸೇರಿಸಿ ಹೀಗೆಂದು ಮೃದುವಾಗಿ ನುಡಿಯುತ್ತಾಳೆ: 'ಕೌಸಲ್ಯಾ! ನಿನಗೊಬ್ಬ ಭಾವನಿದ್ದಾನಮ್ಮ; ಅವನಿಂದು ನಿನ್ನ ಸಂಗ ಮಾಡುತ್ತಾನೆ. ಅಪ್ರಮತ್ತಳಾಗಿ ನೀನವನನ್ನು ನಿರೀಕ್ಷಿಸು. ನಡುರಾತ್ರಿ ಬರುತ್ತಾನೆ.'"

ಹೀಗೆಂದು ಮಾತ್ರ ಹೇಳುತ್ತಾಳೆ ಸತ್ಯವತಿ. 'ನಿನಗೊಬ್ಬ ಭಾವನಿದ್ದಾನೆ' ಎಂದಾಗ ಆ ಎಳೆ ಸೊಸೆಗೆ ಭೀಷ್ಮರ ಚಿತ್ರವಲ್ಲದೆ ಮತ್ತಾವ ರೂಪ ನೆನಪಿಗೆ ಬಂದೀತು? ವ್ಯಾಸರು ಸತ್ಯವತಿಯ ಮಗನೆಂಬ ಸುದ್ದಿ ರಹಸ್ಯವಾಗಿಯೇ ಇದ್ದಿರುವಾಗ ಅವರ ಸ್ಮರಣೆಯಾದರೂ ಏಕೆ ಬಂದೀತು. ಹಾಗೆ ಮೊದಲೆ ಅವ

ರನ್ನು ಕಂಡು ತಿಳಿದಿದ್ದರೇನಾಗುತ್ತಿತ್ತೊ, ಒಳಿತೆ ಆಗುತ್ತಿತ್ತೇನೊ. ಮುಂದಿನ ಕಥೆಯನ್ನು ಮಹರ್ಷಿ ಕವಿಯ ಲೇಖಣಿಯಿಂದಲೆ ತಿಳಿಯಬಹುದು.

"ಅತ್ತೆಯ ಆ ಮಾತನ್ನು ಕೇಳಿ ಶುಭ ಶಯನದಲ್ಲಿ ಮಲಗಿದ ಆಕೆ ಭೀಷ್ಮರ **ಹಾಗೂ ಮತ್ತಿತರ ಕುರುಪುಂಗವರನ್ನು ನೆನೆದುಕೊಳ್ಳುತ್ತಾಳೆ!** ಆಮೇಲೆ, ಅಂಬಿಕೆಯಲ್ಲಿ ಮೊದಲೆ ನಿಯುಕ್ತನಾದ ಆ ಸತ್ಯವಂತ ಋಷಿ ಒಳ ಬರುತ್ತಾನೆ, ದೀಪ ಬೆಳಗುತ್ತಿರುವಾಗ. ಆ **ಕೃಷ್ಣನ*** (ಅಂದರೆ ವೇದವ್ಯಾಸರ) ಕೆಂಜೆಡೆಯನ್ನೂ ಥಳಥಳಿಸುವ ಕಣ್ಣುಗಳನ್ನೂ ಕಂಡು ಮೀಸೆಯನ್ನೂ **ಕಂಡ ದೇವಿ ಕಣ್ಮುಚ್ಚಿದಳು.** (ಇಲ್ಲಿಯೂ ನೋಡಬಹುದು, ದೇವಿಯೆಂಬ ಮಾತನ್ನು ಬಳಸಿ ಕವಿ ಹೇಗೆ ಧ್ವನಿಸಿದ್ದಾರೆಂಬುದನ್ನು.) **ತಾಯಿಗೆ ಪ್ರಿಯವನ್ನಾಚರಿಸಲೋಸುಗ ಭಯದಿಂದ** ಅವಳೊಡನೆ ಕೂಡುತ್ತಾನೆ." ಪಾಪ! ಋಷಿವರ್ಯನಿಗಾದರೂ ಆ ಸಂಗದಲ್ಲಿ ಸೌಖ್ಯವಿದೆಯೆ? ಪ್ರೀತಿಯಿದೆಯೆ? ಸ್ವಾಗತವಿದೆಯೆ? ಅಪ್ರೀತಿಯ ಸ್ವಾಗತ! ಆದರೆ ಬೇಡವೆನ್ನಲಾಗುವುದೆ? ತಾಯಿಗೆ ಮಾತುಕೊಟ್ಟಾಗಿದೆ. **ಪ್ರಿಯವನ್ನಾಚರಿಸಬೇಕಿದೆ.** ಆ ಭಯವಿದ್ದೇ ಇದೆ. ಆದರಿಂದಾಗಿ ಹೇಗೋ ಧರ್ಮಬದ್ಧವಾಗಿ ಆ ಕರ್ತವ್ಯವನ್ನೆಸಗಬೇಕಿದೆ. 'ಊಡದ ಆವಿಂಗೆ ಉಣ್ಣದ ಕರುವ ಬಿಟ್ಟಂತೆ'! ಅಂಬಿಕೆ ಮಾತ್ರ ಅವನನ್ನು ನೋಡಲು ಶಕ್ತವಾಗಲಿಲ್ಲ! (ಇದರಿಂದ ತಿಳಿಯುತ್ತದೆ, ಆಕೆಗೆ ಭಾವಭಂಗವಾಗಿ ಆ ಋಷಿಯ ವಿಷಯದಲ್ಲಿ ಅಸಮಾಧಾನ ಅಪ್ರೀತಿ ಮಾತ್ರವೆ ಅಲ್ಲ ಉಂಟಾದುದು, ಅವನ ತೇಜಸ್ಸಿನ ಪರಿಚಯವೆ ಮೊದಲಾಗಿಲ್ಲದಿದ್ದುದರಿಂದ ಸುಕುಮಾರಿಯಾದ ಅವಳಿಗೆ ಅದರ ಹೊಳಪನ್ನು ಕಾಣಲು ಶಕ್ತಿಯಿರಲಿಲ್ಲ ಎಂದು.) ಆಮೇಲೆ ಅಲ್ಲಿಂದ ಹೊರಬಂದ ಮಗನ ಬಳಿ ಬಂದು ತಾಯಿ

---

*ಇಲ್ಲಿ ಕೃಷ್ಣ ಎನ್ನುವ ಮಾತನ್ನು ಬಳಸಿರುವ ಕವಿಋಷಿಯ ಧ್ವನಿಶಕ್ತಿಯನ್ನು ತಲೆದೂಗಿ ಮೆಚ್ಚಬೇಕು. ಕೃಷ್ಣ ಎಂದರೆ ಕಪ್ಪಾದ ಎಂದರ್ಥ; ವ್ಯಾಸರು ಕಪ್ಪಾಗಿದ್ದರಂತೆ. ಅವರಿಂದು ವೇದವ್ಯಾಸರಲ್ಲ, ಕೃಷ್ಣರು—ಆ ಪುತ್ರಕಾಮಿಯಾಗಿ ಅಭಿಸಾರಿಕೆಯಾಗಿರುವ ಅಂಬಿಕೆಯ ಕಣ್ಣಿಗೆ. ಅವರನ್ನು ಅವಳು ನೋಡುತ್ತಿರುವುದು ಅದೇ ಮೊದಲು. ಅವರು ಯಾರು ಎಂದು ತಿಳಿದಿಲ್ಲದ ಅವಳಿಗೆ ಕಾಣುವುದು ಕಪ್ಪು ವ್ಯಕ್ತಿ ಮಾತ್ರ. ಆದರೆ ಆ ಕೃಷ್ಣವ್ಯಕ್ತಿಯೆ ಮಹಾಋಷಿಯೆಂಬ ಭಾವನೆ ಮೊದಲಿನಿಂದಲೂ ಬೆಳೆದಿದ್ದರೆ ಆಗ ಆತನ ಕೃಷ್ಣತ್ವ ಎದ್ದು ಥಳಿಸುತ್ತಿರಲಿಲ್ಲ. ಅಂತೂ ಮಹಾಕವಿ ಈ ಪದ ಪ್ರಯೋಗದಲ್ಲೂ ತಮ್ಮ ಅಪಾರ ಪ್ರತಿಭೆಯನ್ನು ಮಿಂಚಿದ್ದಾರೆ,

ಕೇಳುತ್ತಾಳೆ: 'ಮಗೂ! ಈಕೆಯಲ್ಲಿ ಗುಣವಂತ ರಾಜಪುತ್ರ ಹುಟ್ಟುವನೆ!' (ಪಾಪ! ಅವಳ ಗಮನವೆಲ್ಲ ಸಂತಾನಕರ್ತವ್ಯವೊಂದನ್ನುಳಿದು ಮತ್ತಾವ ಕಡೆಯೂ ಇಲ್ಲ.) ಆಗ ತಾಯ ಮಾತನ್ನು ಕೇಳಿ ಹೀಗೆನ್ನುತ್ತಾನೆ: 'ಹತ್ತು ಸಾವಿರ ಆನೆಯ ಬಲವುಳ್ಳ ವಿದ್ವಾಂಸನಾದ ರಾಜಋಷಿ ಶ್ರೇಷ್ಠನು, ಮಹಾ ಭಾಗ ಮಹಾವೀರ್ಯವಂತ ಮಹಾ ಬುದ್ಧಿವಂತನಾದ ಪುತ್ರನು ಜನಿಸುವನು. ಆ ಮಹಾತ್ಮನಿಗೂ ನೂರುಮಕ್ಕಳಾಗುತ್ತಾರೆ! **ಆದರೆ! ಅಮ್ಮ! ತಾಯ ವೈಗುಣ್ಯದಿಂದಾಗಿ ಅವನು ಕುರುಡನಾಗಿ ಹುಟ್ಟುತ್ತಾನಮ್ಮ!"**

ಮೇಲಿನ ಮಾತಿನ ಧಾಟಿ ಹೇಗಿದೆ ನೋಡಿ. ಹುಟ್ಟುವ ಮಗ ಕುರುಡನೆಂದು ಹೇಳುವುದು ಯಾವಾಗ! ಅವನ ವಿಶೇಷ ಗುಣಗಳನ್ನೆಲ್ಲ ತಿಳಿಸಿ, ಕೇಳುವ ತಾಯ ಮನಸ್ಸನ್ನು ಹರ್ಷಗೊಳಿಸಿ ಕಡೆಯಲ್ಲಿ ತಿಳಿಸುತ್ತಾರೆ ಬಹುಸಂಯಮ ದಿಂದ. ತಾಯ ವೈಗುಣ್ಯದಿಂದಾಗಿ ಹುಟ್ಟುವ ಮಗ ಅಷ್ಟೆಲ್ಲ ಮಹಿಮಾವಂತ ನಾದರೂ ಕುರುಡಾಗುತ್ತಾನೆ. ಇಲ್ಲಿ ವೈಗುಣ್ಯವಿರುವುದೆಲ್ಲಿ? ಅಂಬಿಕೆಯೊಬ್ಬ ಳಲ್ಲೆ? ಇದ್ದರೆ, ಅದು ವೈಗುಣ್ಯವೆ? ಆ ದೊಡ್ಡ ತಾಯ ಆತುರ—ಅದೆಷ್ಟೆ ಮಹೋದ್ದೇಶದಿಂದುಂಟಾಗಿದ್ದರೂ—ಇಷ್ಟೆಲ್ಲ ಪ್ರಮಾದಕ್ಕೂ ತಾಯಾಗು ತ್ತದೆ. '**ಈಗಲೆ**' ಆಗಬೇಕು ಎನ್ನುವ ಅವಳ ಆಕಾಂಕ್ಷೆ ಒಂದಂಶವನ್ನು ಮರೆಯಿತು,·ಕಾಯುವುದೂ ಒಂದು ಅಗತ್ಯ ವ್ರತ ಎಂಬುದನ್ನು. ಒಂದು ವರ್ಷ ಆ ಸೊಸೆಯರು ವ್ರತಮಾಡಬೇಕಿತ್ತು; ಅವನ ರೂಪ ಗಂಧ ವಪು ಗಳೆಲ್ಲಕ್ಕೂ ಒಗ್ಗಿ ಪ್ರೀತಿಗೊಂಡು ಸುಮನಸ್ಕರಾಗಬೇಕಿತ್ತು. ಹಾಗೆ ಆಗ ಕಾಯು ವಿಕೆ ವ್ರತವಾಗುತ್ತಿತ್ತು. ಕಾಯುವುದೂ ಬೇಡವಾಯಿತು, ತನ್ಮೂಲಕವಾದ ವ್ರತವೂ ತಪ್ಪಿತು. ವ್ರತವಿಲ್ಲದೆ ಬಂದ ರತಿ ವಿರಥವಾಗುತ್ತದೆ. ಮಹರ್ಷಿ ವ್ಯಾಸರು ಇಲ್ಲಿ ಬಹು ಮನೋಜ್ಞವಾಗಿ ಧ್ವನಿಸಿದ್ದಾರೆ, ಕಾಯದೆ ದೊಡ್ಡ ದನ್ನು ಪಡೆಯಲು ಹಡೆಯಲು ಆಗುವುದಿಲ್ಲ ಎಂದು. ಬರಿಯ ಕಾಯುವುದಲ್ಲ; ಅದು ವ್ರತವಾಗಬೇಕು;* ತಪಸ್ಸಾಗಬೇಕು. ಆಗಲೆ ಅದಕ್ಕೂ ಶಕ್ತಿಬರುತ್ತದೆ;

* 'ಧರ್ಮ ಶಕ್ತಿಯುಂ ಯೋಗಗೊಂಡಿರೆ, ಕರ್ಮಿಯಯ್ ಕಾಯ್ವಾತನುಂ!' ಶ್ರೀ ಕವಿ ಕುವೆಂಪು ಅವರ ಈ ಮಂತ್ರವನ್ನು ನೆನೆದುಕೊಳ್ಳಬಹುದಿಲ್ಲಿ. (ಶ್ರೀ ರಾಮಾಯಣ ದರ್ಶನಂ-ಸಂಪುಟ ೧, : ಪುಟ ೩೯೦.) ಇದನ್ನು ಲೇಖನದ ಕಡೆ ಯಲ್ಲಿ ವಿವೇಚಿಸಲಾಗುವುದು.)

ಉದ್ದೇಶವೂ ಪವಿತ್ರವಾಗುತ್ತದೆ.

ಮಗನ ಆ ಮಾತನ್ನು ಕೇಳಿದ ತಾಯಿಯ ಮನಸ್ಸಿಗೆ ತಂಪಿನ ಬರೆಯೆಳೆದಂತಾಗುತ್ತದೆ. ಅವಕ್ಕವಳು ಮತ್ತೆ ಬೇಡಿಕೊಳ್ಳುತ್ತಾಳೆ: 'ಹೇ ತಪಸ್ವಿ! ಕುರುರಾಜ್ಯಕ್ಕೆ ಕುರುಡ ಅನುರೂಪರಾಜನಲ್ಲ! ಜ್ಞಾತಿವಂಶವನ್ನೂ ರಕ್ಷಿಸುವ, ಪಿತೃವಂಶವನ್ನೂ ಬೆಳೆಸುವ, ಕುರುವಂಶಕ್ಕೆ ರಾಜನಾಗುವ ಎರಡನೆಯ ಮಗನನ್ನು ನೀಡು!' ಆ ಮಹಾಯಶ 'ಹಾಗೇ ಆಗಲಿ' ಎಂದು ಹೊರಟು ಹೋಗುತ್ತಾನೆ. ಕೆಲಕಾಲದ ಮೇಲೆ ಆ ಕೌಸಲ್ಯೆ ಕುರುಡು ಮಗನನ್ನು ಹಡೆಯುತ್ತಾಳೆ. ಸತ್ಯವತಿ ಮತ್ತೆ ಸೊಸೆಗೆ ನುಡಿದು ಮೊದಲಿನಂತೆ ಋಷಿಯನ್ನು ಆಹ್ವಾನಿಸುತ್ತಾಳೆ. ಆ ಮಹರ್ಷಿ ಅದೇ ಕರ್ಮದಿಂದ ಆಕೆಯ (ಅಂಬಾಲಿಕೆಯ) ಸಂಗಮಾಡುತ್ತಾನೆ. **ಆಗ ಅಂಬಾಲಿಕೆ ಆ ಋಷಿಯನ್ನು ಕಂಡು ಬಣ್ಣಗೆಟ್ಟು ಬಿಳಚಿಕೊಂಡಂತಾಗುತ್ತಾಳೆ.** ಭಯಗೊಂಡು ಬಿಳಚಿಹೋದ ಆ ವಿಷಣ್ಣಳನ್ನು ಕಂಡ ಸತ್ಯವತೀಪುತ್ರ (ವ್ಯಾಸ ಎನ್ನುವ ಬದಲು ಈ ಮಾತನ್ನು ಇಲ್ಲಿ ಉಚಿತವಾಗಿಯೆ ಬಳಸಿದ್ದಾರೆ ಕವಿ) ಆಕೆಗೆ ಹೀಗೆನ್ನುತ್ತಾನೆ: 'ವಿರೂಪನಾದ ನನ್ನನ್ನು ಕಂಡು ಬಿಳಚಿಕೊಂಡದ್ದರಿಂದ ನಿನ್ನಲ್ಲಿ ಹುಟ್ಟುವ ಮಗ ಪಾಂಡುವೆ ಆಗುತ್ತಾನೆ; ಹೆಸರೂ ಪಾಂಡುವೆಂದೆ ಆಗುತ್ತದೆ, ಹೇ ಶುಭಾನನೆ!' ಹೀಗೆಂದು ನುಡಿದ ಭಗವಾನ್ ವ್ಯಾಸ ಅಲ್ಲಿಂದ ಹೊರಡಲು ತಾಯಿ ಅಲ್ಲಿಗೆ ಬಂದು ಕೇಳುತ್ತಾಳೆ. ಹುಟ್ಟುವ ಮಗನ ಪಾಂಡುತ್ವವನ್ನು ಆತ ಆ ತಾಯಿಗೆ ವಿವರಿಸುತ್ತಾನೆ. ತಾಯಿ ಆಗ ಮತ್ತೊಬ್ಬ ಪುತ್ರನಾಗುವಂತೆ ಬೇಡಿಕೊಳ್ಳುತ್ತಾಳೆ. ಹಾಗೆ ಆಗಲೆಂದು ತಾಯಿಗೆ ಮಾತುಕೊಡುತ್ತಾನೆ ಮಹರ್ಷಿ. ಆಮೇಲೆ ಅಂಬಾಲಿಕೆ ಪ್ರಾಪ್ತಕಾಲದಲ್ಲಿ ಪಾಂಡುಪುತ್ರನನ್ನು, ಕಾಂತಿದೀಪ್ಯನಾದ ಲಕ್ಷಣ ಸಂಪನ್ನನಾದ ಮಗನನ್ನು ಪ್ರಸವಿಸುತ್ತಾಳೆ. ಅವನಿಗೆ ಮುಂದೆ ಮಹಾ ಬಿಲ್ಗಾರರಾದ ಪಂಚಪಾಂಡವರಾಗುತ್ತಾರೆ."

"ಹಿರಿಯ ಸೊಸೆ ಅಂಬಿಕೆಯನ್ನು ಮತ್ತೆ ಋತುಕಾಲದಲ್ಲಿ (ಸತ್ಯವತಿ ಮಗನಲ್ಲಿಗೆ-) ಅವನಲ್ಲಿಗೆ ನಿಯೋಜಿಸುತ್ತಾಳೆ. ಸುರಸುತೋಪಮೆಯಾದ ಅವಳು ಮಹರ್ಷಿಯ **ರೂಪಗಂಧಾದಿಗಳನ್ನು ನೆನೆಸಿಕೊಂಡು** ಆ ದೇವಿಯ ಮಾತನ್ನು ನಡೆಸಲಿಲ್ಲ. ಭಯದಿಂದ ಆಕೆ, ಅಪ್ಸರೆಯಂತಿದ್ದ ತನ್ನ ದಾಸಿಗೆ ತನ್ನ ಒಡವೆಗಳನ್ನಿಟ್ಟು ಶೃಂಗರಿಸಿ ಆ ಕೃಷ್ಣನ ಬಳಿಗೆ ಕಳಿಸುತ್ತಾಳೆ. ಆ ದಾಸಿಯಾ

ವರೂ ಆತ ಬಂದಾಗ ಎದುರುಗೊಂಡು ನಮಸ್ಕರಿಸಿ (ಅವನ ಅನುಜ್ಞೆ ಯಂತೆ ಶಯನವೇರಿ ಗೌರವದಿಂದ ಉಪಚರಿಸುತ್ತಾಳೆ- ಏಕಾಂತದಲ್ಲಿ ಅವಳೊಡನೆ ಕಾಮೋಪಭೋಗ ಪಡೆದು (ವ್ಯಾಸ) ತುಷ್ಟನಾಗುತ್ತಾನೆ. ಅವಳೊಡನೆ ಬಾಳಿದ ಆ ಸಂಶ್ರಿತ ವ್ರತನಾದ ಮಹರ್ಷಿ ಅಲ್ಲಿಂದ ಎದ್ದು ಹೊರಡುವಾಗ ಆಕೆಗೆ ಹೀಗೆನ್ನುತ್ತಾನೆ: 'ಇನ್ನು ನೀನು ತೊತ್ತಾಗಿರಬೇಕಿಲ್ಲ! ನಿನ್ನ ಬಸಿರನ್ನು ಸೇರಿರುವ ಶ್ರೇಷ್ಠ ಗರ್ಭದಿಂದ ಧರ್ಮಾತ್ಮನಾದ ಬುದ್ಧಿವಂತ ಶ್ರೇಷ್ಠನಾದ ಮಗ ಹುಟ್ಟುತ್ತಾನೆ. ಕೃಷ್ಣದ್ವೈಪಾಯನ ಸಂಜಾತನಾದ ಅವನೆ ಧೃತರಾಷ್ಟ್ರನಿಗೂ ಮಹಾತ್ಮ ಪಾಂಡುವಿಗೂ ತಮ್ಮನಾದ ವಿದುರ. ಧರ್ಮದೇವನೆ ಮಹಾತ್ಮ ಮಾಂಡವ್ಯರ ಶಾಪದಿಂದ ಈಗ ಅರ್ಥತತ್ತ್ವವೇತ್ತ ನಾಗಿ ಕಾಮಕ್ರೋಧ ವಿವರ್ಜಿತ ವಿದುರನಾಗಿ ಹುಟ್ಟುತ್ತಾನೆ.' ಕೃಷ್ಣದ್ವೈಪಾ ಯನ ಇದನ್ನೆಲ್ಲ—ತನಗಾದ ಮೋಸವನ್ನು, ಶೂದ್ರಳಲ್ಲಾಗುವ ಪುತ್ರ ಜನನ ವನ್ನು, ಎಲ್ಲವನ್ನೂ—ಸತ್ಯವತಿಗೆ ನಿವೇದಿಸುತ್ತಾನೆ. ಧರ್ಮ ಋಣ ತೀರಿಸಿ ತಾಯ ಬಳಿಗೆ ಬಂದ ಆತ ಗರ್ಭೋದಯವನ್ನು ನಿವೇದಿಸಿ ಅದೃಶವಾಗು ತ್ತಾನೆ. |ವ್ಯಾಸರಿಂದ ವಿಚಿತ್ರವೀರ್ಯಕ್ಷೇತ್ರದಲ್ಲಿ ಜನಿಸಿದ ದೇವಕುಮಾರರ ನ್ನೊಪ್ಪುವ ಇವರೇ ಕುರುವಂಶವನ್ನು ಬೆಳಸುತ್ತಾರೆ!"

ಹೀಗೆ ಕಥೆ ನಿರೂಪಿತವಾಗಿದೆ ವ್ಯಾಸಮಹಾಭಾರತದಲ್ಲಿ. ಕಥೆಯನ್ನು ನಿರೂಪಣೆಯ ದೃಷ್ಟಿಯಿಂದಲೇ ನೋಡಿದರೂ ತಿಳಿಯುತ್ತದೆ ಎಷ್ಟು ಗಂಭೀರ ವಾಗಿದೆ, ಧ್ವನಿಪೂರ್ಣವಾಗಿದೆ ಅದೆಲ್ಲ ಎಂದು. ಅದಕ್ಕಿಂತ ಮಿಗಿಲಾಗಿ ಈ ಮೇಲಿನ ಕಥೆಯಲ್ಲಿ ಒಳಗೆ ನಿಗೂಢವಾಗಿದ್ದಿರುವ ಧರ್ಮಭಾವ ಕರ್ತವ್ಯಭಾವ ಗಳ ಮೇಲಾಟವನ್ನೂ, ಅವಕ್ಕೆ ಪ್ರಣಯಭಾವವೂ ಅಧೀನವಾಗಿಯೆ ಬರು ವುದನ್ನು ನೋಡುತ್ತೇವೆ. ವ್ಯಾಸರಿಗೆ ಪ್ರಣಯಾಕಾಂಕ್ಷೆಯೇನೂ ಇರಲಿಲ್ಲ. ತಾಯ ಆಜ್ಞೆಗೆ ಕಟ್ಟುಬಿದ್ದು 'ಧರ್ಮಋಣ' ತೀರಿಸಲೆಂದು ತಮ್ಮ ತಮ್ಮನ ಕ್ಷೇತ್ರದಲ್ಲಿ ಪುತ್ರರನ್ನು ಪಡೆಯಲೊಪ್ಪುತ್ತಾರೆ. ಅದು ಆ ಕಾಲ ಒಪ್ಪಿಕೊಂಡಿದ್ದ ಧರ್ಮ. ಅದನ್ನವರು ಮಾತಿಗೆ ಕಟ್ಟುಬಿದ್ದು ನಡೆಸಲೆ ಬೇಕಾಯಿತು. ಆದರೆ ಅವರಿಗೆ ಆ ವಿಧವೆಯರಿಂದ ಸ್ವಾಗತವಿತ್ತೆ? ಪಾಪ ಅವರಲ್ಲಾದರೂ ಏನು ತಪ್ಪಿದೆ? ಹೋಗಲಿ, ತಾಯಿಯದಾದರೂ ಎಂಥ ಅಪರಾಧ! ಅದು ಅಪ ರಾಧವೆ? ಆದರೂ ಎಂಥ ಅನಾಹುತದ ಪ್ರಾದುರ್ಭಾವವಾಯಿತು. ಅವರೆ

ಒಂದು ವರ್ಷ ಆ ಋಷಿಯೊಡನೆ ಬಾಳಿ ಅವನ ರೂಪಾದಿಗಳಿಗೆ ಹೊಂದಿಕೊಂಡಿದ್ದು ಪ್ರತಗೊಂಡಿದ್ದರೆ ಅವರಿಂದ ಲೋಕಕ್ಕೆ ದಾನವಾಗಿ ಬರುತ್ತಿದ್ದ ಮಕ್ಕಳಾದರೂ ಎಂಥವರಿರುತ್ತಿದ್ದರು! ಭಕ್ತಿಯಿಂದ ಆ ಋಷಿಯನ್ನೆದುರುಗೊಂಡು ಅವರೊಡನೆ ಮನಃಪೂರ್ವಕವಾಗಿ ಬಾಳಿದ್ದರಿಂದಲೆ ಆ ದಾಸಿಗೆ ಯಮಧರ್ಮನೆ ಮಗನಾಗುತ್ತಾನೆ.* ಆದರೀ ಇಬ್ಬರೂ ರಾಜ ಕುಮಾರಿಯರೂ ಹಾಗೆಯೆ ವರ್ತಿಸಿದ್ದರೆ? ಹಾಗೆ ವರ್ತಿಸಲು ಅವರನ್ನು ಸಿದ್ಧಗೊಳಿಸಿದ್ದರೆ? ಸಿದ್ಧಗೊಳ್ಳುವುದು ಎಂದರೆ ಕಾಯುವುದು ಎಂದೂ ಅರ್ಥ.

ಅಂತು ಸದಿಚ್ಛೆಯಿಂದಲೆ ಆದರೂ ಸತ್ಯವತಿ ಕಾಯದೆ ಆತುರಗೊಂಡದ್ದರಿಂದ, ಅಕಾಲಫಲ ಕೇಳಿದ್ದರಿಂದ ವಿಷಾದ ಘಟನಾವಳಿಯನ್ನೆ ಉದ್ಘಾಟಿಸಿದಂತಾಗುತ್ತದೆ. ಆದರಿಂದ ಯಾರಿಗೆ ಸುಖವಾಯಿತು. ಆಕೆಗೆ? ಸೊಸೆಯರಿಗೆ? ಮಗನಿಗೆ? ಮೊಮ್ಮಕ್ಕಳಿಗೆ? ಭೀಷ್ಮರಿಗೆ? ಅಥವಾ ಲೋಕಕ್ಕೆ? ದೇವರೆ ಬಲ್ಲ.

ಪ್ರಾರಂಭದ ಈ ಒಂದೇ ಪ್ರಮಾದ ಸಾಕಾಗಿದ್ದಿತು ಮುನ್‌ಬಾಳೆಲ್ಲವನ್ನೂ ದುಃಖಮಯವಾಗಿಸುವುದಕ್ಕೆ. ಆದರೆ ವಿಧಿ ಅಲ್ಲಿಗೇ ಬಿಡಬೇಕಲ್ಲ. ಮತ್ತೊಬ್ಬ ತಾಯಿ, ಒಬ್ಬಳೇಕೆ ಇಬ್ಬರು, ಬೇರೆ ಬಗೆಯ ವಿಷಾದನೀಯ ಕಾರ್ಯಗಳನ್ನೆಸಗುತ್ತಾರೆ. ಕುಂತಿ, ಗಾಂಧಾರಿ: ಈ ಇಬ್ಬರೂ ಪಾಂಡು ಧೃತರಾಷ್ಟ್ರರ ಮಡದಿಯರು. ಅವರೂ ಕೂಡ ಹಾಗೆಯೆ ಆದರಲ್ಲ! ಕುಂತಿಯ ಕಥೆಯನ್ನೀಗ ನೋಡಬಹುದು:

"ಕುಂತಿ ಇನ್ನೂ ಕುಮಾರಿಯಾಗಿದ್ದಾಗ ದೂರ್ವಾಸ ಋಷಿ ಒಮ್ಮೆ ಕುಂತೀ

---

* 'ಅವನು ಎಷ್ಟೇ ತೇಜಸ್ವಿಯಾದರೂ ಅವನಿಗೆ ಮಾತ್ರ ರಾಜತ್ವ ಲಭಿಸಲಿಲ್ಲ. ಅದು ಆ ಕಾಲದ ಧರ್ಮ. ಆದರೆ ದಾಸಿಗೆ ಮಾತ್ರ ಆ ದಾಸಿತ್ವ ಅಂದಿನಿಂದ ಬಹುಪಾಲು ತೊಲಗಿತು. ಮತ್ತೊಂದು ಮಾತು: ದಾಸಿಯಾದವಳು ಆ ಋಷಿಯ ರೂಪ ಗಂಧಾದಿಗಳಿಗೆ ಅಸಹ್ಯ ಪಡಲಿಲ್ಲ. ಅವಳು ತನ್ನ ರಾಣಿ ತನಗಿಟ್ಟ ಒಡವೆಯಿಂದಾಗಿಯೊ ಅಥವಾ ಅರಸತಿಯರಿಗಿರುವ 'ನಾಗರಿಕ' ರುಚಿಯ ಬಿಗಿಯಿಲ್ಲದ್ದರಿಂದಲೊ ಋಷಿಯನ್ನು ಕಂಡು ಅಳುಕಲಿಲ್ಲ. ಮೇಲಾಗಿ ಅದು ತನಗೆ ಸುಯೋಗವೆಂದೆ ಭಾವಿಸಿ ಆ 'ಸಂಶ್ರಿತವ್ರತ ಋಷಿ'ಯನ್ನೂ 'ಕಾಮೋಪಭೋಗದಿಂದ' ತುಷ್ಟಿಗೊಳಿಸುತ್ತಾಳೆ. ಹಿಂದೆ ಸತ್ಯವತಿ–ಮತ್ಸ್ಯಗಂಧಿಯಾಗಿದ್ದವಳು ಇದೇ ಋಷಿಯ ತಂದೆಯನ್ನು ದೋಣಿಯಲ್ಲಿ ಕೂಡುತ್ತಾಳೆ.

ಭೋಜನ ಬಳಿಗೆ ಬರುತ್ತಾರೆ. ಅತಿಥಿ ಸತ್ಕಾರಕ್ಕೆಂದು ನಿಯೋಜಿತಳಾಗಿದ್ದ ಕುಂತಿಯನ್ನು ಆ ರಾಜ ಆ ಕೋಪಿಷ್ಠ ಮುನಿಯ ಸೇವೆಗೆಂದು ನಿಯಮಿಸು ತ್ತಾನೆ. ಆಕೆ ಆತನನ್ನು ಬಹುಭಕ್ತಿಯಿಂದ ಸತ್ಕರಿಸುತ್ತಾಳೆ! ಅವನ ಅನು ಗ್ರಹಕ್ಕೂ ಪಾತ್ರಳಾಗುತ್ತಾಳೆ. ಆ ಮುನಿ ಆಕೆಯ ಭವಿಷ್ಯವನ್ನು ನೆನೆದು ಪುತ್ರದವಾದ ಆಪದ್ಧರ್ಮ ಮಂತ್ರವನ್ನುಪದೇಶಿಸಿ ಹೀಗೆನ್ನುತ್ತಾನೆ: 'ಯಾವ ಯಾವ ದೇವರನ್ನು ಈ ಮಂತ್ರ ಜಪದಿಂದ ನೀನು ಆಹ್ವಾನಿಸುವೆಯೊ ಆಯಾ ದೇವತೆಯ ಅನುಗ್ರಹದಿಂದ ನಿನಗೆ ಪುತ್ರಲಾಭವಾಗುತ್ತದೆ." ವ್ಯಾಸರ ಮಾತಿನಲ್ಲೇ ಹೇಳುವುದಾದರೆ "ಕೌತೂಹಲಾನ್ವಿತೆಯಾದ ಕುಂತಿ ತಾನು ಕನ್ಯೆ ಯಾಗಿದ್ದರೂ ಸೂರ್ಯನನ್ನು ಆಹ್ವಾನಿಸುತ್ತಾಳೆ. ಆಗ ತನ್ನ ಬಳಿಗೆ ಬರುತ್ತಿರುವ ಲೋಕಭಾವನನಾದ ಸೂರ್ಯನನ್ನು ಕಂಡು, ಆ ಮಹದದ್ಭುತಕ್ಕೆ ವಿಸ್ಮಿತಳಾಗು ತ್ತಾಳೆ. 'ಆಹ್ವಾನಿತನಾಗಿದ್ದೇನೆ ಭದ್ರೆ; ನಿನ್ನಲ್ಲಿ ಪುತ್ರಲಾಭಕ್ಕೆಂದು ಬಂದ ಸೂರ್ಯನೆಂದು ತಿಳಿ.' ಪಾಪ, ಕುಂತಿ ಇಷ್ಟೆಲ್ಲ ಆಗುತ್ತದೆಂದು ನಿರೀಕ್ಷಿ"ರಲಿಲ್ಲ. ಅವನ ಮಾತನ್ನು ಕೇಳಿ ಹೀಗೆನ್ನುತ್ತಾಳೆ:

"ಯಾರೊ ಒಬ್ಬ ವಿಪ್ರ* ಮಂತ್ರವರವನ್ನಿತ್ತ. ಅದರ ಜಿಜ್ಞಾಸೆಯಿಂದ ನಿನ್ನನ್ನು ಆಹ್ವಾನಿಸಿರುವೆ. ಇದೊಂದು ತಪ್ಪಾಗಿದೆ! ತಲೆಬಾಗಿ ನಿನ್ನ ಕೇಳಿಕೊಳ್ಳುವೆ! ಸ್ವಯಂ ಅಪರಾಧವೆಸಗಿದ್ದರೂ ಹೆಣ್ಣನ್ನುಎಂದೂ ರಕ್ಷಿಸಬೇಕು!'

---

*'ಯಾರೋ ಒಬ್ಬ ವಿಪ್ರ' ಎನ್ನುವ ಮಾತು ಎಷ್ಟು ಅರ್ಥವತ್ತಾಗಿದೆ! ತನಗೆ ವರವಿತ್ತಿರುವಾತ 'ಯಾರೋ ಒಬ್ಬ ವಿಪ್ರ' ಮಾತ್ರವಲ್ಲ, ಮಹಾಮುನಿ, ಎಂದೂ ಗೊತ್ತು. ಆದರೀಗ ತನಗೆ ಅದರಿಂದಲೆ ಸಂಕಷ್ಟ ಪರಿಸ್ಥಿತಿಯೊದಗಿದ್ದರಿಂದ ಅವಳು ಆ ವರದ ವಿಚಾರವಾಗಿ ಉಂಟಾದ ಅಸಮಾಧಾನವನ್ನು ಆ ವ್ಯಕ್ತಿಯ ವಿಷಯವಾಗಿ ಮೂಡಿಕೊಂಡ ಅಸಡ್ಡೆಯನ್ನು 'ಯಾರೋ ಒಬ್ಬ ವಿಪ್ರ!' ಎನ್ನುವ ಮಾತಿನ ಧಾಟಿಯಲ್ಲಿ ಎಷ್ಟು ಸೊಗಸಾಗಿ ಸೂಚಿಸುತ್ತಾಳೆ. ಅದಷ್ಟೆ ಅಲ್ಲದೆ ತನಗೆ ವರವಿತ್ತಿರುವಾತ ಸಾಮಾನ್ಯ ಎಂದು ತಿಳಿದರೆ ಸೂರ್ಯ ಅಷ್ಟೇನೂ ತನ್ನ ಆಹ್ವಾನಕ್ಕೆ ಬೆಲೆಗೊಡದೆ ತನ್ನನ್ನು ಮನ್ನಿಸಬಹುದು ಎಂಬ ಭಾವವೂ ಇದೆ. ದೂರ್ವಾಸರೆ ವರ ವನ್ನಿತ್ತರು ಎಂದರೆ ಯಾರುತಾನೆ ಅದರ ಉಲ್ಲಂಘನಕ್ಕೆ ಎಡೆಮಾಡುತ್ತಾರೆ. ಈ ಸನ್ನಿ ವೇಶ ಬಹು ಅರ್ಥಪೂರ್ಣವಾಗಿದೆ. ಮಾನವ ಮನೋವಿಜ್ಞಾನಕ್ಕೆ ಹೇರಳ ಆಹಾರ ವೊದಗಿಸುವಂತಿದೆ.

'ತಿಳಿದಿರುವೆ ನಾನಿದನ್ನೆಲ್ಲ! ದೂರ್ವಾಸ ವರ ಕೊಟ್ಟಿದ್ದಾರೆ. (ಅಂದರೆ ತಾನದನ್ನುಲ್ಲಂಘಿಸಲಾರೆ ಎಂದೆ ಅರ್ಥ.) ಭಯಗೊಳ್ಳದೆ ನನ್ನ ಸಂಗಕ್ಕಣಿಯಾಗು. ನನ್ನ ದರ್ಶನ ಅಮೋಘವಾದುದು (ನಿಷ್ಫಲವಲ್ಲ.) ಆಹೂತನಾಗಿ ನಾ ಬಂದಿರುವೆ.(ನಾನಾಗಿ ಏನೂ ಬಂದಿಲ್ಲ) ಈ ಆಹ್ವಾನ ವ್ಯರ್ಥವಾದರೆ ನಿನಗೆ ವಿಪತ್ತುಂಟು ! ಸಂದೇಹವೆ ಇಲ್ಲ!' (ಇದಕ್ಕಿಂತ ಬೇಕೆ ಇನ್ನವಳಿಗೆ ಭೀತಿ .ಅತ್ತ ಹುಲಿ, ಇತ್ತ ದರಿ, ಸುತ್ತ ಉರಿ; ಸರಿ ಯಾವುದರಲ್ಲಾದರೂ ಹಾರಬೇಕು.)

"ಹೀಗೆ ಸೂರ್ಯನು ಎಷ್ಟೇ ಸಮಾಧಾನ ಮಾಡಿದರು ಆ 'ವರಾರೋಹೆ' ತಾನು ಕನ್ಯೆಯಾದುದರಿಂದ ಒಪ್ಪಲಿಲ್ಲ. ಬಂಧುಪಕ್ಷದ ಭಯ ಮತ್ತು ಲಜ್ಜೆಗೆ ಈಡಾದ ಆ ಕುಂತಿ ಅದಕ್ಕಿಚ್ಛಿಪಡಲಿಲ್ಲ. ಆಗ ಸೂರ್ಯನು ಹೀಗೆ ನುಡಿಯುತ್ತಾನೆ :

'ಹೇ ! ಸುಭ್ರೂ ! ಶುಭಾನನೆ ! ನಿನಗೆ ಹುಟ್ಟುವ ಮಗನ ರೂಪವನ್ನಾದರೂ ಕೇಳು ! ಆದಿತ್ಯಕುಂಡಲವನ್ನು ಅಭೇದ್ಯ ಕವಚವನ್ನು ಶಸ್ತ್ರಾಸ್ತ್ರವನ್ನು ಧರಿಸಿ ಹುಟ್ಟುತ್ತಾನೆ. ಬ್ರಾಹ್ಮಣರಿಗೆ ಕೊಡಬಾರದುದು ಅವನಲ್ಲಾವುದೂ ಇಲ್ಲ. (ಅಂದರೆ ಆ ಮಗನಿಗೆ ಆಜನ್ಮಸಿದ್ಧವಾಗಿಯೆ ಬರುವ ಆ ಎಲ್ಲ ರಕ್ಷೆಗಳೂ ದಾನಗೊಳ್ಳುತ್ತವೆಯೆಂದೆ ಅರ್ಥ ?) ನನ್ನ ಪ್ರೇರಣೆಯಿಂದಲೂ ಅನುಚಿತವನ್ನೆಸಗುವುದಿಲ್ಲ. ಬ್ರಾಹ್ಮಣರಿಗೆ ಕೊಟ್ಟುಕೊಡುತ್ತಾನೆ ; ಮಾನವಂತನೂ ಆಗುತ್ತಾನೆ. (ಲೋಕದಲ್ಲಿ ಈ ಎರಡೂ ಸೇರುವುದು ಇಲ್ಲವೆ ಇಲ್ಲವೆನ್ನಬೇಕು?) ನನ್ನ ಪ್ರಸಾದದಿಂದ ನಿನ್ನಲ್ಲೇನೂ ತಪ್ಪುಕಾಣುವುದಿಲ್ಲ !'

"ಕುಂತಿಯನ್ನೊಪ್ಪಿಸಿದ ಆ ಪ್ರಕಾಶಕರ್ತನಾದ ಭಗವಾನ್ ತಪನ ಅವಳ ಪ್ಪುಗೆಯನ್ನು ಪಡೆಯುತ್ತಾನೆ. ಆಮೇಲೆ ಲೋಕವಿಶ್ರುತನಾದ, ಸಹಜ ಕವಚನಾದ ಶ್ರೀಮಂತ ದೇವಗರ್ಭನೂ ಶ್ರೀಯುತನೂ ಸರ್ವಶಸ್ತ್ರಭೃತನೂ ಆದ ಕರ್ಣ ಹುಟ್ಟುತ್ತಾನೆ. ಬಳಿಕ ಆ ಪರಮದ್ಯುತಿಯಾದ ತಪನ ಆಕೆಗೆ ಮತ್ತೆ ಕನ್ಯಾತ್ವವನ್ನಿತ್ತು ಆ ಶ್ರೇಷ್ಠವಾದ ದಿವಕ್ಕೆಡರುತ್ತಾನೆ. ಹುಟ್ಟಿದ ತನ್ನ ಕುಮಾರ (ಈಗವನು ಪು-ತ್ರನಲ್ಲ; ಕು-ಮಾರ !)ನನ್ನು ನೋಡಿ ಆ ದೀನ ಮಾನಸಳಾದ ವಾರ್ಷ್ಣೇಯಿ, ಏನೆಸಗಿದರೆ ಸುಕೃತವಾದೀತೆಂದು ಏಕಾಗ್ರವಾಗಿ ಚಿಂತಿಸುತ್ತಾಳೆ. ಬಂಧುಪಕ್ಷ ಭಯದಿಂದ ಅವಳು ತನ್ನ ಅಪಚಾರವನ್ನು ಗೋಪನ ಮಾಡಲು

ನಿಶ್ಚಯಿಸಿ ಆ ಮಹಾಯಶನಾದ ತನ್ನ ಕುಮಾರನನ್ನು ನೀರಿನಲ್ಲಿ ಸೆದುಬಿಡುತ್ತಾಳೆ. ನೀರಿನಲ್ಲಿ ಸೆದಿದ್ದ ಆ ಗರ್ಭವನ್ನು ಮಹಾಯಶನಾದ ರಾಧಾಭರ್ತನು ತೆಗೆದುಕೊಂಡು ಅವನನ್ನು ಅವರಿಬ್ಬರೂ ತಮ್ಮ ಮಗನನ್ನಾಗಿ ಸಾಕುತ್ತಾರೆ."

ಇದು ವ್ಯಾಸಮಹರ್ಷಿಗಳಲ್ಲಿ ಬರುವ ಕರ್ಣದುರಂತದ ತಲಕಾವೇರಿಯ ಕಥೆ. ನಾವಿಲ್ಲೀಗ ವಿವೇಚಿಸಬೇಕಾದುದಿಷ್ಟೆ, ಕುಂತಿ ಮಾಡಿದ ಕೌಮಾರೀ ಕುತೂಹಲ ಜನ್ಯವಾದ ಜಿಜ್ಞಾಸುಬುದ್ಧಿಯೆಂತಹದು ಎಂದು. ಸತ್ಯವತಿ ತೋರಿದ ಆತುರಕ್ಕೆ ಕಾರಣವಿತ್ತು ; ರಾಷ್ಟ್ರ ಕಾರಣವಿತ್ತು. ಆದರೂ ಅದು ತನ್ನ ಫಲ ಬಿಟ್ಟೆ ಬಿಟ್ಟಿತು. ಆದರಿಲ್ಲಿ ಈ ಕನ್ಯೆ ತೋರಿದ ಕುತೂಹಲ-ಆತುರ,ಮಾತ್ರವಲ್ಲ-ಅದರಿಂದುಂಟಾದ ಅಕಾಲ ಫಲಾಕಾಂಕ್ಷೆ (ಇದು ಸ್ಪಷ್ಟವಲ್ಲದಿದ್ದರೂ ಕಿಂಚಿತ್ತಾದರೂ ಇದ್ದೆ ಇದೆ) ಎಂಥ ಅನಾಹುತ ಪ್ರವಾಹವನ್ನೆ ಹಡೆಯಿತು ! ಮುಗ್ಧೆಯಾಗಿ ಮಾಡಿದ ಅಪಚಾರವನ್ನು ಸುಮಾರು ವಿದಗ್ಧೆಯಂತೆ ಏಕಾಗ್ರವಾಗಿ ಚಿಂತಿಸಿ ಗೋಪನ ಮಾಡಲೆಳಸುತ್ತಾಳೆ. ಆದರದು ಗೋಪನವಾಯಿತೆ ? ಕರ್ಣ ಯಾರೆಂಬುದೇನೊ ಗುಪ್ತವಾಯಿತು ; ಆದರೆ ಅವಳ ಕುತೂಹಲ ತೋರಿದ ಆತುರ, ಮುಚ್ಚಲವಳು ಮಾಡಿದ ಹೂಟ, ಇವುಗಳು ಪ್ರತಿಫಲವಿಲ್ಲದೆ ಹಾಗೆ ಹೋಗುತ್ತವೇನು ? ಅಯ್ಯೊ ! ಆ ಪ್ರತಿಫಲ ಬಂದದ್ದು ಯಾರಿಗೆ ? ಅವಳಿಗೇ ಅಲ್ಲ. ಕರ್ಣ ಸೂತಪುತ್ರನೆಂದು-ತಾನು ಸೂರ್ಯಪುತ್ರನಾಗಿದ್ದೂ-ಎಲ್ಲರಿಂದಲೂ ಸೋಟೆಗೆ ತಿವಿಸಿಕೊಳ್ಳುತ್ತಾನೆ. ಅವನಿಗಾದ ನಿರಂತರ ನಷ್ಟವದು, ಸರಿ. ಆದರೆ ಅವನೊಬ್ಬನಿಂದ ಮಹಾಭಾರತ ಯುದ್ಧ ಎಷ್ಟು ಜನರನ್ನು ಆಹುತಿ ತೆಗೆದುಕೊಂಡಿತು ! ಭೀಷ್ಮರಿಂದ ಹಿಡಿದು ಅಭಿಮನ್ಯುವಿನ—ಇನ್ನೂ ಗರ್ಭಸ್ಥವಾಗಿದ್ದ ಅವನ ಮಗನ—ತನಕ ಆ ಯುಗದ ಹೂ ಕಾಯಿ ಹಣ್ಣುಗಳೆಲ್ಲ ಬೆಂದು ಹೋಗಿ ಉಳಿದದ್ದಾದರೂ ಏನು ?

ಕುಂತಿಯ 'ಅಪಚಾರ' ಕ್ಷಮ್ಯವಾಗಿದ್ದರೂ ವಿಧಿಯೇಕೆ ಅಷ್ಟು ಕ್ರೂರವಾಗಿ ಬೆಲೆಗೊಂಡಿತು ? ಇದಿಲ್ಲಿಗೆ ಇರಲಿ. ಮುಂದೆ ಗಾಂಧಾರಿಯತ್ತ ತಿರುಗೋಣ.

"ಒಮ್ಮೆ ದ್ವೈಪಾಯನ ಹಸಿದು ಬಾಯಾರಿ ಬಳಲಿ ಬಂದಾಗ ಗಾಂಧಾರಿ ಅವನನ್ನುಪಚರಿಸಿ ಸಂತೋಷಗೊಳಿಸಲು ಅವನು ಆಕೆಗೆ ವರವೊಂದನ್ನು, ತನ್ನ **ಗಂಡನಂತಹ ನೂರು ಮಕ್ಕಳನ್ನು** ಪಡೆಯುವಂತಹ ವರವೊಂದನ್ನು, ನೀಡುತ್ತಾನೆ. ಬಳಿಕ ಆಕೆ ಧೃತರಾಷ್ಟ್ರನಿಂದ ಗರ್ಭಧಾರಣ ಮಾಡಿಕೊಳ್ಳು

ತ್ತಾಳೆ. ಎರಡು ವರ್ಷ ತನಕವೂ ಆ ಬಸಿರ ಭಾರವನ್ನು ತಾಳಿಕೊಂಡಿದ್ದರೂ ಪುತ್ರಜನನವಾಗದ್ದರಿಂದ ಆಕೆ ದುಃಖಕ್ಕೀಡುಗೊಳ್ಳುತ್ತಾಳೆ. (ಹೀಗಿರುವಾಗ) ಬಾಲಾರ್ಕತೇಜನಾದ ಮಗನೊಬ್ಬ ಕುಂತಿಗೆ ಹುಟ್ಟಿದನೆಂಬ ಸುದ್ದಿಯನ್ನವಳು ಕೇಳಿ ತನ್ನ ಬಸಿರೇಕೆ ಹಾಗೆ ತಡೆಗೊಂಡಿತೆಂದು ಚಿಂತಿಸಿ ಧೃತರಾಷ್ಟ್ರನಿಗೆ ತಿಳಿಯ ದಂತೆ ದುಃಖಮೂರ್ಛಿತಳಾಗಿ ತನ್ನ ಬಸಿರನ್ನು ಘಾತಿಸಿಕೊಳ್ಳುತ್ತಾಳೆ. ಆಗ ಎರಡು ವರ್ಷ ತನಕ ತನ್ನ ಬಸಿರಿನಲ್ಲಿ ಹೊತ್ತಿದ್ದ, ಲೋಹಘಟ್ಟಿಯಂತಹ ಮಾಂಸದ ಮುದ್ದೆಯೊಂದು ಹೊರಬಿತ್ತು. ಇದನ್ನು ತಿಳಿದ ದ್ವೈಪಾಯನ ತ್ವರೆಯಿಂದ ಬಂದು ಆ ಮಾಂಸದ ಮುದ್ದೆಯನ್ನು ಕಂಡು ಹೀಗೆಂದು ಕೇಳು ತ್ತಾನೆ: 'ಸೌಬಲೆ ಏನು ಮಾಡಿಬಿಟ್ಟೆ ನೀನು?' ಅವಳು ತನ್ನ ಮನಸ್ಸಿನಲ್ಲಿದ್ದ ಸತ್ಯವನ್ನು ಆ ಪರಮಋಷಿಗೆ ತಿಳಿಸಿಬಿಡುತ್ತಾಳೆ. 'ಜ್ಯೇಷ್ಠನಾಗಿ ಕುಂತಿಗೊಬ್ಬ ಮಗ, ರವಿಸಮಪ್ರಭನಾದವನು ಹುಟ್ಟಿದನೆಂದು ಕೇಳಿ ಪರಮದುಃಖದಿಂದ ನನ್ನುದರವನ್ನು ಘಾತಿಸಿಕೊಂಡೆ! ನೂರು ಮಕ್ಕಳನ್ನು ಪಡೆಯುವಂತೆ ನನಗೆ ನೀವು ಹಿಂದೆ ವರವಿತ್ತಿರುವಿರಿ. ಇದೊ ಮಾಂಸದ ಮುದ್ದೆಯೊಂದು ಹುಟ್ಟಿದೆ ನನಗೆ-ನೂರು ಮಕ್ಕಳಾಗುವ ಬದಲು!' (ಇದನ್ನು ಕೇಳಿ ಆ ಮಹರ್ಷಿ ಹೀಗೆನ್ನುತ್ತಾರೆ:) 'ಅದೀಗಲೂ ಹಾಗೆಯೆ, ಹೇ ಸೌಬಲೆ! ಬೇರೇನೂ ಆಗ ಲಾರದು. ಸಟೆಯನ್ನು ಸ್ವೈರದಿಂದಾದರೂ ಹಿಂದೆಂದೂ ಆಡಿಲ್ಲ. ಹೀಗಿರು ವಾಗ ನನ್ನ ಮಾತೆಲ್ಲಿ ಸಟೆಯಾದೀತು? ತುಪ್ಪ ತುಂಬಿದ ನೂರು ಗಡಿಗೆಗಳ ನ್ನಿಂದೇ ಬೇಗ ತರಿಸು; ಗುಪ್ತ ಪ್ರದೇಶದಲ್ಲವನ್ನು ಕಾಪಿಡಿಸು. ತಣ್ಣೀರನ್ನು ಈ ಮಾಂಸ ಪೇಶದ ಮೇಲೆ ಚಿಮುಕಿಸಿಲಿ.'

"ನೀರನ್ನು ಚಿಮುಕಿಸಿದಂತೆ ಆ ಮಾಂಸಘಟ್ಟಿಯು ಆಗ ಹೆಬ್ಬೆರಳ ಗಿಣ್ಣಿ ನಷ್ಟು ಗಾತ್ರದ ನೂರು ಚೂರಾಯಿತು. ಕಾಲವಾಗಲು ಆ ಮಾಂಸ ಪಿಂಡ ನೂರೊಂದು ಭಾಗವಾಯಿತು, ಹೇ ರಾಜ. ಅವುಗಳನ್ನಾಮೇಲೆ ತುಪ್ಪದ ಗಡಿಗೆ ಗಳಲ್ಲಿಟ್ಟು ಗುಪ್ತ ಪ್ರದೇಶಗಳಲ್ಲಿ ಕಾಪಿಡಲಾಯಿತು. ಮತ್ತೆ ಕಾಲವಾದಮೇಲೇ ಆ ಕುಂಡಗಳ ಮುಚ್ಚಳ ಬಿಚ್ಚಬೇಕೆಂದು ಆಗ ಭಗವಾನ್ ವ್ಯಾಸರು ಆಕೆಗೆ ತಿಳಿಸುತ್ತಾರೆ. ಹೀಗೆಂದು ನುಡಿದು ಧೀಮಂತ ಭಗವಂತ ವ್ಯಾಸರು ತಪಸ್ಸಿ ಗಾಗಿ ಹಿಮವತ್ ಪರ್ವತಕ್ಕೆ ತೆರಳುತ್ತಾರೆ. ಕಾಲ ಬರಲು ದುರ್ಯೋಧನ ನೃಪ ಅದರಿಂದ (ಆ ಪಿಂಡದಿಂದ) ಹುಟ್ಟುತ್ತಾನೆ. ಜನ್ಮಪ್ರಮಾಣದಂತೆ ಯುಧಿಷ್ಠಿರನೆ

ಜ್ಯೇಷ್ಠನಾಗುತ್ತಾನೆ. ದುರ್ಯೋಧನನ ಜನನವಾರ್ತೆಯನ್ನು ಭೀಷ್ಮರಿಗೂ ಧೀಮಂತ ವಿದುರನಿಗೂ ತಿಳಿಸುತ್ತಾರೆ. ಈ ದುರ್ಧರ್ಷ ದುರ್ಯೋಧನ ಹುಟ್ಟಿದ ದಿನವೇ ವೀರ್ಯವಂತನಾದ ಭೀಮ ಹುಟ್ಟುತ್ತಾನೆ. ಧೃತರಾಷ್ಟ್ರಸುತ ದುರ್ಯೋಧನ ಹುಟ್ಟಿದೊಡನೆಯೆ ಕತ್ತೆಯಂತೆ ಕಿರಚಿ ಅರಚುತ್ತಾನೆ. ಅದನ್ನು ಕೇಳಿದೊಡನೆಯೆ ಹದ್ದು ಗೋಮಾಯು ಕಾಗೆಗಳೆಲ್ಲ ಕಿರಚಿಕೊಂಡುವು. ಬಿರುಗಾಳಿ ಬೀಸಿತು, ದಿಗ್ದೇಶದಲ್ಲೆಲ್ಲ ಕಿಚ್ಚೆದ್ದಿತು. ಆಗ ಭೀತನಾದ ಧೃತ ರಾಷ್ಟ್ರ ವಿಪ್ರರನ್ನು ಭೀಷ್ಮ ವಿದುರರನ್ನು ಹಾಗೂ ಮಿತ್ರರಾದ ಇತರ ಕುರುರಾಜ ರನ್ನು ಕರೆಸಿ, 'ಜ್ಯೇಷ್ಠನಾದ ಯುಧಿಷ್ಠಿರ ರಾಜಪುತ್ರನು ನಿಮ್ಮ ಕುಲವರ್ಧನ ನಾಗಿದ್ದಾನೆ. ಸ್ವಗುಣದಿಂದ ಅವನಿಗೆ ರಾಜ್ಯ ಪ್ರಾಪ್ತವಾಗಿದೆ ; ಇದಕ್ಕೆ ನಾ ಹೇಳಬೇಕಾದುದೇನೂ ಇಲ್ಲ. ಅವನಾದ ಮೇಲೆ ನನ್ನವನೇನಾದರೂ ರಾಜ ನಾಗುತ್ತಾನೆಯೆ ? ಯಾವುದು ತಥ್ಯವೊ ಧ್ರುವವೊ ಅದನ್ನೆನಗೆ ತಿಳಿಸಿ!' ಎನ್ನುತ್ತಾನೆ. ಆಗ ದಿಕ್ಕುಗಳಲ್ಲೆಲ್ಲ ನರಿಗಳು ಮತ್ತಿತರ ಅಶಿವಸೂಚಕವಾದ ಘೋರ ಮೃಗಗಳು ಊಳಿಡಲಾರಂಭಿಸಿದುವು. ಆ ಘೋರ ನಿಮಿತ್ತಗಳನ್ನೆಲ್ಲ ಲಕ್ಷಿಸಿದ ಬ್ರಾಹ್ಮಣರೂ ಮಹಾಮತಿ ವಿದುರನೂ ರಾಜನಿಗೆ ಹೀಗೆನ್ನುತ್ತಾರೆ : 'ಈ ಘೋರ ನಿಮಿತ್ತಗಳೆಲ್ಲ ನಿನ್ನ ಹಿರಿಯ ಮಗನ ಜನನದಲ್ಲಿ ಹುಟ್ಟಿಕೊಂಡಿರು ವುದರಿಂದ, ಹೇ ಪುರುಷರ್ಷಭ ಮನುಜಾಧಿಪ! ನಿನ್ನಾಮಗ ಕುಲಾಂತಕ ನೆಂಬುದು ವ್ಯಕ್ತವಾಗುತ್ತದೆ. ಅವನ ಪರಿತ್ಯಾಗದಿಂದ ಶಾಂತಿಯುಂಟು ; ಉಳಿಸಿಕೊಳ್ಳುವುದರಿಂದ ಮಹಾ ವಿಪತ್ತಿದೆ. ನೂರು ಜನರಲ್ಲಿ ಒಬ್ಬನನ್ನು ತ್ಯಜಿಸಿದರೂ ಮಕ್ಕಳಿನ್ನೂ ಉಳಿಯುತ್ತಾರೆ ; ಒಬ್ಬನನ್ನು ತ್ಯಜಿಸಿ ಜಗತ್ತಿಗೂ ಕುರುಕುಲಕ್ಕೂ ಕ್ಷೇಮವನ್ನು ಶಾಂತಿಯನ್ನು ತಂದುಕೊ. ಕುಲಾರ್ಥವಾಗಿ ಒಬ್ಬನನ್ನು ತ್ಯಜಿಸಬೇಕು, ಗ್ರಾಮಾರ್ಥವಾಗಿ ಕುಲವನ್ನೂ ತ್ಯಜಿಸಬೇಕು ; ಜನಪದಕ್ಕಾಗಿ ಗ್ರಾಮವನ್ನೂ ಆತ್ಮಾರ್ಥವಾಗಿ ಪೃಥ್ವಿಯನ್ನೆ ತ್ಯಜಿಸಬೇಕು.' ಹೀಗೆ ವಿದುರನೂ ಎಲ್ಲ ದ್ವಿಜರೂ ಹೇಳಿದರೂ ಆ ರಾಜನು ಪುತ್ರಸ್ನೇಹ ಸಮನ್ವಿತನಾಗಿ ಅಂತೆ ನಡೆಯಲಿಲ್ಲ..."

ಕೌರವರ ದುರಂತ ಕಥೆಯ ಪ್ರಾರಂಭ ಹೀಗಾಗುತ್ತದೆ. ಅವರ ವಿಕೃತ ಪತ ನಕ್ಕೆ ಆ ಅವರ ತಾಯಿಯೆಷ್ಟು ಕಾರಣ ಎಂಬುದನ್ನಿಲ್ಲಿ ವಿವೇಚಿಸುವುದು ಸೂಕ್ತ. ತನ್ನ ಓರಗಿತ್ತಿಗೆ ಮೊದಲು ಮಗನಾದನಲ್ಲ ಎಂದು ಅಸಮಾಧಾನಗೊಂಡವಳು

ತನ್ನ ದಿವ್ಯಗರ್ಭವನ್ನು, ವ್ಯಾಸರಕ್ಷಿತವಾದ ಆ ಬಸಿರನ್ನು ಹೊಸೆದುಕೊಳ್ಳು ತ್ತಾಳೆ. ಪಂಪಕವಿ ಆ ಸನ್ನಿವೇಶವನ್ನು ಚಿತ್ರಿಸಿರುವ ರೀತಿಯನ್ನೂ ಇಲ್ಲಿ ನೆನೆದು ಕೊಳ್ಳಬಹುದು.

"ಅಂತು ಭರತ ಕುಲ ತಿಳಕರಪ್ಪೈರ್ವರ್ ಮಕ್ಕಳಂ ಪೆತ್ತು ಕುಂತಿ ಸಂತಸ ದಂತವುನೆಯ್ದಿರ್ಪುದಂ ಅತ್ತ ಧೃತರಾಷ್ಟ್ರನ ಮಹಾದೇವಿಯಪ್ಪ ಗಾಂಧಾರಿ ಕೇಳ್ದು ತನ್ನ ಗರ್ಭಂ ತಡೆದುದರ್ಕೆ ಕಿನಿಸಿ ಕಿಂಕಿರಿವೋಗಿ :

ಸಂತತಿಗೆ ಪಿರಿಯಮಕ್ಕಳ
ನಾಂ ತಡೆಯದೆ ಪಡೆವೆನ್ ಎಂದೊಡೆ ಎನ್ನಿಂ ಮುನ್ನಂ
ಕುಂತಿಯೆ ಪಡೆದಳ್ ಗರ್ಭದ
ಚಿಂತೆಯದಿನ್ನೇವುದು ಎಂದು ಬಸಿಱಂ ಪೊಸೆದಳ್
ಪೊಸೆದೊಡೆ ಪಾಲ್ಗಡಲಂ ಮಗು
ಳ್ದಸುರರ್ ಪೊಸೆವಲ್ಲಿ ಕಾಳಕೂಟಾಂಕುರಮುಂ
ಪೆಸದಳವೊಗೆವಂತೆ ಒಗೆದುವು
ಬಸಿಱಿಂ ನೂಱುಱೊಂದು ಪಿಂಡಮುರುಣಾಕೀರ್ಣಂ

ಅದಂ ಕಂಡು ಕಿನಿಸಿ ಕಿರ್ಚಿಟ್ಟು 'ಇವೆಲ್ಲಮಂ ಪೊಱಗೆ ಬಿಸುಟು ಬನ್ನಿಂ' ಎಂಬುದುಂ ವ್ಯಾಸಭಟ್ಟಾರಕಂ ಬಂದು ಗಾಂಧಾರಿಯುಂ ಬಗ್ಗಿಸಿ :

ಒದವುಗೆ ನಿನ್ನ ಸಂತತಿಗೆ ನೂರ್ವರಿಳ್ ಉದಗ್ರ ಸುತರ್ಕಳ್ ಒಂದೆ ಗ
ರ್ಭದೊಳ್ ಎನೆ, ಕಮ್ಮನಿಂತು ಪೊಸೆದಿಕ್ಕಿದೆ, ಪೊಲ್ಲದುಗೆಯ್ದೆ, ಎಂದು ಮಾ
ಣದೆ ಮುನಿ ನೂಱು ಪಿಂಡಮುಮನ್ ಆಗಳೆ ತೀವಿದ ಕಮ್ಮನಪ್ಪ ತು
ಪ್ಪದ ಕೊಡದೊಳ್ ಸಮಂತು ಮಡಗಿಟ್ಟೊಡೆ ಸೃಷ್ಟಿಗೆ ಚೋದ್ಯಮಪ್ಪಿನಂ"

ಪಂಪನ ಮೇಲಣ ನಿರೂಪಣೆಯಲ್ಲಿ ಒಂದಂಶ ಮಾತ್ರ ಸ್ಪಷ್ಟವಾಗುತ್ತದೆ: ಗಾಂಧಾರಿಯ ಒಂದೆ ಬಸಿರಿನಲ್ಲಿ ನೂರುಜನ ಮಕ್ಕಳಾಗಲೆಂದು ಅಪರಿತ್ತಿದ್ದ ವರ ಉದಗ್ರವಾದುದಾಗಿತ್ತು. ನಾಯಿ ನರಿಯಂತಹ ಮಕ್ಕಳಲ್ಲ, ಉದಗ್ರ ಪುತ್ರರು ನೂರುಜನ ಹುಟ್ಟುವಂತೆ ವರವಿತ್ತಿರುತ್ತಾರೆ. ಅವರ ಮಾತು ವ್ಯಾಸರೆ ಹೇಳುವಂತೆ ಅಮೋಘವಾದುದು ; ಅವರೆಂದೂ ಸಟೆಯಾಡಿದವರಲ್ಲ. ಆದರೆ ಓರಗಿತ್ತಿಯ ಮೇಲಣ ಸಹಜವಾದ ಸ್ಪರ್ಧಾಸೂಯೆಯಿಂದಾಗಿ ಆ ಗಾಂಧಾರಿ ಕಿನಿಸಿ ಕಿಂಕಿರಿಯೋಗಿ ತನ್ನ ಅಮೃತ ಗರ್ಭವನ್ನು ಹೊಸೆದುಕೊಳ್ಳುತ್ತಾಳೆ : ಅಮೃತ ಸಮುದ್ರವನ್ನು ಮುನಿದು ಮಥಿಸಿದ ರಾಕ್ಷಸರಂತೆ. ಅವಳು ಸಾಧ್ವಿಯೆ ಆದರೂ ಅವಳಿಗಂದು ಬಂದ ಭಾವ ರಾಕ್ಷಸರನ್ನು ಪ್ರೇರಿಸಿದ ಅಸದ್ ಭಾವಕ್ಕೆ

ಸಮಾನವಾಗಿಯೆ ಇತ್ತು. ಇದರ ಫಲವೆಂದರೆ ವಿಷೋದ್ಭವ; ಅವರೆ ಕೌರವರು. ಮುಂದವರು ಪಾಂಡವರನ್ನಷ್ಟು ದ್ವೇಷಿಸಿ ಅಸೂಯೆಗೊಳ್ಳುವುದಕ್ಕೆಲ್ಲ ಅವರ ತಾಯಿ ಅಂದು ತೋರ್ಪಡಿಸಿದ ಭಾವನೆ ತಾಯಾಗುತ್ತದೆ. ಅವಳು ಯಾವ ಭಾವದಿಂದ ಪ್ರೇರಿತಳಾಗಿ ತನ್ನ ಬಸಿರನ್ನು ಕೆಡಿಸಿಕೊಳ್ಳುತ್ತಾಳೊ ಆ ಅದೇ ದುರ್ಭಾವವನ್ನೆ ಅವಳ ಪತಿತ ಪುತ್ರರು ತಾಳಿಕೊಳ್ಳುತ್ತಾರೆ. ಅವರ ತಾಯಿ ಅಸೂಯೆಯಿಂದ ಬೇಗುದಿಗೊಂಡು ತನ್ನ ದಿವ್ಯಗರ್ಭವನ್ನು ಹೊರದೂಡಿದರೆ ಅವರು, ರಾಜ್ಯಕ್ಕೆ ಮೊದಲ ಹಕ್ಕುದಾರನಾದ ಧರ್ಮರಾಯನನ್ನು ಸಹೋದರ ಸತೀ ಸಮೇತ-ವಾಗಿ ಉಚ್ಚಾಟಿಸಿ ಕಾಡಿಗಟ್ಟುತ್ತಾರೆ. ಬರಿದೇಕೆ ಅವನನ್ನೆ ದೂಷಿಸಬೇಕು ? ಒಂದುವೇಳೆ ಗಾಂಧಾರಿ ವ್ಯಾಸರ ಕೃಪೆಯಲ್ಲಿ ಶ್ರದ್ಧೆಯಿದ್ದು ಅದರ ಸಿದ್ಧಿಯ ಸುಮುಹೂರ್ತದ ತನಕವೂ ಗಂಭೀರವಾಗಿ ಕಾಯ್ದುಕೊಂಡಿದ್ದರೆ ಅವಳಿಗೆ ಹುಟ್ಟುತ್ತಿದ್ದ ಮಕ್ಕಳಾದರೂ ಎಂಥ ಮಹಾನುಭಾವರಾಗುತ್ತಿದ್ದರು ! ವ್ಯಾಸ ಮಹರ್ಷಿಗಳು ವರವಿತ್ತ ಸಂತಾನವೆಲ್ಲ ಏನು ದುರ್ದೈವದಿಂದಲೊ ಏನೊ ಹೀಗಾಯಿತು. ಅದವರ ತಪ್ಪೆ ? ತಾಯಂದಿರು ಅವರ ಕೃಪೆಯನ್ನು ತಾಳಿಕೊಳ್ಳುವಷ್ಟು ಸಮರ್ಥರೂ ಶ್ರದ್ಧಾವಂತರೂ ಆಗಿದ್ದು ಕಾಯುವ ನೋಂಪಿ ಕೈಗೊಂಡಿದ್ದರೆ ? .ಮಹಾಭಾರತವೆಲ್ಲ ಈಗ ಇರುವುದಕ್ಕೆ ವಿರುದ್ಧವಾಗಿಯೆ ಇದ್ದಿರುತ್ತಿತ್ತಲ್ಲ.

ಈ ತಾಯಂದಿರ ಪ್ರಮಾದದಿಂದಾಗಿ ಮಹಾಭಾರತವೆಲ್ಲ ಅತ್ಯನಿವಾರ್ಯವಾದ ಅನಾಹುತಕ್ಕೀಡಾಗುತ್ತದೆ. ಅತ್ಯಲ್ಪವೆಂದು ನಿರ್ಲಕ್ಷ್ಯವಾಗಿ ತೋರಿದ ಅವರ ಅವಿವೇಕದಿಂದಾಗಿ ಭವಿಷ್ಯತ್ತೆಲ್ಲ ಎಷ್ಟು ಭಯಾನಕವಾಗುತ್ತದೆ. ಇದನ್ನು ಪರಿಭಾವಿಸಿದಷ್ಟೂ ರುದ್ರಗಂಭೀರಾನುಭವ ತೀವ್ರತರವಾಗಿ ಆಗ ತೊಡಗುತ್ತದೆ. ಲೋಕ ಸಿದ್ಧವಾಗುವ ಮುನ್ನವೆ, ಶಕ್ತವಾಗುವ ಮೊದಲೆ, ಕಾಲಪೂರ್ವದಲ್ಲೆ ಯಾವ ಮಹಾಸತ್ತ್ವಗಳು ಅವತರಿಸಿ ಬಂದರೂ ಆಗುವುದು ಬರಿಯ ಗರ್ಭಪಾತವೆ ಏನು ? ಜೀವಪತನವೆ ಏನು ?

ಮುಂದೆ ಕರ್ಣನಾಗಲಿ ಕೌರವನಾಗಲಿ ತೋರುವ ಆತುರ ಈ ತಾಯಂದಿರ ವರ್ತನದ ಮುಂದೆ ಅತ್ಯಲ್ಪವೆ ಸರಿ. ಅವರ ಅವಿವೇಕಕ್ಕೆ ಪ್ರಧಾನತಃ ಅವರವರೆ ಬಲಿಯಾಗುತ್ತಾರೆ. ಈಗಿಲ್ಲಿ ಕರ್ಣ ಮಾಡಿದ ಆತುರ ಪ್ರಮಾದವನ್ನು ನೋಡಬಹುದು.

ಕೌರವ ಸೈನ್ಯದ ಸೇನಾನಾಯಕರಾಗಿ ಭೀಷ್ಮರಿಗೆ ಅಭಿಷೇಕ ಮಾಡುತ್ತಾರೆ. ಎಲ್ಲರೂ ಹಿಗ್ಗುತ್ತಿರುವಾಗ ದುರ್ಯೋಧನ ಅವರನ್ನು ಕುರಿತ ತನ್ನ ಸಂತೃಪ್ತಿಯನ್ನೂ ಅಭೀತಿಯನ್ನೂ ಹೇಳಿಕೊಂಡು, ಅವರಿರುವಾಗ ತಾನಿನ್ನು ಯಾರಿಗೂ-ದೇವತೆಗಳಿಗೂ-ಹೆದರಬೇಕಿಲ್ಲವೆಂದು ತಿಳಿಸುತ್ತಾನೆ. ಹಾಗೂ ತನ್ನ ಪಕ್ಷದಲ್ಲಿ ಯಾರು ಯಾರು ಮಹಾರಥರು ಅತಿರಥರು ಅರ್ಧರಥರು ಎಂಬುದನ್ನು ತನಗೆ ತಿಳಿಸಬೇಕೆಂದು ಅವರನ್ನು ಕೇಳಿಕೊಳ್ಳುತ್ತಾನೆ. ಅದರಂತೆ ಭೀಷ್ಮರು ಎಲ್ಲರನ್ನೂ ವರ್ಣಿಸಿ ಕರ್ಣನನ್ನು ಮಾತ್ರ ಅರ್ಧರಥ ಎಂದೆ ನಿರ್ಲಕ್ಷಿಸುತ್ತಾರೆ, ಅವಹೇಳನ ಮಾಡುತ್ತಾರೆ.* ಅದರಿಂದ ಮುಖಮುರಿದಂತಾದ ಕರ್ಣ ಭೀಷ್ಮರನ್ನು ಖಂಡಿಸಿ ತಾನವರು ಸೇನಾಧಿಪತಿಯಾಗಿರುವ ತನಕವೂ ಬಿಲ್ಲು ಹಿಡಿಯುವುದಿಲ್ಲವೆಂದೆ ಪ್ರತಿಜ್ಞೆ ಮಾಡುತ್ತಾನೆ. ಅವನ ಪ್ರತಿಕ್ರಿಯೆ ಉಗ್ರವಾದುದೆ ಆದರೂ ಅಕಾರಣವಾದದ್ದೇನೂ ಆಗಿರಲಿಲ್ಲ. ಆದರೂ ಆತ ಆತುರಗೊಂಡ ಮುದುಕಿದ ಎಂದೇ ಹೇಳಬೇಕು. ಈ ಪ್ರಸಂಗವನ್ನು ವ್ಯಾಸರು ಪಂಪಕುಮಾರವ್ಯಾಸರು ಬೇರೆ ಬೇರೆ ನಿಲುವಿನಿಂದ ನೋಡಿರುವುದನ್ನು ಗಮನಿಸದಿದ್ದರೆ ತಪ್ಪಾದೀತು. ಅದರ ತಾರತಮ್ಯ ವಪೌಲ್ಯ ವಿವೇಚನೆಗಿಲ್ಲಿ ಕೈಹಾಕದೆ, ಪಂಪನ ಭೀಷ್ಮರು ಆ ಸಂದರ್ಭದಲ್ಲಿ ಆಡುವ ಬಹು ಗಂಭೀರವಾದ ಮಾತನ್ನಿಲ್ಲಿ ನೆನೆದುಕೊಳ್ಳಬಹುದು :

"ಕಲಿತನಮುರ್ಕು, ಜವ್ವನದ ಸೊರ್ಕು, ನಿಜೇಶನ ನಚ್ಚು, ಮಿಕ್ಕ ತೋ
ಳ್ವಲದ ಪೊದರ್ಪು, ಕರ್ಣ ! ನಿನಗುಳ್ಳನಿತೇನೆನಗುಂಟೆ ? ಭಾರತಂ
ಕಲಹಂ ! ಇದಿರ್ಚುವಂ ಹರಿಗನ್ ! ಅಪ್ಪೊಡೆ ಮೊಕ್ಕಳಮೇಕೆ ? ನೀಂ ಪಳಂ
ಚಲೆವಪೆಯಣ್ಣ ! ಸೂಳ್ಪಡೆಯುಲಪ್ಪುದು ಕಾಣ ಮಹಾಜಿರಂಗದೊಳ್ !"

ನಮ್ಮ ಗಮನಕ್ಕಿಲ್ಲಿ ಬರಬೇಕಾದುದು ಕಡೆಯ ಪಂಕ್ತಿ ಮಾತ್ರ. ಪಂಪ ಕವಿ

---

* ಇಲ್ಲಿ ವ್ಯಾಸರಿಗೂ ಪಂಪ ಕುಮಾರವ್ಯಾಸರಿಗೂ ವ್ಯತ್ಯಾಸವಿದೆ. ಇವರು ಈ ಪ್ರಚೋದನೆಯನ್ನೆ ನಿರೂಪಿಸದೆ ಬರಿದೆ ಕರ್ಣನೆ ಕಾಲು ಕೆರೆದಂತೆ ಚಿತ್ರಿಸಿ ಮೂಲ ಕವಿಯ ಇಂಗಿತವನ್ನು ಪಡಿಮೂಡಿಸುವಲ್ಲಿ ತಪ್ಪಿದ್ದಾರೆ. ವ್ಯಾಸರು ಕರ್ಣನ ಪಾತ್ರವನ್ನು ಚಿತ್ರಿಸುವಾಗ ಈ ಎಲ್ಲ ಕವಿಗಳಿಗಿಂತಲೂ ಹೆಚ್ಚು ಅನುಕಂಪೆಯನ್ನು ತೋರಿದ್ದಾರೆಂಬುದನ್ನೇಕೊ ಇತ್ತೀಚಿನ ವಿಮರ್ಶಕವರೇಣ್ಯರು ನಿರ್ಲಕ್ಷಿಸಿದ್ದಾರೆ. ತಾವೇ ಕಾನೀನರಾದ ವ್ಯಾಸಮಹರ್ಷಿಗೆ ಕಾನೀನನಾದ ಕರ್ಣನ ಕಥೆಯಲ್ಲಿ ಸಹೃದಯತೆಯಿದೆ ಆತ್ಮೀಯತೆ ಇದೆ ಎಂಬುದನ್ನು ನಾವಾದರೂ ಮರೆಯಬಾರದು. ಇದನ್ನು 'ಕರ್ಣ ಕವಚ' ಎಂಬ ಲೇಖನದಲ್ಲಿ ಸವಿಸ್ತಾರವಾಗಿ ವಿವೇಚಿಸುವೆ.

ಆ ಮಾತಿನಲ್ಲಿ ತನ್ನ ಜೀವನ ದರ್ಶನದ ಒಂದಂಶವನ್ನಷ್ಟೆ ಅಲ್ಲದೆ ಲೋಕಸತ್ಯ ದರ್ಶನವನ್ನೂ ಮಾಡಿಸಿದ್ದಾನೆ. 'ಸೊಟ್ಪಿಡೆಯುಲಪ್ಪುದು ಕಾಣ ! ಮಹಾಜಿ ರಂಗದೊಳ್ !' ಎನ್ನುವ ತಾಳ್ಮೆಯೂ ಇದ್ದಿದ್ದರೆ ಕೌರವನ ಪಕ್ಷದ ನಾಯಕರು ಕೆಲವರು ತಪ್ಪಿ ನಡೆಯುತ್ತಿರಲಿಲ್ಲ. ಅವರೆಲ್ಲ ಮಹಾವೀರರೆ ; ಆದರೇನು, ತಮ್ಮ ಸರದಿ ಕಾಯಲು ತಾಳ್ಮೆ ತೋರಲಿಲ್ಲ. ಪಾಂಡವರ ಕಡೆ ಧೃಷ್ಟದ್ಯುಮ್ನನಂಥ ದ್ವಿತೀಯ ವರ್ಗದ ವೀರನನ್ನು ನೆಪಮಾತ್ರಕ್ಕೆ ಸೇನಾನಾಯಕನೆಂದು ಒಪ್ಪಿ ಕೊಂಡು ಶ್ರೀಕೃಷ್ಣ ನಿರ್ದೇಶನದಲ್ಲಿ ಸುರಕ್ಷಿತರಾಗಿರುತ್ತಾರೆ. ಆದರೀ ಪಕ್ಷದವರಲ್ಲಿ ಏಕಾಭಿಪ್ರಾಯ ಐಕ್ಯ ಬರಲೇ ಇಲ್ಲ. ಹಾಗಾಗಿ ಸರದಿಕಾಯುವ ತಾಳ್ಮೆ ಬರ ಲಿಲ್ಲ. ಕರ್ಣ ತನಗಾದ ಅಪಮಾನವನ್ನೂ ಸ್ಥೈರಿಸಿಕೊಂಡಿದ್ದು (ವ್ಯಾಸ ಭಾರತದ ಪ್ರಕಾರ) ಭೀಷ್ಮರ ದಂಡನಾಯಕತ್ವವನ್ನೂ ಒಪ್ಪಿಕೊಂಡು ಸುಮ್ಮನಿದ್ದಿದ್ದರೆ ಬಹುಶಃ ಕೌರವರ ಸೋಲು ಅಷ್ಟು ಬೇಗ ಆಗುತ್ತಿರಲಿಲ್ಲ.

ಪಂಪನ ಮೇಲಿನ ಮಾತನ್ನಷ್ಟು ಬದಲಿಸಿ 'ಸೊಟ್ಪಿಡೆಯುಲಪ್ಪುದು ಕಾಣ ಭವಾಜಿರಂಗದೊಳ್' ಎಂದು ಓದಿಕೊಂಡರೆ ಮಹಾಭಾರತದ ಒಂದು ದರ್ಶನಾನು ಭವ ಆದೀತು. ಜೀವನ ಸಂಗ್ರಾಮದಲ್ಲಿ ಪ್ರತಿಯೊಬ್ಬರಿಗೂ ಅವರವರ ಸರದಿ ಬರುತ್ತದೆ. ಮಹಾಭಾರತ ಯುದ್ಧ ಭೀಷ್ಮರಿಂದಲೂ ಮುಗಿಯಲಿಲ್ಲ. ಕರ್ಣ ನಿಂದಲೂ ಆಗದು. ಅವನಿಗೂ ಒಂದು ಸರದಿಯಷ್ಟೆ ಬರುತ್ತದೆ. ಅದಕ್ಕಾಗಿ ಅಷ್ಟೆ ಕಾಯಬೇಕು. ಬದುಕಿನ ಎಷ್ಟೋ ದುಃಖಕ್ಕೆ ಕಾರಣ ಈ ಪಾಳಿಕಾಯದ ಆತುರಬುದ್ಧಿಯೆ ಆಗಿದೆ. ಬದುಕು ವಿಸ್ತಾರವಾಗಿದೆ; ಹೀಗಿರುವಾಗ ಅವರವರು ಅವರವರ ಸರದಿ ಕಾದರೇನು ಮಹಾತ್ಯಾಗ ಮಾಡಿದಂತಾಯಿತು ? ಅಷ್ಟು ಕಾಯಬಾರದೆ ? ಹಾಗಾದರೆ ಬೇರೆಯವರು ಹೇಗೆ ಕಾಯಬೇಕು ? ದುರಂತ ವೆಂದರೆ ನಮ್ಮೊಳಗೆಲ್ಲ ಈ 'over take' ಮಾಡುವ ಬುದ್ಧಿ, ಮುಂದೆ ಹೋಗುವುದಷ್ಟೆ ಅಲ್ಲ ಹಿಂದೆ ಹಾಕುವ ಬಯಕೆ ಸಹಜವಾಗಿಯೆ ಒಳಬೆಳೆದಿದೆ. ಅದನ್ನು ಬಿಗಿ ಹಿಡಿದು ನಡೆಸಿಕೊಳ್ಳುವುದೆ ಸಂಸ್ಕೃತಿ–ಧರ್ಮ.

ಕಡೆಯದಾಗಿ ದುರ್ಯೋಧನನೆಸಗಿದ ಆತುರಜನ್ಯಪ್ರಮಾದವನ್ನಿಲ್ಲಿ ವಿವೇಚಿಸ ಬಹುದು :

ತನ್ನ ಪಕ್ಷದವರೆಲ್ಲ ಹತರಾದಮೇಲೆ (–ಅಶ್ವತ್ಥಾಮ ಕೃಪ ಕೃತವರ್ಮರನ್ನು ಳಿದು–) ಕೌರವ ಭೀಷ್ಮಾಚಾರ್ಯರ ಆಣತಿಯಂತೆ ವೈಶಂಪಾಯನ ಸರೋವರದಲ್ಲಿ

ಒಂದು ದಿನ ಕಾಲಹರಣ ಮಾಡುತ್ತಿರುತ್ತಾನೆ* (-ಪಂಪನ ಪ್ರಕಾರ-). ಆ ದಿನ ವೊಂದು ಕಳೆದಿದ್ದರೆ ಅವನಿಗಿದ್ದ ಮೈತ್ರೇಯರ ಶಾಪದ ಅವಧಿಯೂ ಕಳೆದು ಹೋಗುತ್ತಿತ್ತು. ಅವನ ಗುರು ಬಲರಾಮನೂ ನೆರವಿಗೆ ಬರುತ್ತಿದ್ದ. (ವ್ಯಾಸರಲ್ಲಿ ಈ ಬಗೆಯಿಲ್ಲ). ಆದರೆ ಪಾಂಡವರು ಅವನನ್ನರಸಿಕೊಂಡಲ್ಲಿಗೆ ಹೋಗಿ ನಾನಾ ವಿಧವಾಗಿ ಅವಹೇಳನ ಮಾಡಿದಾಗ ಆತ ಕಡೆಯಲ್ಲಿ ಭೀಮನ ಪರುಷೋಕ್ತಿಗೆ ಸಿಡಿದೆದ್ದು ಚಿಮ್ಮಿ ಬರುತ್ತಾನೆ. ಅದರಿಂದಾದದ್ದೇನು ವ್ರತಭಂಗ, ಊರುಭಂಗ! ಕಾಯಬಾರದಿತ್ತೆ ಅವನಾದರೂ ಕೂಡ. ಕುಂತಿಯೆ ಕಾಯಲಿಲ್ಲ, ಇನ್ನವಳ ಮಗ ಕರ್ಣ ಹೇಗೆ ತಾನೆ ಕಾದಾನು? ಅದೂ ತನ್ನನ್ನು ಪ್ರಚೋದಿಸುತ್ತಿರುವ ಕಾರಣಗಳೆ ಹೆಚ್ಚಾಗಿರುವಾಗ! ಗಾಂಧಾರಿಯೆ ತಾಳ್ಮೆಯಿಂದ ಕಾಯದಿದ್ದಾಗ ಗಾಂಧಾರೀಜ ಹೇಗೆತಾನೆ ಅಭಿಮಾನಹತಿಯನ್ನು ತಾಳಿಕೊಂಡು ನೀರೊಳಗೆ ಅದುಮಿಕೊಂಡಿದ್ದಾನು?

ಅಂತೂ ಮಹಾಭಾರತದಲ್ಲಿ ಅವರಾರೂ ಕಾಯಲಿಲ್ಲ. ಈ ಇವರು ಕಾಯದ್ದ ರಿಂದೇನೂ ಮಹಾ ಅನಾಹುತವಾಗಲಿಲ್ಲ. ಆದರಾ ತಾಯಂದಿರು ಕಾಯದೆ ತಾಳ್ಮೆಗೆಟ್ಟದ್ದರಿಂದಲೆ ಈ ಎಲ್ಲ ವಿಪತ್ ಪರಂಪರೆ ಸೃಷ್ಟಿಗೊಂಡಿತು. ಆ ಈ ಯಾರೂ ಕಾಯದಿದ್ದರೂ ಮಹಾಭಾರತದಲ್ಲಿ ಅಜ್ಞಾತವಾಗಿಯೆ ಇದ್ದು ಕಾಯ್ದುನಿಂತ ಮಹಾವ್ಯಕ್ತಿಯೊಬ್ಬನುಂಟು. ಅವನೆ ಏಕಲವ್ಯ. ಶ್ರೀಕವಿ ಕುವೆಂಪು ಅವರು ಅವನ ಆ ತಪಸ್ಸನ್ನು ಅದ್ಭುತವಾಗಿ ಪ್ರತಿಮಿಸಿದ್ದಾರೆ, ತಮ್ಮ 'ಬೆರಳ್ ಗೆ ಕೊರಳ್' ನಾಟಕದಲ್ಲಿ. ಲೋಕೈಕ ಧನುರ್ಧರನಾಗಬೇಕೆಂಬ ಹಂಬಲದಿಂದ ವಿಷಮನಸ್ಕನಾದ ಅರ್ಜುನ ತನ್ನ ಗುರುವಿನ ಮೂಲಕ ಏಕಲವ್ಯನ ಹೆಬ್ಬೆರಳನ್ನು ಬಲಿಗೊಳ್ಳುತ್ತಾನೆ. ಆದರೆ ಹಾಗೆ ಬಲಿಗೊಳ್ಳುವುದೂ ಯಜ್ಞಕರ್ಮವೆಂದೆ, ಭಗವದರ್ಪಣ ವಿಧಾನವೆಂದೆ ಸ್ವೀಕರಿಸಿಕೊಂಡ ಆ ಮಹಾ ಪುರುಷ ಏಕಲವ್ಯ ಆಡುವ ಮಾತಿದು:

---

* ಈ ಭಾಗದಲ್ಲಿ ಪಂಪ ವ್ಯಾಸರಿಗಿಂತ ಬೇರಾಗಿದ್ದಾನೆ. ಅವನನ್ನು ರನ್ನ ಅನು ಸರಿಸಿದ. ಕುಮಾರವ್ಯಾಸ ವ್ಯಾಸರನ್ನೆ ಒಪ್ಪಿನಡೆದ. ಪಂಪನಲ್ಲಿ ಕಂಡುಬರುವ ಮಾರ್ಪಾಟು ಯಾವಾಗ ಯಾರಿಂದಾಯಿತೊ; ಪಂಪನಿಂದಲೆ ಆಯಿತೆ? ಅದು ಬಿಡಿಸಿಯಬೇಕಾದ

"ಕಲಿಕರದ ಕಾರ್ಮುಕದ ಹೆದೆಯೇರಿ
ಸಮರದೊಳ್ ಕಾದುವಾ ಕರ್ಮಮಂ ಕೈಮುಗಿದೊಲ್,
ಬತ್ತಳಿಕೆಯಂ ಸೇರಿ, ಬೆನ್ನೇರಿ, ತಾಳ್ಮೆಯಿಂ
ತನ್ನ ಸೂಳಂ ಕಾಯ್ವ ಕೈದುವ ಅಕರ್ಮವುಂ
ಸಾರ್ಥಕಂ, ಪೇಳ್, ಕೃತಕೃತ್ಯಮಕ್ಕುಂ.
ಮೊದಲೆ ಹೆದೆಯೇರುವೊಂದು ತವಕಮಾ ಅರ್ಜುನಗೆ!
ಕಲಿಯ ಕಯ್ ತುಡುಕಿದಂದೇರ್ದ್ವಿನಾಸ್ ಸಿಂಜಿನಿಗೆ :
ಕಾಯ್ವುದುಂ ಕರ್ಮವೆಂಬೆ, ಭಗವನ್ನಿಷಂಗಮಂ
ಸೇರ್ದ ಬಳಿಕಂ! ಬತ್ತಳಿಕೆಯಂ ಸೇರಿ, ಶಿವನ
ಬೆನ್ನೇರ್ವುದಲ್ತೆ ಮುಖ್ಯಂ...!"*

ಕಾಯುವುದೆಂದರೆ ನಿದ್ರಿಸುವುದೆಂದಲ್ಲ; ಅಭಾವಸ್ಥಿತಿಯೆಂದೂ ಅಲ್ಲ. ಅದಕ್ಕತಿ ವಿರುದ್ಧವಾಗಿ ಅದು ಸದಾ ಜಾಗ್ರತವಾಗಿರುವ ಸ್ಥಿತಿ; ಕ್ರಿಯಾತ್ಮಕ ಭಾವಾತ್ಮಕ ಸ್ಥಿತಿ. ಬತ್ತಳಿಕೆಯ ಬಾಣ ನಿದ್ರಿಸುತ್ತಿರುವುದಿಲ್ಲ. ಅಂತೆಯೆ ಮುನ್ನುಗ್ಗುವುದಕ್ಕಾಗಿ ತುಡಿಯುತ್ತಲೂ ಇರುವುದಿಲ್ಲ. ಆದರದು ಸದಾ ಸಿದ್ಧವಾಗಿರುತ್ತದೆ. ಇಂಥ ಕಾಯುವಿಕೆ ಕಾಯಕವೆ ಸರಿ, ತಪಸ್ಸೆ ಸರಿ. ಕಾಯುವುದು ಕಾಯುವುದು ಎರಡೂ ಒಂದೆ. ಕಾಯುವುದರಲ್ಲೆ ಕಾವುಂಟು. ಕಾವಿದ್ದರೆ ಜೀವ ಉಂಟು; ಕಷ್ಟಲ ದಹನಕ್ರಿಯೆಯುಂಟು. ಆ ಅದನ್ನೆ ತಪಸ್ ಎನ್ನುವುದು. ಆದರೆ ನಾವು ಕಾಯುವುದು ಏತಕ್ಕಾಗಿ ಎಂಬುದರ ಮೇಲೆ ಅದರ ಪಾವಿತ್ರ್ಯವನ್ನು ತೀರ್ಮಾನಿಸಬಹುದು. ಹೊಟೇಲುಗಳಲ್ಲಿ, ಬಸ್ಸುಗಳಿಗಾಗಿ, ಸಿನೆಮಾಮಂದಿರಗಳಿಗಾಗಿ ಕಾದುಕಾದು ಕಾಲುನೋಯಿಸಿಕೊಳ್ಳುವುದಷ್ಟನ್ನೆ ಕಾಯುವುದೆಂದರೆ ಹೇಗೆ? ನಾಲ್ಕು ಜನರ ಕಣ್ಣಿಗೂ ಬೀಳದ, ಮಂಗಳಕ್ಕಾಗಿ ಮಹತ್ತಿಗಾಗಿ ಕಾಯುವ ಕರ್ಮವಿದೆಯಲ್ಲ ಅದು ಭಯಂಕರ ತಪಸ್ಸೆ ಸರಿ. ತನ್ನ ಪ್ರಿಯನ ಪುನರ್‌ಲಾಭಕ್ಕಾಗಿ ಹಿಮವದ್ಗಿರಿ ಸನ್ನಿಧಿಯಲ್ಲಿ ಲೋಕ ಅಗೋಚರವಾಗಿ ಕಾಯುತ್ತಿರುವ ಮಹಾಶ್ವೇತೆಯೂ ತಪಸ್ವಿನಿಯೆ. ರಾಮನಿಗಾಗಿ

---

* ಶ್ರೀಕವಿ ಕುವೆಂಪು ಅವರ ಶ್ರೀರಾಮಾಯಣದರ್ಶನಂ ಮಹಾಕಾವ್ಯದಲ್ಲಿ ಇದೊಂದು ಅವಿಭಾಜ್ಯವಾದ ದರ್ಶನಾಂಶವಾಗಿಯೆ ಮೈದಾಳಿಕೊಂಡಿದೆ. cf : 'They also serve who stand and wait' ಎಂಬ ಮಿಲ್ಟನ್ ಕವಿಯ ಮಾತನ್ನು.

ತನ್ನ ಮುಪ್ಪಿನಲ್ಲೂ ಕಾದು ಹಂಬಲಿಸಿದ ಶಬರಿಯೂ ತಪಸ್ವಿನಿಯೆ. ಮುನ್ನೆಲೆಗೆ ನುಗ್ಗದೆ ಶಿವಾರ್ಪಿತವಾಗಿ ಬತ್ತಳಿಕೆಯಲ್ಲೆ ಉಳಿದ ಏಕಲವ್ಯನೂ ಮಹಾ ತಪಸ್ವಿಯೆ.

ಕಾಯುವ ಕ್ಷಣ ಒಂದಾದರೂ ಆ ಒಂದು ಕ್ಷಣಬಿಂದುವಿನ ಮೇಲೆ ಎಂಥ ಗಿರಿಭಾರ ಕಡಲೊತ್ತಡಗಳು ಹರಿದು ಹೋಗುವುದಿಲ್ಲ! ಅಂಥ ಆ ಕ್ಷಣಗಳನ್ನು ತಾಳಿಕೊಳ್ಳುವುದೆಂದರೆ ಮಹಾಸಾಧನೆಯೆ ಸೈ. ಸಿಡಿಲೆರಗಿದಾಗ ಕರಗಿಹೋಗದ 'ಫ್ಯೂಸ್ ವೈರ್'ಗಳುಂಟೆ? ಆ ತಂತಿ ಕರಗಿಹೋಗದಿದ್ದರೆ ಮನೆಯೊಳಗಿನ ದೀಪ ಮೊದಲಾದ ಪರಿಕರಗಳೆಲ್ಲ ಉರಿದುಹೋದಾವು? ಅಂತೂ ಕಾಯುವ ಆ ಘಳಿಗೆ ಯಲ್ಲಿ ನಮ್ಮೊಳಗೇ ಇರುವ ಎಷ್ಟೆಲ್ಲ ರಾಗ ಸಂಸ್ಕಾರಗಳೆಲ್ಲ ಭುಗಿಲ್ಲನೆ ಸಿಡಿದೇಳು ವುದಿಲ್ಲ. ಶಂಕೆ ಭಯ ನಿರಾಶೆ ಪ್ರತ್ಯಾಶೆ ಅವಿಶ್ವಾಸ ದುಃಖ ಮುನಿಸು ಕಿನಿಸು ನಿರ್ವೇದ–ಎಷ್ಟೆಲ್ಲ ಭಾವಗಳ ಬಿರುಗಾಳಿಯಲೆಯುಪ್ಪಳಿಸಿ ಸುಂಟರುಗಾಳಿ ಸುಳಿ ಎತ್ತೆಸೆಯುವುದಿಲ್ಲ? ಆ ಸಂಚಾರಿಭಾವಗಳಲ್ಲಾವುದಾದರೊಂದೆ ಸ್ಥಾಯಿಯಾಗಿ ಬಿಟ್ಟರಂತೂ ನಾವು ಸತ್ತಂತೆಯೆ ಸರಿ. ರಾಗ ಶಮನಗೊಳಿಸಿಕೊಳ್ಳುವ ಶಕ್ತಿಯಿರ ದಿದ್ದರೆ ಶ್ರದ್ಧಾ ರಕ್ಷೆಯಾದರೂ ಇರದಿದ್ದರೆ ಚೇತನ ಹರಿಹಂಚಾಗುತ್ತದೆ, ಆಗ.

ಆದ್ದರಿಂದ ಕಾಯುವುದು ಎಂದರೆ, ನಮ್ಮೊಳಗೇ ಪ್ರಸುಪ್ತವಾಗಿರುವ ನಾನಾ ರಾಗಭಾವಗಳನ್ನು-ಸುರುಳಿಗೊಂಡು ಮೈಮರೆತಿರುವ ನಾನಾವರ್ಣದ ನಾಗರ ಗಳನ್ನು ಬಡಿದೆಬ್ಬಿಸಿ ರೇಗಿಸಿ ಆಮೇಲೆ ಸಂಯಮನಗೊಳಿಸಿ ನಿಯಂತ್ರಿಸುವ ಸಾಧನೆ ಎಂದೆ ಆಗುತ್ತದೆ. ಕಾಯುವ ಕರಾಳಪಥದಲ್ಲೆ ನಮ್ಮೊಳಗಿನ ನಿಗೂಢ ಶಕ್ತಿದೌರ್ಬಲ್ಯಗಳ ಅರಿವಾಗುವುದಾದರೂ ಕೂಡ ನಮಗೆ. ಆದ್ದರಿಂದ ಕಾಯುವುದೆಂದರೆ ಮೈ ಮರೆವುದೆಂದಲ್ಲ, ಮೈಯರಿವುದು; ಬುದ್ಧಿನಿದ್ರೆಗದ್ದು ಪ್ರಜ್ಞಾರಹಿತನಾಗುವುದೆಂದೂ ಅಲ್ಲ, ಜಾಗ್ರತಮತಿಯಾಗಿ ಪ್ರಜ್ಞಾವಂತನಾಗಿ ರುವುದು ಎಂದು.

ಭವಕ್ಕಾಗಿ ಕಾಯುವಾಗ ಈ ಎಲ್ಲ ಸೂಕ್ಷ್ಮಾನುಭವ ಆಗುವುದು ವಿರಳ. ಶಿವಕ್ಕಲ್ಲದಿದ್ದರೂ ಪ್ರೀತಿಗಾಗಿ ಕಾಯುವ ಸ್ಥಿತಿಯಲ್ಲಾದರೂ ಇಂಥ ಅನುಭವ ಗಳು ಬಂದಾವು. ಶಿವಕ್ಕಾಗಿಯೆ ಕಾಯುವುದರಿಂದಂತು ವಿಶೇಷಸ್ತರದ ಅನುಭವ ವಾಗುತ್ತದೆ. ಹರಿಹರನ ಗಿರಿಜಾಕಲ್ಯಾಣದಲ್ಲಿ ಹರನಿಗಾಗಿ ಗಿರಿಜೆ ಕಾಯುವಂದು ಪಡುವ ನಾನಾ ಅನುಭವಗಳಲ್ಲಿ, ಬಸವಣ್ಣ ಅಕ್ಕಮಹಾದೇವಿಯರಂಥ ಹಿರಿಯ

ಭಕ್ತರ ವಚನಗಳಲ್ಲಿ ಅಂಥ ಅನುಭವಗಳನ್ನು ಕಾಣುತ್ತೇವೆ. ಆದರೆ ಶಿವದ ನೆಲೆಯಲ್ಲಿದ್ದು ಕೊಂಡೆ ತನ್ನ ಸರದಿಗಾಗಿ ಕಾಯುವುದಂತೂ ಮತ್ತೊಂದು ವಿಲಕ್ಷಣ ವಿಧಾನವೆ ಆದೀತು. ಸತ್ಯವತಿ ಕುಂತಿ ಗಾಂಧಾರಿಯರು ಭವಸಾಫಲ್ಯಕ್ಕೊ-ಪರಿಮಿತಕಾಲದ ತನಕವೂ-ಕಾಯಲಾರದಾದರು. ಕಾರಣ ಸಹಜವಾದರೂ ಅವರು ಸದ್ಯದ ತುರ್ತಿನ ಒತ್ತಡವನ್ನೆ ತಾಳದೆ ಶೀಘ್ರ ಫಲಾಪೇಕ್ಷಿಗಳಾಗಿ ಕಾಯುವುದರಿಂದ ಪಲಾಯನಗೊಳ್ಳುತ್ತಾರೆ. ಆದರೆ ಶಬರಿ ಊರ್ಮಿಳಾ ಮಹಾಶ್ವೇತಾದಿ ಮಹಾಮಾತೆಯರು ಶಿವಕ್ಕಾಗಿ ಅನಿಶ್ಚಿತಕಾಲವೂ ಕಾಯುತ್ತಾರೆ. ಏಕಲವ್ಯನಂತಹ ಅನನ್ಯವ್ಯಕ್ತಿಗಳು ತಮ್ಮನ್ನು ಶಿವಾರ್ಪಣಮಾಡಿಕೊಂಡು ಆ ಶಿವನ ನೆಲೆಯಲ್ಲೆ ಇದ್ದು ಕೊಂಡು ಬಾರದ ತಮ್ಮ ಸರದಿಗಾಗೆ ಕಾಯುತ್ತಾರೆ. ಅಂತಹ ಜೀವ ಆಗ ಪಡೆಯದಿರುವುದು ಏನೂ ಇಲ್ಲ; ಆಮೇಲೆ ಪಡೆಯ ಬೇಕಾದಂಥದೂ ಏನಿಲ್ಲ. ಆದ್ದರಿಂದ ಅದಕ್ಕೆ ಯಾವ ತಲ್ಲಣ ತಳಮಳವೊಂದೂ ಇಲ್ಲ. ಅದೆಲ್ಲ ಇದ್ದುದು ಭಗವಂತನ ಬತ್ತಳಿಕೆ ಸೇರುವ ಮುನ್ನ; ಆಮೇಲೇತಕ್ಕೆ ಆ ಸ್ಥಿತಿ? ಸದಾಶಿವನ ಬೆನ್ನಮೇಲೇ ಇರುವುದಕ್ಕಿಂತ ದಿವ್ಯಾನಂದ ಮತ್ತಾವುದಿದೆ? ಹೆದೆಯೇರಿದ ಮೇಲೆ ಅದು ಯಾವ ಪಾಪಿಯೆದೆಗೆ ತಾಕಿಕೊಳ್ಳಬೇಕೊ? ಆದರೆ ಭವದ ನೆಲೆಯಲ್ಲೆ ಬದುಕಿರುವ ನಮ್ಮನ್ನು-ಸತ್ಯವತಿ, ಕುಂತಿ, ಗಾಂಧಾರಿಯರನ್ನು-ಅದರ ಒತ್ತಡವೆ ಕಾಯುವಿಕೆಯ ತಪಸ್ಸಿನಿಂದಾಚೆಗೆ ಹೊಡೆದಟ್ಟುತ್ತದೆ. ಆದರೆ,ವ್ರತ ಕೆಟ್ಟಾದರು ಸುಖವುಂಟೆ? ತಾತ್ಕಾಲಿಕವಾಗಿ ತೋರುವ ನೆಮ್ಮದಿಯೆ ಮುಂದೆ ಎಷ್ಟೆಲ್ಲ ಸಾಮೂಹಿಕ ಸಂಕೀರ್ಣ ಕ್ಲೇಶವನ್ನು ಕಳಚಿ ಬಿಡುವುದಿಲ್ಲ.

ಮಹಾಭಾರತದ ಆ ಮಹಾತಾಯಂದಿರಾರಾದರೂ ಕಾಯುವ ನೋಂಪಿ ಕೈಗೊಂಡಿದ್ದರೆ! ಆಗ ಅದರ ಗತಿ ಇದೆ ಆಗುತ್ತಿತ್ತೆ? ಅವರೆಲ್ಲ ಎಷ್ಟು ಮಾನವ ಸಹಜವಾಗಿ ವರ್ತಿಸಿದರೊ ಅಷ್ಟೆ ಸಹಜವಾಗಿ ಆ ಕಥೆಯೂ ಸಂಕೀರ್ಣಕ್ಲೇಶವಾಗುತ್ತಾ ಹೋಗುತ್ತದೆ. ಅಂದರೆ ಮಹಾಭಾರತದ ಆ ದುರಂತ ಜಟಿಲತೆಗೆ ಅವರ ಆ ಸಹಜ ವರ್ತನವೂ ಅಷ್ಟೆ ಅವಶ್ಯ.

## ಇತರ ಕೃತಿಗಳು

ಮಂಗಳಾರತಿ (ಕವನ ಸಂಕಲನ)
ನಾಣ್ಯ ಯಾತ್ರೆ ,,
ಪರಂಪರೆ (ವಿಮರ್ಶಾ ಪ್ರಬಂಧಗಳು)
ಏಜಾಕ್ಸ್ (ಅನುವಾದ ನಾಟಕ)
ಕುಮಾರವ್ಯಾಸ (ವಿಮರ್ಶೆಯ ಕಿರುಹೊತ್ತಿಗೆ)
ಭಾರತ ಕಥಾ ಮಂಜರಿ (ಸಂಗ್ರಹ)

## ಬರಲಿವೆ

ಒಂಟೆ ಸೂರಡಿಯಲ್ಲಿ (ಕವನ ಸಂಕಲನ)
ಪು.ತಿ.ನ ಅವರ ಐದು ರೂಪಕಗಳು (ವಿಮರ್ಶೆ)
ಪುನರಾಲೋಕನ ,,